# ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ



ಸಂಶೋಧಕರು
ರವಿ ನಾಯಕ



ಮಾರ್ಗದರ್ಶಕರು
ಡಾ. ಎಸ್.ಸಿ.ಪಾಟೀಲ



ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೧೨

# ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು

**ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ**

ಸಂಶೋಧಕರು
**ರವಿ ನಾಯಕ**

ಮಾರ್ಗದರ್ಶಕರು
**ಡಾ. ಎಸ್.ಸಿ. ಪಾಟೀಲ**
ಪ್ರಾಧ್ಯಾಪಕರು



**ಲಲಿತಕಲಾ ನಿಕಾಯ**
**ದೃಶ್ಯಕಲಾ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ ೫೮೩ ೨೭೬**

**೨೦೧೨**

# ಪ್ರಮಾಣ ಪತ್ರ

**"ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದ ಪ್ರಾಧ್ಯಾಪಕರಾದ **ಡಾ. ಎಸ್.ಸಿ. ಪಾಟೀಲ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ** : ೧೩-೧೨-೨೦೧೨
**ಸ್ಥಳ** : **ವಿದ್ಯಾರಣ್ಯ**

RV Naik
**(ರವಿ ನಾಯಕ)**
ಸಂಶೋಧಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

## ದೃಢೀಕರಣ ಪತ್ರ

**ರವಿ ನಾಯಕ** ಅವರು "**ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು**" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ದಿನಾಂಕ** : 13-12-12
**ಸ್ಥಳ** : **ವಿದ್ಯಾರಣ್ಯ**

**(ಡಾ. ಎಸ್.ಸಿ. ಪಾಟೀಲ)**
ಪ್ರಾಧ್ಯಾಪಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಸ್ವರೂಪ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ವಿಧಾನ

೧.೫. ಶೀರ್ಷಿಕೆ ಸ್ಪಷ್ಟನೆ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ

ಕರ್ನಾಟಕದ ಜನಸಮುದಾಯಗಳಲ್ಲಿ ಆಕರ್ಷಕ ಮತ್ತು ಅನನ್ಯ ಸಮುದಾಯವೆಂದರೆ ಲಂಬಾಣಿ ಸಮುದಾಯ. ಈ ಸಮುದಾಯಕ್ಕೆ ತನ್ನದೇ ಆದ ವಿಶಿಷ್ಟ ಚರಿತ್ರೆ ಇದೆ. ಈ ಚರಿತ್ರೆ ಅವರ ಬೇರೆ ಬೇರೆ ಮೂಲಗಳನ್ನು ಮತ್ತು ನಮ್ಮ ಕಾಲದ ಬದುಕಿನ ಚಿತ್ರವನ್ನು ಕೊಡುತ್ತದೆ. ಲಂಬಾಣಿ ಸಮುದಾಯವನ್ನು ಕುರಿತು ಹಲವು ಅಧ್ಯಯನಗಳು ನಡೆದಿವೆ. ಅವು ಬಹುಪಾಲು ಪರಿಚಯಾತ್ಮಕವಾದವು. ಕರ್ನಾಟಕದ ಲಂಬಾಣಿಗಳನ್ನು ಒಂದೇ ಅಧ್ಯಯನ ಮಾದರಿಯಲ್ಲಿ ಪರಿಚಯಿಸಿದಂತವು. ಆದರೆ ವಾಸ್ತವದಲ್ಲಿ ಕರ್ನಾಟಕದಾದ್ಯಂತ ಹರಡಿರುವ ಲಂಬಾಣಿ ಸಮುದಾಯ ತನ್ನದೇ ಆದ ವಿಶೇಷ ರೀತಿ-ರಿವಾಜು, ನಡೆ-ನುಡಿ, ಆಚಾರ-ವಿಚಾರ, ಸಾಂಪ್ರದಾಯಿಕ ಆಚರಣೆಗಳಲ್ಲಿ ಭಿನ್ನತೆಯನ್ನು ಹೊಂದಿದೆ. ಇತರೆ ನಾಗರಿಕ ಜನಸಮುದಾಯದಿಂದ ಪ್ರತ್ಯೇಕವಾಗಿ ವಾಸಿಸಿರುವ ಈ ಸಮುದಾಯ ತನ್ನದೇ ಆದ ಚೌಕಟ್ಟಿನ ಪರಿಧಿಯಲ್ಲಿ ಬದುಕನ್ನು ಕಟ್ಟಿಕೊಂಡಿದೆ. ಕಾಲ ಗತಿಸಿದಂತೆ ನಾಗರಿಕತೆಯ ಸ್ಪರ್ಶದಿಂದ ಬದುಕಿನ ಹಲವು ರಂಗಗಳಲ್ಲಿ ಸಮುದಾಯದ ಬದಲಾವಣೆಯ ಚಹರೆಗಳು ಗೋಚರಿಸಿದವು. ಅನಕ್ಷರತೆಯ ಅಂಧಕಾರದಲ್ಲಿ ಸಿಲುಕಿರುವ ಲಂಬಾಣಿಗರು ಇತ್ತೀಚೆಗೆ ಶಿಕ್ಷಣದ ಮೂಲಕ ತಮ್ಮ ಪಾರಂಪರಿಕ ಬದುಕಿನ ಆಚೆಗೂ ಯೋಚಿಸುವ ಸಾಮರ್ಥ್ಯವನ್ನು ಪಡೆದುಕೊಂಡಿದ್ದಾರೆ. ಹಾಗಾಗಿ ಉತ್ತರ ಕರ್ನಾಟಕದ ಲಂಬಾಣಿಗಳೂ ಸಹ ಕರ್ನಾಟಕದ ಇತರೆ ಭಾಗಗಳಿಗಿಂತ ಕೆಲವಾದರೂ ಬದಲಾವಣೆಗಳನ್ನು

ಹೊಂದಿದ್ದಾರೆ. ಇಂತಹ ಬದಲಾವಣೆಗಳನ್ನು ಗುರುತಿಸಲು, ಅವುಗಳ ರೂಪ ಮತ್ತು ಸ್ವರೂಪಗಳನ್ನು ಅರಿಯಲು ಅವರ ಕುರಿತು ಅಧ್ಯಯನ ಮಾಡಲಾಗಿದೆ.

ಕರ್ನಾಟಕದಲ್ಲಿ ಲಂಬಾಣಿಗರ ಸಂಸ್ಕೃತಿ ಮತ್ತು ಪರಂಪರೆಯನ್ನು ಬಿಂಬಿಸುವ ಅಧ್ಯಯನಗಳು ನಾಲ್ಕು ಮಾದರಿಯಲ್ಲಿ ನಡೆದಿವೆ. ೧. ಲಂಬಾಣಿಗರ ಬದುಕನ್ನು ಸೃಜನಶೀಲ ಸಾಹಿತ್ಯ ಪ್ರಕಾರದಲ್ಲಿ ತೋರುವುದು. ಬಿ.ಟಿ. ಲಲಿತಾನಾಯಕ್, ಶಾಂತಾ ನಾಯಕ ಶಿರಗಾನಹಳ್ಳಿ, ಸಣ್ಣರಾಮ ಮುಂತಾದವರ ಸೃಜನಶೀಲ ಕೃತಿಗಳನ್ನು ಈ ನೆಲೆಯಲ್ಲಿ ನೋಡಬಹುದು. ೨. ಜಾನಪದ ಅಧ್ಯಯನದ ಮಾದರಿಗಳಲ್ಲಿ ಲಂಬಾಣಿ ಸಮುದಾಯವನ್ನು ಅಧ್ಯಯನ ಮಾಡಿದ್ದಾರೆ. ಡಾ. ಪಿ.ಕೆ. ಖಂಡೋಬ, ಡಾ. ಡಿ.ಬಿ. ನಾಯಕ, ಡಾ. ಹರಿಲಾಲ ಪವಾರ್ ಮುಂತಾದವರ ಅಧ್ಯಯನಗಳನ್ನು ಈ ನೆಲೆಯಲ್ಲಿ ನೋಡಬಹುದು. ೩. ಸಮುದಾಯ ಅಧ್ಯಯನದ ನೆಲೆಯಲ್ಲಿ ಅಧ್ಯಯನ ಮಾಡಿರುವುದನ್ನು ನೋಡಬಹುದು. ೪. ಆಧುನಿಕ ಕಾಲದ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಈ ಸಮುದಾಯದ ಅಧ್ಯಯನ ಮಾಡಿರುವುದನ್ನು ನೋಡಬಹುದು.

ಮೂಲತಃ ಅಲೆಮಾರಿ ಬದುಕಿನಲ್ಲಿ ಸಿಲುಕಿದ ಕರ್ನಾಟಕದ ಲಂಬಾಣಿಗರು, ನಿಸರ್ಗ ಜೀವಿಗಳು. ಬೆಟ್ಟಗುಡ್ಡ, ಅಡವಿ, ಅರಣ್ಯಗಳಲ್ಲಿ ತಮ್ಮ ವಿಶಿಷ್ಟ ಮಾದರಿಯ ಬದುಕನ್ನು ಸಾಗಿಸಿ ಜೀವಿಸುತ್ತಿದ್ದರು. ಹೀಗಾಗಿ ಇವರ ಸಾಂಸ್ಕೃತಿಕ ವಿಚಾರಧಾರೆಗಳು ಭಿನ್ನ ಭಿನ್ನ ಸ್ವರೂಪದವಾಗಿವೆ. ಇತರೆ ಬುಡಕಟ್ಟಿಗಿಂತ ಕಲಾನೈಪುಣ್ಯ ಬದುಕನ್ನು ಲಂಬಾಣಿ ಸಮುದಾಯ ದವರು ಕಟ್ಟಿಕೊಂಡಿದ್ದಾರೆ. ದೇಶಿ ಮತ್ತು ವಿದೇಶಿ ವಿದ್ವಾಂಸರು ಹಾಗೂ ಕಲಾಕಾರರು ಇವರ ಕುರಿತಾಗಿ ಮಹತ್ವದ ಅಧ್ಯಯನಗಳನ್ನು ನಡೆಸಿರುವರು. ಸೂಕ್ಷ್ಮ ಮಾದರಿಯ ಇವರ ಕಸೂತಿ ಕಲೆಗಾರಿಕೆ ದೇವರು ಕೊಟ್ಟ ವರದಂತಿದೆ. ರಕ್ತಗತವಾಗಿ ಈ ಕಲೆ ಇವರಲ್ಲಿ ಒಡಮೂಡಿದೆ. ದೇಶ ವಿದೇಶಗಳಲ್ಲಿ ತಯಾರಿಸುವ ಅನೇಕ ವಸ್ತುಗಳ ಮೇಲೆ ಬಿಡಿಸಿರುವ ಸೂಕ್ಷ್ಮ ಕಸೂತಿ ಕಲೆಗಳಿಗೆ ಮೂಲಪ್ರೇರಣೆ ಲಂಬಾಣಿ ಮಹಿಳೆ ಎಂದರೆ ತಪ್ಪಾಗಲಾರದು. ಆದರೆ ಲಂಬಾಣಿ ಕಲೆಯನ್ನೇ ಪ್ರಧಾನವಾಗಿಟ್ಟುಕೊಂಡು ಮಾಡಿದ ಅಧ್ಯಯನಗಳ ಸಂಖ್ಯೆ ಕಡಿಮೆ. ಆಂಶಿಕವಾಗಿ ಡಾ. ಪಿ.ಕೆ. ಖಂಡೋಬ, ಡಾ. ಡಿ.ಬಿ. ನಾಯಕ, ಡಾ. ಹರಿಲಾಲ ಪವಾರ್ ಹಾಗೂ ವಿದೇಶಿ ವಿದ್ವಾಂಸರಾದ ಎಡ್ಗರ್ ಥರ್ಸ್ಟನ್, ನೋರಾ ಫಿಶರ್, ರೋನಲ್ಡ್ ಎಲ್ ಟ್ರೈಲ್ ಮುಂತಾದವರ ಅಧ್ಯಯನಗಳನ್ನು ಈ ನೆಲೆಯಲ್ಲಿ ನೋಡಬಹುದು.

ವಿದೇಶಿ ವಿದ್ವಾಂಸರ ಕಣ್ಣಿಗೆ ಬೆರಗನ್ನುಂಟು ಮಾಡಿರುವ ಲಂಬಾಣಿ ಸಮುದಾಯದ ಪ್ರತಿಯೊಂದು ಸಾಂಸ್ಕೃತಿಕ ವಿಚಾರಗಳ ಕುರಿತಾಗಿ ತಮ್ಮ ಕೃತಿಯಲ್ಲಿ ಬಿತ್ತರಿಸಿದ್ದಾರೆ. ೧೯೦೯ರಲ್ಲಿ ಪ್ರಕಟವಾದ ಎಡ್ಗರ್ಡ್ ಥರ್ಸ್ಟನ್ ಅವರ 'ಸೌತ್ ಇಂಡಿಯಾ ಟ್ರೈಬ್ಸ್ ಆ್ಯಂಡ್

ಕ್ಯಾಸ್ಟ್' ಕೃತಿಯಲ್ಲಿ ಮಹತ್ವಪೂರ್ಣ ವಿಚಾರಗಳನ್ನು ನೀಡಿದ್ದಾರೆ. ಸಮುದಾಯದ ಆಚರಣೆ, ಒಳಪಂಗಡ ಹಾಗೂ ಉಡುಗೆ ತೊಡುಗೆಗಳ ಬಗೆಗೆ ಸವಿಸ್ತಾರ ವಿಚಾರಗಳನ್ನು ಪ್ರಸ್ತಾಪಿಸಿರುವರು. ಹೀಗಾಗಿ ಲಂಬಾಣಿ ಸಮುದಾಯವನ್ನು ಕಲಾಪ್ರಕಾರದ ಮೂಲಕ ನೋಡುವ ಅಗತ್ಯವಿದೆ. ಹಾಗೆ ನೋಡುವ ಮೂಲಕ ಲಂಬಾಣಿ ಸಮುದಾಯವನ್ನು ಕಲಾಪ್ರಕಾರದ ಮಗ್ಗುಲಿನಿಂದ ನೋಡಿದ ಪ್ರಯತ್ನವಾಗುತ್ತದೆ. ಈ ಸಂಶೋಧನೆ ಅಂತಹ ಪ್ರಯತ್ನವನ್ನು ಮಾಡುತ್ತದೆ. ಲಂಬಾಣಿಗರ ಗುರುತೆಂದರೆ ಅವರ ಉಡುಪು ಮತ್ತು ಆ ಉಡುಪನ್ನು ಒಳಗೊಂಡ ಕಲೆ. ಇಂತಹ ಕಲೆಯ ಮೂಲಕ ಲಂಬಾಣಿ ಸಮುದಾಯವನ್ನು ಅಧ್ಯಯನ ಮಾಡುವ ಅಗತ್ಯವಿದೆ. ಕಲಾಪ್ರಕಾರದ ಮೂಲಕ ಒಂದು ಸಮುದಾಯ ಹೇಗೆ ತನ್ನ ಚಹರೆಯನ್ನು ಉಳಿಸಿಕೊಂಡಿದೆ, ಅದೇ ಕಲೆ ಹೇಗೆ ಅವರ ಬದುಕಿಗೆ ಆಧಾರವಾಗಿದೆ ಮುಂತಾದ ಹುಡುಕಾಟವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ. ಬಡತನದ ಬದುಕಲ್ಲೇ ತಮ್ಮ ಸುಂದರ ಕಲೆಗಾರಿಕೆಯನ್ನು ಅರಳಿಸಿದ ಲಂಬಾಣಿ ಮಹಿಳೆ, ಕಸೂತಿ ಕಲೆಯಲ್ಲಿ ಒಂದು ರೀತಿಯ ನಾವೀನ್ಯತೆಯನ್ನು ತೋರಿಸಿದ್ದಾಳೆ. ಇಂದು ತಯಾರಾಗುತ್ತಿರುವ ಆಧುನಿಕ ಉಡುಗೆ ತೊಡುಗೆಯ ಮೇಲೆ ಲಂಬಾಣಿ ಕಸೂತಿ ಕಲೆ ಇಂದು ಮಹತ್ವದ ಪಾತ್ರ ವಹಿಸುತ್ತಿದೆ. ಅಲ್ಲದೇ ಈ ಸಮುದಾಯದ ಮಹಿಳೆಯರು ತೊಡುವ ತೊಡುಗೆಗಳು ಮಹತ್ತರವಾಗಿವೆ. ಅಡಿಯಿಂದ ಮುಡಿಯವರೆಗೆ ಅನೇಕ ಮಾದರಿಯ ತೊಡುಗೆಯನ್ನು ಇವರು ಧರಿಸಿರುವರು. ಕಡುಬಡತನದ ಬದುಕಿನಲ್ಲಿರುವ ಇವರಿಗೆ 'ಜರ್ಮನ್ ಸಿಲ್ವರ್' ಬೆಳ್ಳಿ ಬಂಗಾರವಾಗಿದೆ.

ಗ್ರಾಹಕರಿಗೆ ಆಕರ್ಷಕವಾಗಿ ಕಾಣುವಂತೆ ಉಡುವ ಬಟ್ಟೆ, ತೊಡುವ ತೊಡುಗೆ, ಬ್ಯಾಗು ಮುಂತಾದ ಪರಿಕರಗಳ ಮೇಲೆ ಕಸೂತಿ ಕಲೆಯ ನಾವೀನ್ಯತೆಯ ಸೊಬಗನ್ನು ಕಾಣಬಹುದಾಗಿದೆ. ಅನೇಕ ಕರಕುಶಲ ಕೇಂದ್ರಗಳು ಲಂಬಾಣಿ ಮಹಿಳೆಯರಿಗೆ ಉದ್ಯೋಗವನ್ನು ಸಹ ನೀಡಿವೆ. ಇಂತಹ ಅಗತ್ಯಗಳನ್ನು ಮನಗಂಡು ಈ ಸಮುದಾಯದ ಕಲಾಮಾಧ್ಯಮವನ್ನು ಅಧ್ಯಯನ ಮಾಡಲಾಗಿದೆ.

### ೧.೧. ಅಧ್ಯಯನದ ಉದ್ದೇಶ

೧. ಲಂಬಾಣಿ ಸಮುದಾಯದಲ್ಲಿ ಇಂದಿಗೂ ಉಳಿದುಕೊಂಡಿರುವ ಕಸೂತಿ ಕಲೆಯ ವಿವಿಧ ಮಾದರಿಯ ಕಲಾಮಾಧ್ಯಮವನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಈ ಕಲೆ ಯಾವ ಯಾವ ಪ್ರದೇಶದಲ್ಲಿ ಯಾವ ತೆರನಾಗಿ ಉಳಿದುಕೊಂಡಿದೆ ಎನ್ನುವುದನ್ನು ಪರಿಶೀಲಿಸಲಾಗಿದೆ.

೨. ಲಂಬಾಣಿ ಕಲೆಯಲ್ಲಿ ವಿಶೇಷವಾಗಿ ಮಹಿಳೆಯರೇ ಹೆಚ್ಚು ಭಾಗಿಯಾಗುವುದರ ಹಿನ್ನೆಲೆಯನ್ನು ಹುಡುಕಿ, ಅದು ಇಂದು ಯಾವ ರೀತಿಯಲ್ಲಿ ಮುಂದುವರೆಯುತ್ತಿದೆ ಎಂಬುದರ ಬಗೆಗೆ ಅಧ್ಯಯನದಲ್ಲಿ ನಿರೂಪಿಸಲಾಗಿದೆ.

೩. ಲಂಬಾಣಿ ಕಲೆಯಲ್ಲಿ ಪ್ರಾದೇಶಿಕ ವಿಶಿಷ್ಟತೆಯನ್ನು ಗುರುತಿಸಿ, ಅವುಗಳ ಭಿನ್ನ ಮಾದರಿಯ ಸ್ವರೂಪವನ್ನು ಅಧ್ಯಯನದಲ್ಲಿ ಹುಡುಕಲಾಗಿದೆ.

೪. ಕರ್ನಾಟಕದ ಲಂಬಾಣಿಗರ ಜನಜೀವನದ ಪದ್ಧತಿಯು ಅವರ ಕಲೆಯ ಭಾಗವಾಗಿ ಹೇಗೆ ಅಭಿವ್ಯಕ್ತಿಯಾಗಿದೆ ಎನ್ನುವುದನ್ನು ಶೋಧಿಸಲಾಗಿದೆ.

೫. ಕಲಾಪ್ರಕಾರಗಳ ಅಧ್ಯಯನ ವಿಧಾನದಿಂದ ಲಂಬಾಣಿ ಕಲೆಯನ್ನು ಅಧ್ಯಯನ ಮಾಡುವುದೋ ಅಥವಾ ಲಂಬಾಣಿ ಕಲಾಪ್ರಕಾರವನ್ನು ಅಧ್ಯಯನ ಮಾಡುವ ಕಾರಣಕ್ಕೆ ಬೇರೆ ಬಗೆಯ ಅಧ್ಯಯನದ ವಿಧಾನವನ್ನು ಇಲ್ಲಿ ಚರ್ಚಿಸಲಾಗಿದೆ.

೬. ಕರ್ನಾಟಕದಲ್ಲಿರುವ ಲಂಬಾಣಿ ಕರಕುಶಲ ಕೇಂದ್ರಗಳು ಈ ಸಮುದಾಯದ ಕಲೆಯನ್ನು ಹೇಗೆ ಉಳಿಸುತ್ತಿವೆ ಮತ್ತು ಅವುಗಳಿಂದ ಕಲಾಪ್ರಕಾರವನ್ನು ಹೇಗೆ ಬದಲಾಯಿಸಿಕೊಂಡಿವೆ ಎಂಬುದನ್ನು ಚರ್ಚಿಸುವುದು. ಅಂತೆಯೇ, ಈ ಕರಕುಶಲ ಕೇಂದ್ರಗಳಿಗೆ ಹೋಗುವ ಲಂಬಾಣಿ ಮಹಿಳೆಯರ ಬದುಕಿನಲ್ಲಿ ಆದ ಬದಲಾವಣೆಗಳು ಯಾವುವು? ಈ ಬದಲಾವಣೆ ಋಣಾತ್ಮಕವಾಗಿವೆಯೋ ಅಥವಾ ಧನಾತ್ಮಕವಾಗಿವೆಯೋ ಎಂಬುದನ್ನು ಅಧ್ಯಯನದಲ್ಲಿ ನಿರೂಪಿಸಲಾಗಿದೆ.

೭. ಈ ಅಧ್ಯಯನಕ್ಕಾಗಿ ಮೂರು ಲಂಬಾಣಿ ಕರಕುಶಲ ಕೇಂದ್ರಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಮೊದಲನೆಯದಾಗಿ 'ಸಂಡೂರು ಕರಕುಶಲ ಕಲಾಕೇಂದ್ರ', ಎರಡನೆಯದು ಬಿಜಾಪುರದ 'ಸಬಲಾ' ಹಾಗೂ ಮೂರನೆಯದಾಗಿ ಹೊಸಪೇಟೆ ತಾಲ್ಲೂಕಿನ ಕಡ್ಡಿರಾಂಪುರದ "Surya Lambhani Banjara Women Welfare Trust" ಕೇಂದ್ರವನ್ನು ಆಯ್ದುಕೊಳ್ಳಲಾಗಿದೆ. ಈ ಮೂರು ಕರಕುಶಲ ಕೇಂದ್ರಗಳ ಹಿನ್ನೆಲೆಯಲ್ಲಿ ಲಂಬಾಣಿ ಕಲಾಪ್ರಕಾರ ಹೇಗೆ ಮುಂದುವರಿಯುತ್ತಿದೆ ಎನ್ನುವುದನ್ನು ಬಹುಮುಖಿಯಾಗಿ ಹುಡುಕಲಾಗಿದೆ. ಈ ಕೇಂದ್ರಗಳು ಲಂಬಾಣಿಗರ ಕಸೂತಿ ಕಲೆಯನ್ನು ಮಾದರಿಯಾಗಿಟ್ಟುಕೊಂಡು ಹಲವು ಪ್ರಕಾರದ ಬಟ್ಟೆಗಳ ಮೇಲೆ ಕಸೂತಿಗಳನ್ನು ಹೆಣೆದು ದೇಶ ವಿದೇಶಗಳಲ್ಲಿ ಮಾರುತ್ತಿವೆ. ಇವುಗಳ ಮೂಲಕ ಕೇಂದ್ರದ ಅಭಿವೃದ್ಧಿಯ ಕುರಿತು ಮಾಹಿತಿಯನ್ನು ನೀಡಲಾಗಿದೆ. ಅಲ್ಲದೇ ಅಲ್ಲಿಯ ಮಹಿಳೆಯರ ಸ್ಥಿತಿಗತಿಯನ್ನು ಅರಿಯುವುದಾಗಿದೆ.

೮. ಕರ್ನಾಟಕದಲ್ಲಿ ಎಲ್ಲಾ ಬಗೆಯ ಬುಡಕಟ್ಟುಗಳು ಅನುಭವಿಸುತ್ತಿರುವ ಅನಾಥಪ್ರಜ್ಞೆಯನ್ನು ಈ ಬುಡಕಟ್ಟು ಹೇಗೆ ನಿರ್ವಹಿಸುತ್ತಿದೆ ಎಂಬುದನ್ನು ತಿಳಿಯುವುದು. ಹಾಗೆಯೇ ಲಂಬಾಣಿ ಬುಡಕಟ್ಟಿನ ಕಲಾಪ್ರಕಾರ ಹೇಗೆ ಅವರ ಆರ್ಥಿಕ ಮೂಲಕ್ಕೆ ಕಾರಣವಾಗಿದೆ ಎಂಬುದರ ಬಗ್ಗೆ ಪರಿಶೀಲಿಸಲಾಗಿದೆ.

೯. ಕರ್ನಾಟಕದ ಲಂಬಾಣಿಗರಲ್ಲಿ ಕಲಾಪ್ರಕಾರದಲ್ಲಿರುವ ಭಿನ್ನತೆಗಳನ್ನು ಪರಿಶೀಲಿಸುವುದು. ಹಾಗೆಯೇ ಈ ಭಿನ್ನತೆ ಏಕೆ ಇವರಲ್ಲಿದೆ ಎನ್ನುವ ಬಗ್ಗೆ ಪರಿಶೀಲಿಸುವುದು. ಜೊತೆಗೆ ಲಂಬಾಣಿಗರ ಅಧ್ಯಯನಗಳು ಒಂದೇ ಮಾದರಿಯನ್ನು ಒತ್ತಿ ಹೇಳಿದ್ದರ ಪರಿಣಾಮ ಲಂಬಾಣಿ ಕಲೆಗಳಲ್ಲಿ ಇರುವ ಭಿನ್ನತೆಗಳು ಹೇಗೆ ಗೌಣವಾಗಿವೆ ಎಂದು ಅಧ್ಯಯನದಲ್ಲಿ ಹುಡುಕಲಾಗಿದೆ.

೧೦. ಕರ್ನಾಟಕದಲ್ಲಿ ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮವು ಸ್ಥಾಪನೆಯಾಗಿದೆ. ಅಂತೆಯೇ ಕರ್ನಾಟಕದಾದ್ಯಂತ ಬಂಜಾರ ಯುವಕರ ಸಂಘಗಳು, ಮಹಿಳಾ ಸಂಘಗಳು ತಲೆ ಎತ್ತಿವೆ. ಇವುಗಳ ನೆಲೆಯಲ್ಲಿ ಕರ್ನಾಟಕದ ಲಂಬಾಣಿ ಕಲೆಯನ್ನು ಹೇಗೆ ನೋಡಲಾಗಿದೆ ಎನ್ನುವುದನ್ನು ಈ ಅಧ್ಯಯನದ ಮೂಲಕ ಹುಡುಕಲಾಗಿದೆ.

೧೧. ಲಂಬಾಣಿ ಸಮುದಾಯವನ್ನು ಒಳಗೊಂಡಂತೆ ಇತರೆ ಕೆಳಸಮುದಾಯಗಳು ಬುಡಕಟ್ಟುಗಳು ಜಾಗತೀಕರಣದ ಸುನಾಮಿ ಹೊಡೆತಕ್ಕೆ ಸಿಕ್ಕು ನಲುಗುತ್ತಿವೆ. ಹಾಗಾಗಿ ಸಮುದಾಯಗಳ ಆಚರಣಾಲೋಕ, ಅವರ ಕಲಾಲೋಕ ಕಣ್ಮರೆಯಾಗುತ್ತಿದೆ. ಈ ಎಲ್ಲಾ ಸಂಗತಿಗಳನ್ನು ಗಮನಿಸಿ ಇದರಲ್ಲಿ ಕರ್ನಾಟಕದ ಲಂಬಾಣಿ ಸಮುದಾಯ ಇದನ್ನು ಹೇಗೆ ಎದುರಿಸುತ್ತಿದೆ ಎನ್ನುವುದನ್ನೂ ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

೧೨. ಈಚೆಗೆ ಲಂಬಾಣಿ ಸಮುದಾಯದಲ್ಲಿಯೂ ಹೆಚ್ಚು ಕಡಿಮೆ ಮೇಲು ಕೀಳು ತರಹದ ಭೇದವು ಹೆಚ್ಚಾಗಿದೆ. ನಗರದ ಲಂಬಾಣಿಗರು, ತಾಂಡಾದ ಲಂಬಾಣಿಗರು, ಓದಿದವರು, ಓದದವರು, ಕೂಲಿಕಾರರು, ನೌಕರರು ಎನ್ನುವ ತಾರತಮ್ಯ ಎದ್ದು ಕಾಣುತ್ತಿದೆ. ಇದರ ಸ್ವರೂಪದಿಂದ ಲಂಬಾಣಿ ಸಮುದಾಯಕ್ಕೆ ಆದ ಲಾಭಗಳೇನು? ಅಂತೆಯೇ ನಷ್ಟಗಳೇನು ಎನ್ನುವುದನ್ನು ಕೂಡ ಪರಿಶೀಲನೆ ಮಾಡಲಾಗಿದೆ.

ಕರ್ನಾಟಕದ ಹಲವು ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಆಚರಣಾತ್ಮಕ ನೆಲೆಯಲ್ಲಿ ಬದುಕುತ್ತಿವೆ. ಉಡುಗೆ ತೊಡುಗೆಗಳಂತಹ ಸಾಂಸ್ಕೃತಿಕ ಮಾದರಿಯಲ್ಲೂ ವಿಭಿನ್ನತೆಯನ್ನು ಕಾಣಲು ಸಾಧ್ಯತೆಗಳಿವೆ. ಅದರಲ್ಲೂ ಲಂಬಾಣಿಗರ ಉಡುಗೆ ತೊಡುಗೆಯ ಪ್ರತಿಯೊಂದು ಸೂಕ್ಷ್ಮತೆಗಳನ್ನು ಎಳೆ ಎಳೆಯಾಗಿ ಬಿಚ್ಚಿ ಪರಿಚಯಿಸುವುದು ಈ ಅಧ್ಯಯನದ ಮಹತ್ವವಾಗಿದೆ.

ಪಾರಂಪರಿಕವಾಗಿ ಕಟ್ಟಿಕೊಂಡು ಬಂದಿರುವ ಕೆಲವೊಂದು ರೀತಿ ರಿವಾಜುಗಳು ಈ ಸಮುದಾಯದಲ್ಲಿ ಬದಲಾಗುತ್ತಿವೆ. ಹೀಗಾಗಿ ಮೂಲ ಉಡುಗೆಯ ಕಸೂತಿಕಲೆಯ ಜೊತೆ ಜೊತೆಗೆ ವಿಭಿನ್ನವಾಗಿ ಹೆಣೆಯಲಾಗಿದೆ. ಅದಲ್ಲದೇ ತೊಡುಗೆ ಕುರಿತು ಸಹ ಇಲ್ಲಿ ಅಧ್ಯಯನ ನಡೆಸಲಾಗಿದೆ. ಜರ್ಮನ್ ಸಿಲ್ವರ್‌ನಿಂದಲೇ ತಯಾರಿಸಿದ ವಿವಿಧ ಮಾದರಿಯ ತೊಡುಗೆಯ ಆಭರಣಗಳನ್ನು ಮೈಮೇಲೆ ಹಾಕಿಕೊಳ್ಳುವರು. ಬಿಜಾಪುರ, ಗುಲ್ಬರ್ಗಾ, ಕೊಪ್ಪಳ, ಗದಗ ಹಾಗೂ ಬಳ್ಳಾರಿ ಜಿಲ್ಲೆಯಾದ್ಯಂತ ಕ್ಷೇತ್ರಕಾರ್ಯದ ಮೂಲಕ ಮಹತ್ವ ವಿಚಾರಗಳನ್ನು ಅಧ್ಯಯನದಲ್ಲಿ ಸಂಗ್ರಹಿಸಲಾಗಿದೆ.

ಸೂಕ್ಷ್ಮ ಮಾದರಿಯ ಕಲೆಗಾರಿಕೆಯ ಇವರ ಉಡುಗೆಗಳಿಗೆ ಸಿಂಪಿಗನ ಕೆಲಸ ಸ್ವಲ್ಪ ಮಟ್ಟಿಗಿದ್ದರೂ ಸ್ವತಃ ತಾವೇ ಅವುಗಳಿಗೆಲ್ಲ ಚಿಕ್ಕ ಚಿಕ್ಕ ಕನ್ನಡಿಗಳನ್ನು ಸೇರಿಸಿ ಕಸೂತಿ ಹಾಕುವರು. ಈ ಉಡುಗೆಯಲ್ಲಿ ಕಲೆಯ ಜೊತೆಗೆ ಕಠಿಣತೆಯೂ ಇರುವುದನ್ನು ಗಮನಿಸಬಹುದಾಗಿದೆ. ಜೊತೆಗೆ ಮೈಗೆ ಹಾಕಿಕೊಳ್ಳುವ ಬೆಳ್ಳಿಯ ಕಡಗದಂತಹ 'ಹಾಂಸಲಿ'(ಕೊರಳ ಹಾರ), ಘುಗ್ರಿ, ಚೋಟ್ಲಾ(ಕೂದಲಿಗೆ ಸೇರಿಸಿ ಹೆಣೆದಿರುವರು), ಟೋಪ್ಲಿ, ಬೆಳ್ಳಿ ಹಾಗೂ ಹಿತ್ತಾಳೆಯ ಕೈ, ಕಾಲಿನ ಉಂಗುರಗಳು ಕೊಲ್ಡಾ(ಕಡಗ), ಕಸ್ಸೆ, ಮಾಟ್ಲಿ, ವಾಂಕಡೀ, ವಿಂಚುವಾ ಮುಂತಾದ ಆಭರಣಗಳನ್ನು ಹಾಕಿಕೊಳ್ಳುವರು. ಹೀಗೆ ಈ ಸಮುದಾಯದ ಉಡುಗೆ ತೊಡುಗೆಯ ಮೂಲ ಮಾದರಿಯನ್ನು ಅನುಸರಿಸಿ ಹಲವು ರೀತಿಯಲ್ಲಿ ಆಧುನಿಕ ಉಡುಗೆ, ಆಭರಣಗಳು ತಯಾರಾಗುತ್ತಿವೆ. ಆಧುನಿಕ ಮನಸ್ಸನ್ನು ಇವರ ಉಡುಗೆ ತೊಡುಗೆಗಳು ಹೆಚ್ಚು ಆಕರ್ಷಿಸುತ್ತಿವೆ.

ಕರಕುಶಲ ಕೇಂದ್ರಗಳಾದ ಸಂಡೂರು ಕುಶಲ ಕಲಾಕೇಂದ್ರ, 'ಸಬಲಾ' ಬಿಜಾಪುರ, ಹೊಸಪೇಟೆಯ ತಾಲೂಕಿನ ಸೂರ್ಯ ಲಂಬಾಣಿ-ಬಂಜಾರಾ ಮಹಿಳಾ ಕಲ್ಯಾಣ ಸಂಸ್ಥೆ, ಕಡ್ಡಿರಾಮಪುರ-ಹೀಗೆ ಮುಂತಾದ ಕಡೆ ಕೇಂದ್ರಗಳು ಲಂಬಾಣಿಗರ ಕಸೂತಿಕಲೆಯ ಕುರಿತಾಗಿ ಮಹತ್ವದ ಕಾರ್ಯ ಮಾಡುತ್ತಿವೆ. ಅವುಗಳ ಕುರಿತಾಗಿ ವಿಸ್ತೃತ ಅಧ್ಯಯನ ಮಾಡಲಾಗಿದೆ. ಪಾರಂಪರಿಕವಾಗಿ ಬಂದಿರುವ ಹಚ್ಚೆಯ ಕುರಿತು ಅನೇಕ ರೀತಿಯ ಅಂಶಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ತಮ್ಮ ದೇಹದ ಅನೇಕ ಭಾಗದ ಕಡೆ ವಿಶಿಷ್ಟವಾಗಿ ಕಂಡುಬರುವ ಹಚ್ಚೆಯ ಮಾದರಿಯ ಕುರಿತು ಮಹತ್ವದ ಅಧ್ಯಯನ ಇಲ್ಲಿ ಕೈಗೊಳ್ಳಲಾಗಿದೆ. ಈ ಅಧ್ಯಯನಕ್ಕೆ ಇದರದ್ದೇ ಆದ ಪಾರಂಪರಿಕ ಮಹತ್ವವಿದೆ. ಇಲ್ಲಿ ಒಂದು ಸಮುದಾಯವನ್ನು ಅದರ ಕಲೆಯ ಮೂಲಕ ನೋಡುವ ಕಾರಣಕ್ಕೂ ಈ ಅಧ್ಯಯನಕ್ಕೆ ಮಹತ್ವವಿದೆ. ಅಂತೆಯೇ ಈ ತನಕ ನಡೆದ ಬಂಜಾರ(ಲಂಬಾಣಿ), ಅಧ್ಯಯನಗಳ ಮಿತಿ ಹಾಗೂ ಗುಣಗಳನ್ನು ಕೂಡ ನೋಡಲಾಗಿದೆ. ಜೊತೆಗೆ ಜಾಗತೀಕರಣದ ಈ ಹೊತ್ತಲ್ಲಿ ಈ

ಸಮುದಾಯ ಹೇಗೆ ತನ್ನ ಕರಕುಶಲ ಕಲೆಯ ಮೂಲಕವೇ ಬದುಕುತ್ತಿದೆ ಮತ್ತು ಈ ಕಲೆಯನ್ನು ನಂಬಿ ಬದುಕುವ ಜನರ ಬದುಕು ಹೇಗಿದೆ? ಮುಂತಾದ ಪ್ರಶ್ನೆಗಳನ್ನು ಮುಂದು ಮಾಡಿಕೊಂಡು ಅಧ್ಯಯನ ಮಾಡುವ ಕಾರಣಕ್ಕೂ ಈ ಅಧ್ಯಯನ ಮಹತ್ವವನ್ನು ಪಡೆದಿದೆ.

## ೧.೨. ಅಧ್ಯಯನದ ಸ್ವರೂಪ

ಈ ಅಧ್ಯಯನವು ಅಧ್ಯಯನದ ಸ್ವರೂಪ ಮತ್ತು ಅಧ್ಯಯನದ ಫಲಿತಗಳನ್ನು ಒಳಗೊಂಡಂತೆ ಎಂಟು ಅಧ್ಯಾಯಗಳನ್ನು ಒಳಗೊಂಡಿದೆ.

**ಅಧ್ಯಾಯ ಒಂದು** ಅಧ್ಯಯನದ ತಾತ್ವಿಕ ಸ್ವರೂಪವನ್ನು ಒಳಗೊಂಡಿದೆ. ಮೊದಲನೆಯದಾಗಿ ಅಧ್ಯಯನದ ಉದ್ದೇಶ ಮತ್ತು ಮಹತ್ವವನ್ನು ವಿವರಿಸಲಾಗಿದೆ. ಎರಡನೆಯದಾಗಿ ಅಧ್ಯಯನದ ವಿಧಾನ ಮತ್ತು ವ್ಯಾಪ್ತಿಯನ್ನು ವಿವರಿಸಿಕೊಳ್ಳಲಾಗಿದೆ. ಮೂರನೆಯದಾಗಿ ಪರಿಕಲ್ಪನಾತ್ಮಕ ಚರ್ಚೆಯನ್ನು ಮಾಡಲಾಗಿದೆ. ನಾಲ್ಕನೆಯದಾಗಿ ಅಧ್ಯಯನದ ಸ್ವರೂಪವನ್ನು ವಿವರಿಸಲಾಗಿದೆ.

**ಅಧ್ಯಾಯ ಎರಡರಲ್ಲಿ** ಲಂಬಾಣಿ ಸಮುದಾಯದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಇದರಲ್ಲಿ ಲಂಬಾಣಿ ಸಮುದಾಯದ ಐತಿಹಾಸಿಕ ಹಿನ್ನೆಲೆ, ಐತಿಹ್ಯಗಳಲ್ಲಿ ಲಂಬಾಣಿ ಸಮುದಾಯದ ಚಿತ್ರಣ, ಪುರಾಣಗಳಲ್ಲಿ ಲಂಬಾಣಿ ಸಮುದಾಯದ ಚಿತ್ರಣ, ಕಾವ್ಯಗಳಲ್ಲಿ ಲಂಬಾಣಿ ಸಮುದಾಯದ ಚಿತ್ರಣವನ್ನು ಸ್ಥೂಲವಾಗಿ ಗುರುತಿಸಲಾಗಿದೆ.

**ಅಧ್ಯಾಯ ಮೂರರಲ್ಲಿ** ಲಂಬಾಣಿ ಸಮುದಾಯದ ಕರಕುಶಲ ಕಲೆಗಳ ಬಗ್ಗೆ ಗಮನ ಹರಿಸಲಾಗಿದೆ. ಇದರಲ್ಲಿ ಬಟ್ಟೆ ಮಾಧ್ಯಮದ ಕರಕುಶಲ ಕಲೆ, ಲೋಹ ಮಾಧ್ಯಮದ ಕರಕುಶಲ ಕಲೆ, ಚರ್ಮ ಮಾಧ್ಯಮದ ಕರಕುಶಲ ಕಲೆ, ಸಂಕೀರ್ಣ ಮಾಧ್ಯಮದ ಕರಕುಶಲ ಕಲೆಗಳ ಬಗ್ಗೆ ಸವಿಸ್ತಾರವಾದ ಚರ್ಚೆ ಮಾಡಲಾಗಿದೆ.

**ಅಧ್ಯಾಯ ನಾಲ್ಕರಲ್ಲಿ** ಲಂಬಾಣಿ ಸಮುದಾಯದ ಅವರದೇ ಆದ ಕಸೂತಿಕಲೆಯನ್ನು ಅಭಿವೃದ್ಧಿಪಡಿಸಲು ೧. 'ಸಂಡೂರು ಕುಶಲ ಕಲಾಕೇಂದ್ರ', ೨. ಬಿಜಾಪುರದ 'ಸಬಲಾ', ೩. ಸೂರ್ಯ ಲಂಬಾಣಿ ಬಂಜಾರ ಮಹಿಳಾ ಕಲ್ಯಾಣ ಸಂಸ್ಥೆ ಕಡ್ಡಿರಾಂಪುರ ಕಸೂತಿಕೇಂದ್ರ ಮುಂತಾದ ಸರ್ಕಾರೇತರ ಕಲಾಕೇಂದ್ರಗಳನ್ನು ಕುರಿತು ಸ್ಥೂಲವಾಗಿ ಅಧ್ಯಯನದ ಚಿತ್ರವನ್ನು ಈ ಅಧ್ಯಯನದಲ್ಲಿ ಕೊಡಲಾಗಿದೆ.

**ಅಧ್ಯಾಯ ಐದರಲ್ಲಿ** ಲಂಬಾಣಿ ಸಮುದಾಯ ಮತ್ತು ಜಾಗತೀಕರಣದ ಪ್ರಭಾವವನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಲಂಬಾಣಿಗರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

**ಅಧ್ಯಾಯ ಆರರಲ್ಲಿ** ಅಧ್ಯಯನದ ಫಲಿತಗಳನ್ನು ದಾಖಲಿಸಲು ಪ್ರಯತ್ನಿಸಲಾಗಿದೆ. ಅಧ್ಯಯನದ ಫಲಿತಗಳನ್ನು ಪಟ್ಟಿ ಮಾಡಲಾಗಿದೆ. ಅಂತೆಯೇ ಅಧ್ಯಯನದ ಸಾಧ್ಯತೆಗಳನ್ನು ಪಟ್ಟಿ ಮಾಡಲಾಗಿದೆ. ಇದು ಮುಂದಿನ ಅಧ್ಯಯನಕಾರರಿಗೆ ಅನುಕೂಲವಾಗುವುದರಲ್ಲಿ ಸಂಶಯವಿಲ್ಲ.

### ೧.೩. ಅಧ್ಯಯನದ ವ್ಯಾಪ್ತಿ

ಈ ಪ್ರಬಂಧದ ಶೀರ್ಷಿಕೆ ಕರ್ನಾಟಕದ ಲಂಬಾಣಿ ಸಮುದಾಯದ ಕರಕುಶಲ ಕಲೆ ಎಂದು ಇದೆಯಾದರೂ, ಕ್ಷೇತ್ರಕಾರ್ಯಕ್ಕೆ ಉತ್ತರ ಕರ್ನಾಟಕದ ಜಿಲ್ಲೆಗಳನ್ನು ಪ್ರಧಾನವಾಗಿ ಪರಿಗಣಿಸಲಾಗಿದೆ. ಬಳ್ಳಾರಿ, ಗದಗ, ಕೊಪ್ಪಳ, ದಾವಣಗೆರೆ, ಶಿವಮೊಗ್ಗ, ರಾಯಚೂರು, ಗುಲ್ಬರ್ಗಾ, ವಿಜಾಪುರ ಜಿಲ್ಲೆಯನ್ನು ಪ್ರಧಾನವಾಗಿ ಅನುಲಕ್ಷಿಸಲಾಗಿದೆ. ಈ ಆರು ಜಿಲ್ಲೆಗಳ ಲಂಬಾಣಿ ಸಮುದಾಯದ ಕರಕುಶಲ ಕಲೆಗಳನ್ನು ದಾಖಲಿಸುವ ಮೂಲಕ ಕರ್ನಾಟಕದ ಲಂಬಾಣಿ ಸಮುದಾಯದ ಕರಕುಶಲಕಲೆಯ ಬಗ್ಗೆ ವಿಸ್ತೃತ ಚರ್ಚೆಯನ್ನು ಮಾಡಲಾಗಿದೆ.

ಈ ಅಧ್ಯಯನದಲ್ಲಿ ಲಂಬಾಣಿ ಸಮುದಾಯದ ಕರಕುಶಲ ಕಲೆಯನ್ನು ಪ್ರಧಾನವಾಗಿ ಅಧ್ಯಯನ ಮಾಡುವ ಕಾರಣಕ್ಕೆ ಮುಖ್ಯವಾಗಿ ಲಂಬಾಣಿ ಮಹಿಳೆಯರನ್ನು ಆಧರಿಸಿದೆ. ಹಾಗಾಗಿ ವಿಶಾಲವಾಗಿ ಲಂಬಾಣಿ ಸಮುದಾಯದ ಕರಕುಶಲ ಕಲೆ ಎಂದರೂ ಮುಖ್ಯವಾಗಿ ಲಂಬಾಣಿ ಮಹಿಳೆಯರ ಕರಕುಶಲ ಕಲೆ ಎಂದೇ ನೋಡಬಹುದಾಗಿದೆ. ಈ ಬಗೆಯ ನೋಡುವಿಕೆಯನ್ನು ಈ ಅಧ್ಯಯನವು ಒಳಗೊಂಡಿದೆ. ಇದು ಈ ಅಧ್ಯಯನದ ವ್ಯಾಪ್ತಿಯೂ ಆಗಿದೆ.

ಇಲ್ಲಿ ಲಂಬಾಣಿ ಸಮುದಾಯವನ್ನು ಒಟ್ಟಾರೆಯಾಗಿ ಅಧ್ಯಯನ ಕೈಗೊಂಡಿರುವುದರಿಂದ ಈ ಅಧ್ಯಯನದಲ್ಲಿ ಕಾಲಘಟ್ಟವನ್ನು ವ್ಯಾಪ್ತಿಯನ್ನಾಗಿ ಬಳಸಿಕೊಂಡಿಲ್ಲ. ಬದಲಾಗಿ ಈಚಿನ ಒಂದು ದಶಕದಲ್ಲಾದ ಬದಲಾವಣೆಯನ್ನು ಪ್ರಧಾನವಾಗಿ ಅನುಲಕ್ಷಿಸಲಾಗಿದೆ. ಅಂದರೆ ಲಂಬಾಣಿ ಸಮುದಾಯದ ಕರಕುಶಲ ಕಲೆಗಳನ್ನು ಒಳಗೊಳ್ಳುತ್ತಲೇ, ಈ ಕಲಾಮಾಧ್ಯಮ ಇತ್ತೀಚೀನ ದಿನಮಾನಗಳಲ್ಲಿ ಆದ ಮುಖ್ಯ ಬದಲಾವಣೆಗಳನ್ನು ಗಮನಿಸಲಾಗಿದೆ. ಇಲ್ಲಿ ಬಳಸಿಕೊಳ್ಳಲಾದ ಅಂಕಿಅಂಶಗಳು ಕೂಡ ಹೆಚ್ಚಾಗಿ ಈ ದಶಕದ್ದು. ಹಾಗಾಗಿ ಇದು ಕೂಡ ಅಧ್ಯಯನದ ವ್ಯಾಪ್ತಿ ಎಂದು ಪರಿಗಣಿಸಲಾಗಿದೆ.

### ೧.೪. ಅಧ್ಯಯನದ ವಿಧಾನ

೧. ಮುಖ್ಯವಾಗಿ ಈ ಅಧ್ಯಯನ ಕ್ಷೇತ್ರಕಾರ್ಯವನ್ನು ಆಧರಿಸಿದೆ. ಇಲ್ಲಿ ಆಯ್ದುಕೊಂಡ ಸಂಡೂರು ಕರಕುಶಲ ಕೇಂದ್ರದ ಕಾರ್ಯವೈಖರಿಯನ್ನು, ಬಿಜಾಪುರದ ಸಬಲಾ

ಕೇಂದ್ರದ ಕಾರ್ಯ ವೈಖರಿಯನ್ನು ಮತ್ತು ಸೂರ್ಯ ಲಂಬಾಣಿ-ಬಂಜಾರ ಮಹಿಳಾ ಕಲ್ಯಾಣ ಸಂಸ್ಥೆ, ಕಡ್ಡಿರಾಂಪುರ ಕೇಂದ್ರದ ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ, ಅಲ್ಲಿನ ಕಲಾವಿದರನ್ನು, ಆಯಾ ಕೇಂದ್ರಗಳ ಆಡಳಿತ ಮಂಡಳಿಯ ಮುಖ್ಯಸ್ಥರನ್ನು ಸಂದರ್ಶನ ಮಾಡಿ ಮಾಹಿತಿಗಳನ್ನು ಕಲೆಹಾಕಲಾಗಿದೆ. ಅಂತೆಯೇ ಇದಕ್ಕೆ ಸಂಬಂಧಿಸಿದಂತೆ ವಿದ್ವಾಂಸರನ್ನೂ, ಸಮುದಾಯದ ಹಿರಿಯರನ್ನೂ ಸಂದರ್ಶನ ಮಾಡಲಾಗಿದೆ. ಹಾಗಾಗಿ ಈ ಸಂಶೋಧನೆಯಲ್ಲಿ ಕ್ಷೇತ್ರಕಾರ್ಯವನ್ನು ಆಧರಿಸಿದ ಅಧ್ಯಯನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.

೨. ಈ ಅಧ್ಯಯನಕ್ಕೆ ಈಗಾಗಲೆ ನಡೆದ ಅಧ್ಯಯನಗಳನ್ನೂ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಪ್ರೊ. ಪಿ.ಕೆ. ಖಂಡೋಬ, ಪ್ರೊ. ಡಿ.ಬಿ. ನಾಯಕ, ಡಾ. ಹರಿಲಾಲ ಪವಾರ್, ಡಾ. ಸಣ್ಣರಾಮ, ಡಾ. ಎಚ್.ಡಿ. ಪ್ರಶಾಂತ್ ಮುಂತಾದವರನ್ನು ಒಳಗೊಂಡಂತೆ, ವಿಶ್ವವಿದ್ಯಾಲಯಗಳಲ್ಲಿ ನಡೆದ ಲಂಬಾಣಿ ಸಮುದಾಯದ ವಿವಿಧ ಸಂಶೋಧನೆಗಳನ್ನು ಆಂಶಿಕವಾಗಿ ಗಮನಿಸಲಾಗಿದೆ. ಈ ಅಧ್ಯಯನಗಳನ್ನು ಆಕರಗಳನ್ನಾಗಿ ಬಳಸಿಕೊಳ್ಳುತ್ತಲೇ ಈ ಅಧ್ಯಯನಗಳ ಮಿತಿಯನ್ನೂ ಹೇಳಲಾಗಿದೆ. ಹಾಗಾಗಿ ಈಗಾಗಲೆ ನಡೆದ ಅಧ್ಯಯನಗಳನ್ನು ಒಳಗೊಳ್ಳುತ್ತಾ ಮತ್ತು ಹೊಸ ಅಧ್ಯಯನದ ಬಗ್ಗೆ ಹೇಳುತ್ತಾ, ಸಮುದಾಯದ ಸದ್ಯದ ಬಿಕ್ಕಟ್ಟುಗಳನ್ನು ಹೇಳುತ್ತಾ ಈ ಅಧ್ಯಯನವನ್ನು ನಮ್ಮ ಕಾಲದ ಅಗತ್ಯಗಳ ನೆಲೆಯಲ್ಲಿ ಮಾಡಲಾಗಿದೆ. ಇದು ಈ ಸಂಶೋಧನೆಯ ವಿಧಾನವೂ ಆಗಿದೆ.

೩. ಇಲ್ಲಿ ಮುಖ್ಯವಾಗಿ ಲಂಬಾಣಿ ಸಮುದಾಯದ ಕಲಾಪ್ರಕಾರಗಳನ್ನು ಗಮನಿಸಿ ಅಧ್ಯಯನ ಮಾಡಲಾಗಿದೆ. ಮುಖ್ಯವಾಗಿ ಲಂಬಾಣಿ ಸಮುದಾಯದ ಕರಕುಶಲ ಕಲಾಪ್ರಕಾರವನ್ನು ಕುರಿತು ಅಧ್ಯಯನ ಮಾಡಲಾಗಿದೆ. ಕಲೆಯ, ಕಲಾಕೃತಿಯ ಗುಣದ ಚರ್ಚೆಗಿಂತ ಆ ಕಲೆ ಅವರ ಬದುಕನ್ನು ಹೇಗೆ ರೂಪಿಸಿಕೊಳ್ಳಲು ಅನುಕೂಲವಾಗಿದೆ ಎಂದು ನೋಡುವುದು ಕೂಡ ಈ ಅಧ್ಯಯನದ ವಿಧಾನವನ್ನು ಪ್ರಭಾವಿಸಿದೆ.

೪. ಈ ಅಧ್ಯಯನವು ಸಮಕಾಲೀನ ಲಂಬಾಣಿ ಸಮುದಾಯದ ಕಲೆ ಮತ್ತು ಬದುಕನ್ನು ಬೇರೆ ಬೇರೆಯಾಗಿ ನೋಡದೆ, ಅವೆರಡನ್ನೂ ಒಂದೇ ನೆಲೆಯಲ್ಲಿ ನೋಡಲಾಗಿದೆ. ಹಾಗಾಗಿ ಅವರ ಜೀವನದ ಸಂಸ್ಕೃತಿ, ಆಚರಣೆ, ಜನಪದ ಸಾಹಿತ್ಯ ಇವು ಹೇಗೆ ಅವರ ಕಲೆಯನ್ನು ಪ್ರಭಾವಿಸಿವೆ ಎಂದೂ ಹೇಳಬೇಕಾಗಿದೆ. ಈ ಅಧ್ಯಯನದಲ್ಲಿ ಜಾನಪದ ಅಧ್ಯಯನದ ವಿಧಾನವನ್ನೂ ಅಳವಡಿಸಿಕೊಳ್ಳಲಾಗಿದೆ.

## ೧.೫. ಶೀರ್ಷಿಕೆ ಸ್ಪಷ್ಟನೆ

ಈ ಸಂಶೋಧನೆಯ ಶೀರ್ಷಿಕೆಯಾದ 'ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು' ಎಂಬ ಬಗ್ಗೆಯೂ ಕೆಲವು ಸ್ಪಷ್ಟನೆಗಳನ್ನು ಕೊಡುವುದು ಸೂಕ್ತ ಅನ್ನಿಸುತ್ತದೆ. ನಾವು ಕಲೆಗಳನ್ನು ವಿಂಗಡಿಸುವಾಗ ಆನಂದವನ್ನು ಕೊಡುವ ಗುಣವುಳ್ಳವನ್ನು ಲಲಿತಕಲೆಗಳು (ಫೈನ್ ಆರ್ಟ್ಸ್) ಎಂದು ಕರೆಯುತ್ತೇವೆ. ಅಂತೆಯೇ ಉಪಯುಕ್ತತೆಯನ್ನು ಆಧರಿಸಿದ ಕಲೆಯನ್ನು ಕುಶಲಕಲೆ(ಕ್ರಾಫ್ಟ್) ಎಂದು ಕರೆಯುತ್ತೇವೆ. ಇಂದು ಇವುಗಳನ್ನು ಕರಕುಶಲ ಕಲೆಗಳು ಎಂದು ಕರೆಯುತ್ತೇವೆ. ಇಂತಹ ಕರಕುಶಲ ಕಲೆಗಳನ್ನು ಕೆಲವು ಬುಡಕಟ್ಟುಗಳು, ಕೆಲವು ಅಲೆಮಾರಿ ಸಮುದಾಯಗಳು ತಮ್ಮ ಬದುಕಿಗೆ ಆಸರೆಯನ್ನಾಗಿ ಮಾಡಿಕೊಂಡಿವೆ. ಅದು ಈಗಲೂ ಕೆಲವು ಸಮುದಾಯಗಳಲ್ಲಿ ಜಾರಿಯಲ್ಲಿದೆ. ಅಂತಹ ಸಮುದಾಯಗಳಲ್ಲಿ ಲಂಬಾಣಿ(ಬಂಜಾರ), ಗೋರಮಾಟಿ ಮುಂತಾದ ಭಿನ್ನ ಹೆಸರುಗಳಿಂದ ಕರೆಯಿಸಿಕೊಳ್ಳುವ ಈ ಸಮುದಾಯವು ಕರಕುಶಲ ಕಲೆಗಳಿಗೆ ಹೊಸ ಬಗೆಯ ವಿಸ್ತಾರವನ್ನು ಒದಗಿಸಿದೆ.

ಹೀಗೆ ಈ ಸಮುದಾಯ ಕರಕುಶಲ ಕಲೆಗಳಿಗೆ ಹೇಗೆ ತೆರೆದುಕೊಂಡಿತು? ಹಾಗೆ ತೆರೆದುಕೊಳ್ಳಲು ಇದ್ದ ಒತ್ತಡಗಳೇನು? ಈ ಕಲೆಯ ಮೂಲಕ ಸಮುದಾಯ ಹೇಗೆ ತನ್ನ ಬದುಕನ್ನು ಕಟ್ಟಿಕೊಂಡಿದೆ ಎಂದು ನೋಡುವ ಅಗತ್ಯವಿದೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಈ ಶೀರ್ಷಿಕೆಯನ್ನು ಕೊಡಲಾಗಿದೆ. ಹಾಗಾಗಿ ಈ ಅಧ್ಯಯನ ಲಂಬಾಣಿ ಸಮುದಾಯದ ಕರಕುಶಲ ಕಲೆಯನ್ನೂ, ಆ ಕಲೆಯಲ್ಲಾಗಿರುವ ಬದಲಾವಣೆ ಯನ್ನೂ, ಆ ಕಲೆಯ ವ್ಯಾಪಾರವನ್ನೂ, ಅದರ ಕಲಾವಂತಿಕೆಯಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗಮನಿಸಿದೆ.

'ಕರ್ನಾಟಕದ ಲಂಬಾಣಿ' ಎನ್ನುವುದು ದುಂಡು ಹೇಳಿಕೆಯ ಹಾಗೆ ಇದೆ. ಇಲ್ಲಿ ಅಧ್ಯಯನ ಮಿತಿಯಲ್ಲಿ ಬಿಜಾಪುರ, ಗದಗ, ಬಳ್ಳಾರಿ, ಕೊಪ್ಪಳ ಜಿಲ್ಲೆಯನ್ನು ಆಯ್ದುಕೊಳ್ಳಲಾಗಿದೆ. ಕರ್ನಾಟಕದ ಲಂಬಾಣಿಗರಲ್ಲಿ ಪ್ರಾದೇಶಿಕ ಭಿನ್ನತೆ ಇದೆ ಎನ್ನುವ ವಿಚಾರವನ್ನು ಇಟ್ಟುಕೊಳ್ಳಲಾಗಿದೆ. ಆದರೆ ಕರ್ನಾಟಕದ ಲಂಬಾಣಿಗಳಲ್ಲಿ ಕೆಲವು ವಿಷಯಗಳಲ್ಲಿ ಸಾಮ್ಯತೆ ಇದೆ. ಈ ಸಾಮ್ಯತೆ ಸಮುದಾಯವನ್ನು ಅನನ್ಯವಾಗಿ ಕಟ್ಟಿಕೊಟ್ಟಿದೆ. ಈ ಸಾಮ್ಯತೆಗಳ ಕಾರಣ ಈ ಸಂಶೋಧನೆಗೆ 'ಕರ್ನಾಟಕದ ಲಂಬಾಣಿ' ಎಂದು ಕರೆಯಲಾಗಿದೆ. ಆ ನೆಲೆಯಲ್ಲಿ ಚರ್ಚೆ ಮಾಡಲಾಗಿದೆ.

### ಲಂಬಾಣಿ ಸಮುದಾಯ ಕುರಿತ ಸಂಶೋಧನಾ ಗ್ರಂಥಗಳ ಸಮೀಕ್ಷೆ

ಲಂಬಾಣಿ ಸಮುದಾಯದ ವಿವಿಧ ಮುಖಗಳನ್ನು ಕೆಲವು ಸಂಶೋಧನೆಗಳು ಅಧ್ಯಯನಕ್ಕೊಳಪಡಿಸಿವೆ. ಅಂತಹ ಪ್ರಮುಖ ಸಂಶೋಧನ ಪ್ರಬಂಧಗಳ ಸಂಕ್ಷಿಪ್ತವಾಗಿ ಸಮೀಕ್ಷೆ ಮಾಡಲಾಗಿದೆ. ಇಲ್ಲಿ ಸಂಶೋಧನೆಯ ಶೀರ್ಷಿಕೆ, ಈ ಸಂಶೋಧನೆಯಲ್ಲಿ

ಮುಖ್ಯವಾಗಿ ಕೇಂದ್ರೀಕರಿಸಿದ ವಿಷಯದ ನೆಲೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಒಂದು ಸಮುದಾಯದ ಬಗ್ಗೆ ನಡೆಯುವ ಸಂಶೋಧನೆಗಳು ಆ ಸಮುದಾಯಕ್ಕೆ ಯಾವ ಬಗೆಯ ಕೊಡುಗೆಯನ್ನು ಕೊಡುತ್ತವೆ ಮುಂತಾದ ಪ್ರಶ್ನೆಗಳನ್ನು ಹಾಕಿಕೊಳ್ಳಬಹುದು. ಮೊದಲನೆಯದಾಗಿ ಸಮುದಾಯದ ಚರಿತ್ರೆಯನ್ನು ವಿವಿಧ ನೆಲೆಗಳಲ್ಲಿ ಕಟ್ಟಿಕೊಡಲು ಪ್ರಯತ್ನಿಸುವುದು. ಹೀಗೆ ಚರಿತ್ರೆಯನ್ನು ಕಟ್ಟುತ್ತಲೇ ವರ್ತಮಾನದ ಮುಖವನ್ನು ಹೇಳಲು ಪ್ರಯತ್ನಿಸುವುದು ಎಂದು ತಿಳಿಯಬಹುದು.

**ಎಂ.ಫಿಲ್. ಪ್ರಬಂಧಗಳು**

೧. ವಿಜಯಲಕ್ಷ್ಮಿಯವರು "ಲಂಬಾಣಿಗರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಅಧ್ಯಯನ" ಎಂಬ ಎಂ.ಫಿಲ್. ಗ್ರಂಥದಲ್ಲಿ ಲಂಬಾಣಿಗರ ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿಗತಿಗಳನ್ನು ಹೇಳುತ್ತ ಲಂಬಾಣಿ ಕರಕುಶಲ ಕಲೆಗಾರಿಕೆಯನ್ನು ಕುರಿತು ವಿವರಿಸಿದ್ದಾರೆ.

೨. ಎಸ್. ಬೆಂಕ್ಯಾನಾಯ್ಕ ಅವರು 'ಲಂಬಾಣಿ ಸಮುದಾಯದ ಡಾಲ್ಯ' ಪಂಗಡದ ಅಧ್ಯಯನ ಮಾಡಿದ್ದಾರೆ. ಲಂಬಾಣಿ ಸಮುದಾಯದ ಕಲೆಗಳನ್ನು ಇಲ್ಲಿ ಪ್ರಾಸಂಗಿಕವಾಗಿ ಮಾತ್ರ ಅಧ್ಯಯನ ಮಾಡಲಾಗಿದೆ.

**ಪಿಎಚ್.ಡಿ. ಮಹಾಪ್ರಂಬಧಗಳು**

೧. ೧೯೭೧ರಲ್ಲಿ ಅಮರ್‌ಸಿಂಗ್ ರಾಠೋಡ್ ಅವರು "ಲಂಬಾಣಿ ಭಾಷೆ ಅದರ ವ್ಯಾಕರಣ ಹಾಗೂ ರಾಜಸ್ಥಾನಿ ಮತ್ತು ಹಿಂದಿಯೊಡನೆ ಅದರ ಸಂಬಂಧ" ಎಂಬ ಮಹಾಪ್ರಬಂಧದಲ್ಲಿ ಲಂಬಾಣಿ ಭಾಷೆಯ ವ್ಯಾಕರಣ ಸ್ವರೂಪ ಹಾಗೂ ಭಾಷೆಯ ಮೇಲೆ ರಾಜಸ್ಥಾನಿ ಮತ್ತು ಹಿಂದಿ ಭಾಷೆಗಳ ಪ್ರಭಾವ ಹಾಗೂ ಅವುಗಳ ನಡುವಿನ ಪರಸ್ಪರ ಸಂಬಂಧಗಳನ್ನು ಹೇಳುವಾಗ ಅವರ ವೇಷಭೂಷಣಗಳ ತೌಲನಿಕವಾದ, ಸ್ಥೂಲವಾದ ಚರ್ಚೆಯನ್ನು ಮಾಡಿದ್ದಾರೆ.

೨. ೧೯೭೫ರಲ್ಲಿ ಪುಷ್ಪಲತ ರಾಂಪುರೆಯವರು "ಬಂಜಾರಾ ಲೋಗ್ ಗೀತೋಂಕಿ ಸಮಾಜ" ಎಂಬ ಮಹಾಪ್ರಬಂಧವನ್ನು ಹಿಂದಿ ಭಾಷೆಯಲ್ಲಿ ರಚಿಸಿದ್ದಾರೆ. ಈ ಪ್ರಬಂಧದಲ್ಲಿ ಮುಖ್ಯವಾಗಿ ಬಂಜಾರ ಸಮುದಾಯದ ವರ್ಣಮಯ ಬದುಕನ್ನು, ಕರಕುಶಲ ಕಲೆಗಳನ್ನು, ಜಾನಪದ ಗೀತೆಗಳನ್ನು ಸಂಗ್ರಹಿಸಿ, ವಿಶ್ಲೇಷಿಸುವ ಮೂಲಕ ಅವರ ಸಾಂಸ್ಕೃತಿಕ ಕುರಿತು ಚರ್ಚೆ ಮಾಡಿದ್ದಾರೆ.

೩. ೧೯೭೫ರಲ್ಲಿ ಬಿ.ಜಿ. ಹಳಬರ ಅವರು "ಉತ್ತರ ಕರ್ನಾಟಕದ ಲಂಬಾಣಿಗಳಲ್ಲಿ ಆರ್ಥಿಕ ಬದಲಾವಣೆಯ ಸಾಮಾಜಿಕ ಪರಿಣಾಮ" ಎಂಬ ಪಿಎಚ್.ಡಿ ಪ್ರಬಂಧವನ್ನು ರಚಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಉತ್ತರ ಕರ್ನಾಟಕ ಭಾಗದಲ್ಲಿರುವ ಲಂಬಾಣಿಗರ

ಆರ್ಥಿಕ ಸ್ಥಿತಿಗತಿಗಳಲ್ಲಿನ ಬದಲಾವಣೆಯ ಸ್ವರೂಪದೊಂದಿಗೆ ಅವರ ಕಲೆಗಳನ್ನು ಸ್ಥೂಲವಾಗಿ ಚರ್ಚೆ ಮಾಡಿದ್ದಾರೆ.

೪. ೧೯೭೬ರಲ್ಲಿ ಎಚ್.ಡಿ. ಲಮಾಣಿ ಅವರು "ಕರ್ನಾಟಕದ ಲಮಾಣಿ ಜನಪದ ಗೀತೆಗಳ ಸಾಹಿತ್ಯಕ ಅಧ್ಯಯನ" ಎಂಬ ಹಿಂದಿ ಭಾಷೆಯಲ್ಲಿ ಸಂಶೋಧನಾ ಪ್ರಬಂಧವನ್ನು ರಚಿಸಿದ್ದಾರೆ. ಇದರಲ್ಲಿ ಲಂಬಾಣಿ ಜಾನಪದ ಗೀತೆಗಳನ್ನು ಸಂಗ್ರಹಿಸಿ, ಇವುಗಳಲ್ಲಿ ಸಾಹಿತ್ಯಕ ಅಂಶಗಳನ್ನು ಕುರಿತು ಚರ್ಚಿಸುತ್ತಾ ಕಲೆಗಳನ್ನು ಕುರಿತು ಚರ್ಚೆ ಮಾಡಿದ್ದಾರೆ.

೫. ೧೯೮೨ರಲ್ಲಿ ವಿ.ಎಸ್. ಬಾರಕೇರಿಯವರು "ವಿಜಾಪುರ ಜಿಲ್ಲೆಯ ಲಂಬಾಣಿ ಆಡು ಭಾಷೆಯ ವರ್ಣನಾತ್ಮಕ ವಿಶ್ಲೇಷಣೆ" ಎಂಬ ಮಹಾಪ್ರಬಂಧವನ್ನು ಇಂಗ್ಲಿಷ್ ಭಾಷೆಯಲ್ಲಿ ರಚಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಲಂಬಾಣಿ ವೇಷಭೂಷಣಗಳ ಕುರಿತು ವರ್ಣನಾತ್ಮಕವಾಗಿ ವಿವರಿಸಿದ್ದಾರೆ.

೬. ೧೯೯೧ರಲ್ಲಿ ಡಾ. ಪಿ.ಕೆ. ಖಂಡೋಬಾ ಅವರು "ಕರ್ನಾಟಕ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ಸಂಶೋಧನಾ ಗ್ರಂಥವನ್ನು ರಚಿಸಿದ್ದಾರೆ. ಇದರಲ್ಲಿ ಲಂಬಾಣಿಗರ ಮೂಲ, ಪ್ರಸಾರ, ಜೀವನವಿಧಾನ, ಆಚಾರ-ವಿಚಾರ, ನಂಬಿಕೆಗಳು, ಜನಪದ ಕಲೆಗಳಾದ ಹಚ್ಚೆ, ಕಸೂತಿ, ರಂಗೋಲಿ ಮುಂತಾದ ಕಲೆಗಳ ಕುರಿತು ಚರ್ಚಿಸಿದ್ದಾರೆ.

೭. ಸಣ್ಣರಾಮ ಅವರು "ಲಂಬಾಣಿ ಸಂಸ್ಕೃತಿ" ಎಂಬ ಸಂಶೋಧನಾ ಗ್ರಂಥವನ್ನು ರಚಿಸಿದ್ದಾರೆ. ಇದರಲ್ಲಿ ಲಂಬಾಣಿಗರ ಒಟ್ಟಾರೆ ಸಾಂಸ್ಕೃತಿಕ ವಿವರಗಳನ್ನು ಚರ್ಚೆ ಮಾಡಿದ್ದಾರೆ. ಪೂರಕವಾಗಿ ಲಂಬಾಣಿಗರ ಹಚ್ಚೆ, ರಂಗೋಲಿ ಮತ್ತು ಕಸೂತಿಯ ಕಲಾವಿನ್ಯಾಸಗಳ ಕುರಿತು ಚರ್ಚಿಸಿದ್ದಾರೆ.

೮. ಎಚ್.ಡಿ. ಪ್ರಶಾಂತ್ ಅವರ "ಲಂಬಾಣಿಗಳಲ್ಲಿ ಸಾಮಾಜಿಕ ಬದಲಾವಣೆ: ಒಂದು ಸಮಾಜಶಾಸ್ತ್ರೀಯ ಅಧ್ಯಯನ" ಎಂಬ ಮಹಾಪ್ರಬಂಧವನ್ನು ರಚಿಸಿದ್ದಾರೆ. ಇಲ್ಲಿ ಲಂಬಾಣಿಗರ ಮೂಲ, ವೃತ್ತಿ ಕಸುಬುಗಳು ಮತ್ತು ಅವರ ಕರಕುಶಲ ಕಲೆಗಳ ಸಾಮಾಜಿಕ ಸ್ಥಿತಿಗತಿಗಳಲ್ಲಿನ ಬದಲಾವಣೆಯ ಸ್ವರೂಪ ಕುರಿತು ಚರ್ಚೆ ಮಾಡಿದ್ದಾರೆ.

೯. ೨೦೦೮ರಲ್ಲಿ ಸಂತೋಷ್ ಅವರು "ದಕ್ಷಿಣ ಭಾರತದ ಲಂಬಾಣಿ ಭಾಷೆ ಮತ್ತು ಪ್ರಕೋಶ" (ಕರ್ನಾಟಕ ಮತ್ತು ಆಂಧ್ರಪ್ರದೇಶಗಳನ್ನು ಅನುಲಕ್ಷಿಸಿ) ಎಂಬ ಸಂಶೋಧನಾ ಮಹಾಪ್ರಬಂಧವನ್ನು ರಚಿಸಿದ್ದಾರೆ. ಇದರಲ್ಲಿ ಲಂಬಾಣಿ ಭಾಷೆಯ ಪದಕೋಶವನ್ನು ದಾಖಲೀಕರಣ ಮಾಡಿದ್ದಾರೆ. ಇಲ್ಲಿ ಲಂಬಾಣಿಗರ ಬಟ್ಟೆಯ ಮೇಲಿನ ಕರಕುಶಲ ಕಲಾವಿನ್ಯಾಸಗಳ ವಿಶಿಷ್ಟ ಪದಗಳನ್ನು ಚರ್ಚಿಸಿದ್ದಾರೆ.

೧೦. ೨೦೦೭ರಲ್ಲಿ ಗಣಪತಿ ಕೆ. ಲಮಾಣಿಯವರು "ಲಂಬಾಣಿಗರ ಗೋವಾ ವಲಸೆ ಒಂದು ಸಮಾಜ ಶಾಸ್ತ್ರೀಯ ಅಧ್ಯಯನ" ಎಂಬ ಮಹಾಪ್ರಬಂಧವನ್ನು ರಚಿಸಿದ್ದಾರೆ. ಇದರಲ್ಲಿ ಲಂಬಾಣಿಗರಲ್ಲಿ ಪ್ರಚಲಿತವಿರುವ ವಿವಾಹ, ಧರ್ಮ, ಸಂಸ್ಕೃತಿ, ಭಾಷೆ, ಕಲೆ, ವೇಷಭೂಷಣಗಳನ್ನು ಲಂಬಾಣಿಗರ ಸಾಮಾಜಿಕ ವಲಸೆ ಪ್ರಕ್ರಿಯೆಯಿಂದ ಲಂಬಾಣಿ ಸಮುದಾಯದ ಮೇಲೆ ಆದ ಪರಿಣಾಮ ಮತ್ತು ಫಲಿತಗಳನ್ನು ಕುರಿತು ಚರ್ಚೆ ಮಾಡಲಾಗಿದೆ.

ಹೀಗೆ ಅಧ್ಯಯನದ ಸಂದರ್ಭದಲ್ಲಿ ಗಮನಕ್ಕೆ ಬಂದ ಸಂಶೋಧನ ಪ್ರಬಂಧಗಳನ್ನು ಪಟ್ಟಿ ಮಾಡಿ ಸಮೀಕ್ಷೆ ಮಾಡಲಾಗಿದೆ. ಗಮನಕ್ಕೆ ಬರದೆ ಸಂಶೋಧನ ಪ್ರಬಂಧಗಳು ಇರಬಹುದು ಎನ್ನುವ ನಂಬಿಕೆ ಇದೆ. ಇಲ್ಲಿ ಸಮೀಕ್ಷೆ ಮಾಡಲಾದ ಪ್ರಬಂಧಗಳು ಮೊದಲ ಹಂತದ ಪ್ರಬಂಧಗಳಾಗಿರುವುದರಿಂದ ಸಮಗ್ರ ಮಾಹಿತಿಯನ್ನು ಒಂದೆಡೆ ಕಲೆ ಹಾಕಲು ಪ್ರಯತ್ನಿಸಿದ್ದಾರೆ. ಹಾಗಾಗಿ ಸಹಜವಾಗಿ ವಿಶ್ಲೇಷಣೆಗಿಂತ ವಿವರಣೆಯ, ಮಾಹಿತಿಯನ್ನು ಸಂಗ್ರಹಿಸುವುದರಲ್ಲಿಯೇ ಈ ಸಂಶೋಧನೆಗಳ ಮಹತ್ವವಿದೆ.

ಇಲ್ಲಿ ಗಮನಿಸಿ ಸಂಶೋಧನೆಗಳಲ್ಲಿ ಲಂಬಾಣಿ ಸಮುದಾಯದ ಕರಕುಶಲ ಕಲೆಗಳನ್ನು ಆಂಶಿಕವಾಗಿ ಚರ್ಚಸಿದ್ದಾರೆಯೇ ವಿನಾ ಅದರ ಆಳವಾದ ಅಧ್ಯಯನ ಸಾಧ್ಯವಾಗಿಲ್ಲ. ಈ ಕಾರಣದಿಂದ ಈ ಅಧ್ಯಯನದ ಅಗತ್ಯ ಕಂಡುಬಂತು. ಇಲ್ಲಿ ಈ ಮೇಲಿನ ಅಧ್ಯಯನ ಗಳಿಗಿಂತ ಭಿನ್ನ ಮಾದರಿಯನ್ನು ರೂಪಿಸಿಕೊಳ್ಳಲಾಗಿದೆ.

□□□

ಅಧ್ಯಾಯ : ಎರಡು

# ಲಂಬಾಣಿ ಸಮುದಾಯದ ನೆಲೆ-ಹಿನ್ನೆಲೆ

೨.೧. ಲಂಬಾಣಿಗರ ಮೂಲದ ನೆಲೆಗಳು

೨.೨. ಮೌಖಿಕ ಆಧಾರಗಳು

೨.೩. ಶಾಸನಗಳಲ್ಲಿ ಲಂಬಾಣಿಗರ ಉಲ್ಲೇಖ

೨.೪. ಚಾರಿತ್ರಿಕ ದಾಖಲೆಗಳು

ಅಧ್ಯಾಯ : ಎರಡು

# ಲಂಬಾಣಿ ಸಮುದಾಯದ ನೆಲೆ-ಹಿನ್ನೆಲೆ

ವರ್ತಮಾನದಲ್ಲಿ ಬದುಕುತ್ತಿರುವ ಸಮುದಾಯಗಳು ತಮ್ಮದೇ ಆದ ಚರಿತ್ರೆಯನ್ನು ಹೊಂದಿರುತ್ತವೆ. ಈ ಚರಿತ್ರೆಯು ಆಯಾ ಸಮುದಾಯದ ಮೌಖಿಕ ಸಾಹಿತ್ಯದಲ್ಲಿಯೂ, ಭೌತಿಕ ಪರಿಕರಗಳಲ್ಲಿಯೂ ಕಾಣಬಹುದಾಗಿದೆ. ಹೀಗಿರುವಾಗ ಆ ಸಮುದಾಯದ ಮೌಖಿಕ ಸಾಹಿತ್ಯ ಮತ್ತು ಭೌತಿಕ ಪರಿಕರಗಳನ್ನು ಅಧ್ಯಯನ ಮಾಡುವ ಮೂಲಕ ಸಮುದಾಯದ ಚರಿತ್ರೆಯನ್ನು ನಮ್ಮ ಕಾಲಕ್ಕೆ ಅನ್ವಯಿಸಿಕೊಳ್ಳುವ ಅಗತ್ಯವಿದೆ.

ಈ ಅಧ್ಯಾಯದ ಶೀರ್ಷಿಕೆಯ ಲಂಬಾಣಿ ಸಮುದಾಯದ ನೆಲೆ–ಹಿನ್ನೆಲೆ. ಅಂದರೆ ಇಂದು ಅವರ ಸಮುದಾಯದ ನೆಲೆ ಯಾವುದು? ಆ ನೆಲೆಗಿರುವ ಚಾರಿತ್ರಿಕ ಹಿನ್ನೆಲೆ ಯಾವುದು? ಈ ಪ್ರಶ್ನೆಯನ್ನು ಮುಖ್ಯವಾಗಿಟ್ಟುಕೊಂಡು ಈ ಅಧ್ಯಯನವನ್ನು ಬರೆಯಲಾಗಿದೆ.

ಭಾರತದಲ್ಲಿ ವೇದಗಳ ಕಾಲದಿಂದಲೂ ಅಸ್ತಿತ್ವದಲ್ಲಿರುವ ಜಾತಿವ್ಯವಸ್ಥೆಯ ಕುರಿತಾಗಿ ಹಲವು ರೀತಿಯ ಅಧ್ಯಯನಗಳು ನಡೆದಿವೆ. ಭಾರತದಲ್ಲಿ ಪ್ರತ್ಯೇಕವಾಗಿ ತಮ್ಮದೇ ಆದ ಬದುಕನ್ನು ಕಟ್ಟಿಕೊಂಡು ಜೀವಿಸುತ್ತಿರುವ ಹಲವು ಬುಡಕಟ್ಟು ಸಮುದಾಯಗಳಿವೆ. ಭಾರತದ ಈ ಬುಡಕಟ್ಟುಗಳು ತಮ್ಮ ವಿಶಿಷ್ಟವಾದ ಸಂಸ್ಕೃತಿಯ ವಿವಿಧ ಘಟಕಗಳಾದ ನಂಬಿಕೆ, ಸಂಪ್ರದಾಯ, ಸಾಹಿತ್ಯ, ಸಂಗೀತ, ನೃತ್ಯ ಹಾಗೂ ಕರಕುಶಲಕಲೆಗಳಂತಹ ಹಲವು ಅಂಶಗಳಿಂದ ಭಾರತದ ಸಂಸ್ಕೃತಿಯ ಸಂಕೀರ್ಣತೆಗೊಳಪಟ್ಟಿದೆ. ಇಂತಹ ಸಂಕೀರ್ಣ ವ್ಯವಸ್ಥೆಯಲ್ಲಿ ಲಂಬಾಣಿ ಸಮುದಾಯವು ತನ್ನದೇ ಆದ ವಿಶಿಷ್ಟ ಚಹರೆಯನ್ನು ಉಳಿಸಿಕೊಂಡಿರುವುದು ಮಹತ್ವದ ಸಂಗತಿಯಾಗಿದೆ.

ಕರ್ನಾಟಕದಲ್ಲಿ ಕಂಡುಬರುವ ಸುಮಾರು ಅರವತ್ತೆರಡು ಬುಡಕಟ್ಟುಗಳಲ್ಲಿ ಲಂಬಾಣಿ ಬುಡಕಟ್ಟು ಒಂದಾಗಿದೆ. ಸಮುದಾಯವು ಭಾರತದ ಉದ್ದಗಲಕ್ಕೂ ಗೋಚರಿಸುತ್ತದೆ. ಇವರ ವರ್ಣರಂಜಿತ ಬದುಕು ಮತ್ತೊಂದು ಸಮುದಾಯಕ್ಕೆ ಆಕರ್ಷಣೆಯ ಕೇಂದ್ರವಾಗಿದೆ. ಆದಿಕಾಲದಿಂದಲೂ ಕಷ್ಟಮಯವಾದ ಬದುಕನ್ನು ರೂಢಿಸಿಕೊಂಡು ಬಂದ ಈ ಸಮುದಾಯವು ಸಮಾಜದ ಮುಖ್ಯವಾಹಿನಿಗೆ ಬರಲು ದಾಪುಗಾಲು ಹಾಕುತ್ತಿದೆ. ಈ ಹಿಂದೆ ಬೆಟ್ಟ, ಗುಡ್ಡಗಳಂತಹ ಪ್ರದೇಶಗಳಲ್ಲಿ ವಾಸವಾಗಿದ್ದ ಲಂಬಾಣಿಗರು ತಮ್ಮ ಅಲೆಮಾರಿ ಬದುಕನ್ನು ಕಳಚಿ ನಾಗರಿಕರಂತೆ ಬದುಕಲು ಪ್ರಯತ್ನಿಸುತ್ತಿದ್ದುದು ಒಂದು ಮಹತ್ವದ ಸಂಗತಿ. ಹೀಗೆ ಈ ಸಮುದಾಯವು ಪಟ್ಟಣ ಮತ್ತು ಹಳ್ಳಿಗಳಿಂದ ಸುಮಾರು ೩ರಿಂದ ೪ ಕಿ.ಮೀ. ದೂರದ ಅಂತರದಲ್ಲಿ ತಾಂಡಾಗಳ ಹೆಸರಲ್ಲಿ ನೆಲೆ ನಿಂತಿವೆ.

ಬುಡಕಟ್ಟು ಎಂದರೆ ಅವರದೇ ಆದ ಭಾಷೆ, ಉಡುಗೆ ತೊಡುಗೆ ಹಾಗೂ ವಿಭಿನ್ನ ಆಚಾರಗಳಿಂದ ಕೂಡಿರಬೇಕಾಗುತ್ತದೆ. ಈ ಎಲ್ಲಾ ಗುಣಲಕ್ಷಣಗಳು ಈ ಸಮುದಾಯದ ಒಳಗೆ ಹಾಸುಹೊಕ್ಕಿವೆ. ಹೀಗಾಗಿ ಅಪ್ಪಟ ಬುಡಕಟ್ಟಿನ ಅಂಶಗಳನ್ನು ಮೈಗೂಡಿಸಿಕೊಂಡಿರುವ ಈ ಸಮುದಾಯ ನಾಡಿನ ನಾಗರಿಕತೆಯ ಕಡೆಗೆ ಮುಖಮಾಡುವಲ್ಲಿ ವಿಫಲವಾಗಿದೆ. ಇದಕ್ಕೆ ಇವರಲ್ಲಿರುವ ಮೌಢ್ಯತೆ, ಅನಕ್ಷರತೆ ಹೆಚ್ಚು ಕಂಡುಬರುತ್ತದೆ.

"ಶತಶತಮಾನಗಳಿಂದ ತುಳಿತಕ್ಕೊಳಗಾದ ಈ ಸಮುದಾಯದವರು ಚಾರಿತ್ರಿಕ ಹಿನ್ನೆಲೆಯುಳ್ಳವರು. ಸ್ವಾತಂತ್ರ್ಯಪೂರ್ವದಲ್ಲಿ ದೇಶದ ಮೂಲೆ ಮೂಲೆಗಳಲ್ಲಿ ಸಂಚರಿಸಿ ಪ್ರತಿನಿತ್ಯ ಜನರಿಗೆ ಬೇಕಾಗುವ ಜೀವನಾವಶ್ಯಕ ವಸ್ತುಗಳನ್ನು ಒದಗಿಸುವಲ್ಲಿ ಬಹುಮುಖ್ಯವಾದ ಸೇವೆಯನ್ನು ಇವರು ಸಲ್ಲಿಸಿದ್ದಾರೆ. ಭಾರತದಂತಹ ವಿಶಾಲ ರಾಷ್ಟ್ರದಲ್ಲಿ ಒಂದು ಕಾಲಕ್ಕೆ ವ್ಯಾಪಾರ ವ್ಯವಸ್ಥೆಯು ಈ ಜನರ ಹಿಡಿತದಲ್ಲಿತ್ತು ಎಂಬುದನ್ನು ಮರೆಯುವಂತಿಲ್ಲ. ಸ್ವಾತಂತ್ರ್ಯಪೂರ್ವದಲ್ಲಿ ಈ ಜನಸಮುದಾಯ ಒಂದು ಬಗೆಯ ದಾಸ್ಯ, ಕಿರುಕುಳ ತೊಂದರೆಗಳಾದರೆ, ಬಂಜಾರ ಜನಾಂಗಕ್ಕೆ ಇನ್ನೂ ಹೆಚ್ಚಿನ ಕಠಿಣ ಪರಿಸ್ಥಿತಿಗಳಿದ್ದವು. ಅದಕ್ಕೆ ಹಲವಾರು ಕಾರಣಗಳಿದ್ದವು. ಸಂಪದ್ಭರಿತ ಭಾರತವನ್ನು ನೋಡಿ ವ್ಯಾಪಾರ ಮಾಡುವ ನೆಪದಲ್ಲಿ ಕೊಳ್ಳೆ ಹೊಡೆಯಲು ಬಂದಿದ್ದ ಪರದೇಶದವರಿಗೆ ಮೊಟ್ಟಮೊದಲು ಸಿಕ್ಕಿದವರು ವ್ಯಾಪಾರಿ ಬಂಜಾರ ಜನಾಂಗ".[೧] ಹೀಗೆ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾದ ಈ ಸಮುದಾಯಕ್ಕೆ ಅಪರಾಧಿ(ಕ್ರಿಮಿನಲ್)ಗಳೆಂದು ಪಟ್ಟ ಕಟ್ಟಿದರು.

---

೧. ಡಾ. ಹರಿಲಾಲ ಪವಾರ, ೨೦೦೭, **ಬದುಕೊಂದು ಚಿತ್ತಾರ,** ಪು.ಸಂ. ೫-೬.

ಅಪರಾಧಿ ಬುಡಕಟ್ಟುಗಳೆಂದು ಪರಿಗಣಿಸಿದ ಮೇಲೆ ಈ ಸಮುದಾಯ ಅನೇಕ ತೊಂದರೆಗಳನ್ನು ಅನುಭವಿಸಿತು. ಅಲ್ಲದೇ ಹಲವು ರೀತಿಯ ಸೌಲಭ್ಯಗಳಿಂದ ವಂಚಿತವಾಗಿದೆ. ಇಂತಹ ಸಮಸ್ಯೆಯಿಂದ ಹೊರಬರಲು ಈ ಸಮುದಾಯಕ್ಕೆ ಶಿಕ್ಷಣ ಮುಖ್ಯ ಆಧಾರ. ಹೀಗೆ ಶಿಕ್ಷಣ ಪಡೆದ ಸಮುದಾಯ ಹಂತ ಹಂತವಾಗಿ ನಾಗರಿಕತೆಯ ಪರಿಧಿಗೆ ಒಳಗಾಯಿತು. ಆದರೂ ಈಗಲೂ ಇವರಲ್ಲಿ ಮೌಢ್ಯತೆ ಹಾಗೂ ಅನಾಗರಿಕತೆ ಮನೆ ಮಾಡಿಕೊಂಡಿದೆ.

### ೨.೧. ಲಂಬಾಣಿಗರ ಮೂಲದ ನೆಲೆಗಳು

ಕರ್ನಾಟಕದಲ್ಲಿ ನೆಲೆನಿಂತ ಹಲವು ಸಮುದಾಯಗಳಲ್ಲಿ ಲಂಬಾಣಿ ಸಮುದಾಯವೂ ಒಂದು. ಇವರ ರಂಗುರಂಗಿನ ಉಡುಗೆ, ಮೈತುಂಬ ಧರಿಸಿದ ವಿವಿಧ ರೀತಿಯ ಆಭರಣ, ಇವುಗಳಿಂದ ಈ ಸಮುದಾಯದ ಮಹಿಳೆಯರನ್ನು ಗಮನಿಸಿದರೆ ಅವರ ಸಂಸ್ಕೃತಿಯು ಕಣ್ಣೆದುರಿಗೆ ಗೋಚರಿಸುತ್ತದೆ. ಮಹಿಳೆಯರು ಧರಿಸುವ ಉಡುಗೆ ತೊಡುಗೆಯ ಮೂಲಕ ಸಮುದಾಯದ ಪಾರಂಪರಿಕ ಚಹರೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಕೆಂಪು ಬಣ್ಣದ ಉಡುಗೆ ಇವರಿಗೆ ಹೆಚ್ಚು ಪ್ರಿಯವಾದದ್ದು.

ಲಂಬಾಣಿಗರ ಮೂಲಸ್ಥಾನ ರಾಜಸ್ಥಾನವೆಂದು ಅನೇಕ ದೇಶ-ವಿದೇಶಿ ಸಂಶೋಧಕರು ಪ್ರಸ್ತಾಪಿಸಿದ್ದಾರೆ. ಅಂತಹವುಗಳಲ್ಲಿ ಕೆಲವು ಉಲ್ಲೇಖಗಳನ್ನು ಇಲ್ಲಿ ಗಮನಿಸಬಹುದು. ಕರ್ನಲ್ ಮೆಕೆಂಜಿ ಅವರು, "ಬಂಜಾರರು ರಾಜಸ್ಥಾನದ ಮೂಲನಿವಾಸಿಗಳಾಗಿದ್ದು ವ್ಯಾಪಾರದ ಉದ್ದೇಶದಿಂದಾಗಿ ಸಾಮಾನು ಸರಕುಗಳನ್ನು ಹೇರಿಕೊಂಡು ದೂರದ ಪ್ರದೇಶಗಳಿಗೆ ಹೋಗುತ್ತಿದ್ದರು. ಹೀಗಾಗಿ ರಾಜಪುತಾನವೇ ಇವರ ಮೂಲಸ್ಥಾನವಾಗಿದೆ"[೨] ಎಂದು ಅಭಿಪ್ರಾಯಪಟ್ಟಿದ್ದಾರೆ.

ಲಂಬಾಣಿಗಳ ಮೂಲವನ್ನು ಕುರಿತು ಜಿ.ಎ.ಗ್ರಿಯರ್ಸನ್ ಅವರು "Linguistic Survey of India ಗ್ರಂಥದಲ್ಲಿ "Banjara are originally Dravidian, Becoming aryanized of a Comparatively early date and Philological Consideration Point to the Conclusion that this accured somewhere in Rajastan or Rajaputana"[೩] ಎನ್ನುತ್ತಾರೆ.

---

೨. ಡಾ. ಹರಿಲಾಲ ಪವಾರ, ೨೦೦೭, **ಬದುಕೊಂದು ಚಿತ್ತಾರ,** ಪು.ಸಂ. ೧೮.

೩. ಡಾ. ಡಿ.ಬಿ. ನಾಯಕ್, ೨೦೦೦, **ಲಂಬಾಣಿ ಜನಪದ ಸಾಹಿತ್ಯ,** ಪು.ಸಂ. ೬-೭.೨.

ಇವರ ಇತಿಹಾಸವು ಕೆಲವು ಆಧಾರಗಳ ಮೂಲಕ ಅತ್ಯಂತ ಪ್ರಾಚೀನ ಹಾಗೂ ಗೌರವಯುತವಾಗಿದೆ. ಕ್ರಿ.ಶ.ಸು. ೪೦೦ ವರ್ಷಗಳ ಹಿಂದಿನ ಇತಿಹಾಸ ಈ ಸಮುದಾಯಕ್ಕಿದೆ. ಮೂಲತಃ ರಾಜಸ್ಥಾನದ ರಜಪೂತ ವಂಶದವರಾದ ಇವರು ಹಲವು ಕಾಲದ ನಂತರ ಮೊಗಲರ ಸೈನ್ಯದ ಜೊತೆಗೆ ದೇಶದ ಪ್ರತಿಯೊಂದು ಭಾಗಗಳಲ್ಲಿ ಚದುರಿ ಹೋಗಿದ್ದಾರೆ. ಹಿಂದೂಸ್ತಾನದ ಹಲವು ಭಾಗಗಳಲ್ಲಿ ನೆಲೆನಿಂತ ಮೊಗಲ್ ಸೈನಿಕರಿಗೆ ಆಹಾರ ಸಾಮಗ್ರಿಗಳನ್ನು ಸಾಗಿಸುತ್ತಿದ್ದರೆಂದು ಇರ್ವಿನ್ ಎಂಬ ವಿದ್ವಾಂಸ ವರದಿ ಮಾಡುತ್ತಾನೆ.

ಎಡ್ಗರ್ ಥರ್ಸ್ಟನ್ ಅವರು ಈ ಸಮುದಾಯದ ಬಗ್ಗೆ ಬರೆಯುತ್ತ ಇವರು ಕ್ಷತ್ರಿಯ ಮೂಲಕ್ಕೆ ಸೇರಿದವರೆಂದು, ಯುದ್ಧ, ಬೇಟೆ, ಕಾವಲು ಕಾಯುವುದರಲ್ಲಿ ನಿಪುಣರೆಂದು, ಬಂಜಾರ ಶಬ್ದ ಜಾತಿಸೂಚಕವಾಗಿರುವಂತೆ ವ್ಯವಸಾಯ ಸೂಚಕವಾಗಿದೆಯೆಂದು ಹೇಳುತ್ತಾರೆ. ಹಾಗೆಯೇ ಲಂಬಾಣಿ ಹಾಗೂ ಸುಗಾಲಿಗಳು ಒಂದೇ ಆಗಿದ್ದು ಈ ಜನರು ದಕ್ಷಿಣಭಾಗದಲ್ಲಿ ಹೆಚ್ಚಾಗಿ ಕಾಣಿಸುತ್ತಾರೆ. ಇವರು ಪಶುಪಾಲನೆ, ಭಾರ ಎತ್ತುವಿಕೆ ಹಾಗೂ ವ್ಯಾಪಾರ ಮುಂತಾದ ವೃತ್ತಿಯನ್ನು ಅವಲಂಬಿಸಿದ್ದರೆಂದು ೧೮೮೧ರ ಮದ್ರಾಸ್ ಜನಗಣತಿಯಲ್ಲಿ ವಿವರಿಸಲಾಗಿದೆ. ಡಾ. ಪಿ.ಕೆ. ಖಂಡೋಬ ಸೇರಿದಂತೆ ಅನೇಕ ವಿದ್ವಾಂಸರು ಈ ಸಮುದಾಯದ ಮೂಲದ ಬಗ್ಗೆ ಹಲವು ರೀತಿಯಲ್ಲಿ ಅಧ್ಯಯನ ನಡೆಸಿದ್ದಾರೆ. ಮೂಲತಃ ಇವರು ರಾಜಸ್ಥಾನ ಮೂಲದವರಾಗಿದ್ದು ಭಾರತೀಯ ಆರ್ಯ ಪರಿವಾರದ ಕ್ಷತ್ರಿಯ ರಜಪೂತ ವಂಶಕ್ಕೆ ಸಂಬಂಧಿಸಿದವರಾಗಿದ್ದಾರೆ ಎಂದು ವಿದ್ವಾಂಸರಾದ ಪಿ.ಕೆ. ಖಂಡೋಬ ಅವರ ಅಭಿಪ್ರಾಯವಾಗಿದೆ.

"ಬಂಜಾರಗಳು ರಾಜಸ್ಥಾನದ ಚಾರಣ ಇಲ್ಲವೇ ಭಾಟರಾಗಿದ್ದು, ವೃತ್ತಿಯಿಂದ ವಾಣಿಜ್ಯಕಾರ ಹಾಗೂ ಪ್ರವೃತ್ತಿಯಿಂದ ಜನ್ಮತಃ ಕವಿಗಳಾಗಿದ್ದಾರೆಂದು" ಕರ್ನಲ್ ವಾಡ್ ಜೇಮ್ಸ್ ಅವರು ಅಭಿಪ್ರಾಯಪಡುತ್ತಾರೆ.[೪]

"ಉತ್ತರ ಭಾರತದ ಗೋರಖಪುರದಿಂದ ಹರಿದ್ವಾರದವರೆಗಿನ ಉಪಪರ್ವತ ಶಿಖರವೇ ಬಂಜಾರಗಳ ಮೂಲ ಸ್ಥಾನವಾಗಿದೆ" ಎಂದು ಇಬ್ಸನ್ ತಿಳಿಸಿದ್ದಾರೆ.[೫]

"ಲಂಬಾಣಿಗರು ಕ್ಷತ್ರಿಯ ವಂಶದ ಮೂಲದವರಾಗಿದ್ದು, ಭಾರತೀಯರಾಗಿದ್ದಾರೆ" ಎಂದು . ಈ.ಜೆ. ಕೀಟ್ಸ್ ಅಭಿಪ್ರಾಯಪಡುತ್ತಾರೆ.[೬]

---

೪. ಡಾ. ಪಿ.ಕೆ. ಖಂಡೋಬಾ, ೧೯೯೧, **ಕರ್ನಾಟಕದ ಲಂಬಾಣಿಗಳು**, ಪು.ಸಂ. ೨೫.

೫. ಡಾ. ಪಿ.ಕೆ. ಖಂಡೋಬಾ, ೧೯೯೧, **ಕರ್ನಾಟಕದ ಲಂಬಾಣಿಗಳು**, ಪು.ಸಂ. ೨೬.

೬. ಡಾ. ಪಿ.ಕೆ. ಖಂಡೋಬಾ, ೧೯೯೧, **ಕರ್ನಾಟಕದ ಲಂಬಾಣಿಗಳು**, ಪು.ಸಂ. ೨೬.

ಹೀಗೆ ಮೇಲಿನ ವಿದ್ವಾಂಸರ ಹೇಳಿಕೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಲಂಬಾಣಿಗರು ಮೂಲತಃ ರಜಪೂತ ವಂಶದವರಾಗಿದ್ದು, ರಾಜಸ್ಥಾನದ ಕಡೆಯಿಂದ ದೇಶದ ಹಲವು ಭಾಗಗಳಲ್ಲಿ ಚದುರಿದ್ದಾರೆ. ಈ ಜನಾಂಗವು ತಮ್ಮ ಮೂಲನಾಡಿನಿಂದ ಎಲ್ಲೆಲ್ಲೂ ಚದುರಿ ತಮ್ಮ ವ್ಯಾಪಾರ ವಹಿವಾಟು ನಡೆಸಿದ್ದಾರೆಂಬುದರ ಬಗೆಗೆ ಈ ಕೆಳಗಿನ ದಾಖಲೆಗಳು ಖಚಿತಪಡಿಸುತ್ತವೆ.

೧. ಇಸ್ವಿ ಸನ್ ಕ್ರಿ.ಶ. ೧೫೦ರಲ್ಲಿ ಟಾಲೆಮಿಯಿಂದ ಬರೆಯಲ್ಪಟ್ಟ ಭೂಗೋಳದ ಆಧಾರದ ಮೇಲೆ ಇವರ ಸಂಚಾರ ಕುರುಮಂಡಲದ ದಂಡೆಯವರೆಗೂ ಇದ್ದದ್ದು ಗೋಚರಿಸುತ್ತದೆ.

೨. ಕ್ರಿಪೂ. ೧ರಿಂದ ನಾಲ್ಕರ ನಡುವೆ ಬರೆದ ಬೌದ್ಧ ಜಾತಕದಿಂದ ತಿಳಿದುಬರುವ ಅಂಶವೆಂದರೆ ಇವರ ಸಂಚಾರ ಉತ್ತರ ಭಾರತದ ಗಂಗಾನದಿಯ ಉಗಮ ಸ್ಥಾನದವರೆಗೂ ಇದ್ದದ್ದು ತಿಳಿದುಬರುತ್ತವೆ.

೩. ಕ್ರಿ.ಶ. ೨೦೦ರಿಂದ ೧೫೦ರವರೆಗಿನ ಉತ್ಖನನದಿಂದ ದೊರೆತ ಶಾತವಾಹನರ ಶಿಲಾ ಲೇಖನಗಳಲ್ಲಿ ಮಹಾರಾಷ್ಟ್ರದ ಗಡಿಯವರೆಗೂ ಸಂಚರಿಸಿರುವ ಉಲ್ಲೇಖವಿದೆ.

೪. ಕುಶಾನರ ಶಿಲಾಲೇಖ ಕ್ರಿ.ಶ. ೨೦೦ದಿಂದ ಭಾರತದ ವಾಯುವ್ಯ ಪ್ರದೇಶದ ಮಾರ್ಗ ಕ್ರಿ.ಶ. ೭೧೩ ಸಿಕಂದರ ಮಾರ್ಗವೆಂದು ಕರೆಯಲ್ಪಡುತ್ತಿದ್ದು ಇವರ ಅಧೀನದಲ್ಲಿ ಬರುತ್ತದೆಯೆಂದು ತಿಳಿಯುತ್ತದೆ.

೫. 'ದಂಡಿಯ ದಶಕುಮಾರ ಚರಿತೆ'(ಕ್ರಿ.ಶ. ೧೧-೧೨ ಶತಮಾನ)ಯಲ್ಲಿ ಬಂಜಾರಗಳ ತಾಂಡದಲ್ಲಿ ನಡೆಯುವ ಹುಂಜಗಳ ಕಾದಾಟದ ವಿಷಯವಾಗಿ ಉಲ್ಲೇಖವಿದೆ. ಇದನ್ನು ಆಧರಿಸಿ ಎಚ್.ಎಂ. ಇಲಿಯಟ್ ಅವರು ಇವರ ಕಾಲವನ್ನು ಕ್ರಿಪೂ. ೪ನೇ ಶತಮಾನವೆಂದು ನಿರ್ಧರಿಸಿದ್ದಾನೆ. "Banjara is Nothing but the Same Anicent Tribe Which were in existence during 4th Century B.C".

೬. ಲಂಬಾಣಿಗಳ ಪೂರ್ವದ ಉತ್ಪತ್ತಿ ಮನುವಿನಿಂದ ಪ್ರಾರಂಭವಾಗಿದೆ ಎನ್ನಲಾಗಿದೆ. ಮನುವಿನ ಕಾಲ ಕ್ರಿಪೂ ೧೪೮೦ ಎಂದು ನಿರ್ಧರಿಸಲಾಗಿದೆ.

೭. ರಾಮಾಯಣದ ಸುಗ್ರೀವನನ್ನು ಲಂಬಾಣಿಗಳ ಪೂರ್ವಜನೆಂದು ಹೇಳಲಾಗುತ್ತದೆ. ಸುಗ್ರೀವನ ಕಾಲವನ್ನು ಕ್ರಿಪೂ. ೧೨೫೧-೧೧೭೫ ಎಂದು ನಿರ್ಧರಿಸಲಾಗಿದೆ.

೮. ಲಂಬಾಣಿಗರ ಮೂಲಪುರುಷ ಮೊಲಾ ಶ್ರೀ ಕೃಷ್ಣನ ಗೋರಕ್ಷನಾಗಿದ್ದನು. ಶ್ರೀಕೃಷ್ಣನ ಕಾಲ ಕ್ರಿಪೂ.೧೨೫೧-೧೧೭೫.

೯. ಲಂಬಾಣಿಗಳಲ್ಲಿ ರಾಜಭೋಜನ ಉಲ್ಲೇಖ ದೊರೆಯುತ್ತದೆ. ಈ ರಾಜಭೋಜನ ಕಾಲ ಕ್ರಿಪೂ. ೪ನೇ ಶತಮಾನವಾಗಿದೆ.

ಈ ಮೇಲಿನ ಉಲ್ಲೇಖಗಳಿಂದ ತಿಳಿಯುವುದೇನೆಂದರೆ ಲಂಬಾಣಿಗರು ರಾಜಸ್ಥಾನದಿಂದ ಚದುರಿ ದೇಶದ ಮೂಲೆ ಮೂಲೆಯಲ್ಲಿ ನೆಲೆ ನಿಂತವರಾಗಿದ್ದಾರೆ. ಹೀಗಾಗಿ ಈ ಜನಾಂಗದ ಮೂಲ ಕಾಲಘಟ್ಟವೂ ಕ್ರಿಪೂ ೧ರಿಂದ ೪ನೇ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆ.[೭]

ಕರ್ನಾಟಕದ ವಿವಿಧ ಭಾಗಗಳಲ್ಲಿ ನೆಲೆಸಿರುವ ಈ ಸಮುದಾಯದವರು ಇಂದಿಗೂ ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಇದಕ್ಕೆ ಕಾರಣ ಜೀವನ ವಿಧಾನ ನೆಲೆ, ಆಚಾರ-ವಿಚಾರ ಹಾಗೂ ಸಮುದಾಯದ ಮಹಿಳೆಯರು ಧರಿಸಿರುವ ವೇಷಭೂಷಣಗಳೇ ಇಂದಿಗೂ ಸಾಕ್ಷಿಯಾಗಿ ನಿಲ್ಲುತ್ತವೆ. ಮೂಲತಃ ರಾಜಸ್ಥಾನದವರೆಂದು ಹೇಳಲಾದ ಈ ಜನಾಂಗದವರ ಪೂರ್ವಿಕರು ಉತ್ತರ ಭಾರತದಿಂದ ಸೈನ್ಯದ ಹಿಂದೆ ದನಗಳ ಮೇಲೆ ದವಸ ಧಾನ್ಯಗಳನ್ನು ಹೇರಿಕೊಂಡು ಬಂದವರೆಂದು ಉಲ್ಲೇಖಿಸಲಾಗಿದೆ. ಮುಸ್ಲಿಮರ ಸೈನಿಕರೊಂದಿಗೆ ದಕ್ಷಿಣ ಭಾರತದ ಹಲವು ಕಡೆ ಚದುರಿದ ಇವರು ತಮ್ಮದೇ ಆದ ಅನನ್ಯತೆಯನ್ನು ಉಳಿಸಿಕೊಂಡಿದ್ದಾರೆ. ಇದಕ್ಕೆ ಉತ್ತಮ ಉದಾಹರಣೆ ಈ ಜನಾಂಗದ ವೃತ್ತಿಗಾಯಕ 'ಸಾ'ರಿಂದ ಮೇಳಕ್ಕೆ ಸಂಬಂಧಪಟ್ಟು ತನ್ನ ಸಂಪ್ರದಾಯದಲ್ಲಿ ಹಿಂದೂ–ಮುಸ್ಲಿಂ ಎರಡು ಸಂಸ್ಕೃತಿಗಳ ಸಂಗಮವನ್ನು ಸಾಧಿಸಿದ್ದಾನೆ. ಮುಸ್ಲಿಂ ನವಾಬ ನಿಷ್ಠೆಯಿಂದ ಸೇವೆ ಮಾಡಿದ ಲಂಬಾಣಿಗರಿಗೆ 'ನಿಮಗೆ ಏನು ಕೊಡುಗೆ' ಬೇಕು ಎಂದು ಕೇಳಿದಾಗ ಆಸ್ಥಾನದಲ್ಲಿ "ಸಾ"ರಿಂದ ವಾದ್ಯವನ್ನು ಹಿಡಿದು ಹಾಡುವ ಗಾಯಕನನ್ನು ತಮಗೆ ಕೊಡಬೇಕೆಂದು ಕೇಳಿಕೊಂಡರು. ಆಗ ನವಾಬ ಸಂತೋಷದಿಂದ ಲಂಬಾಣಿ ಸಮುದಾಯಕ್ಕೆ ಈ ಗಾಯಕನನ್ನು ನೀಡಿದನೆಂಬ ಪ್ರತೀತಿ ಇದೆ. ಈ ಗಾಯಕರು ಕ್ರಮೇಣ ಲಂಬಾಣಿ ಸಂಸ್ಕೃತಿಯನ್ನು ರೂಢಿಸಿಕೊಂಡು ಅವರ ಸಂಪ್ರದಾಯದ ಸಾಂಸ್ಕೃತಿಕ ವೀರರ ಮೇಲೆ ಕಾವ್ಯಗಳನ್ನು ಕಟ್ಟಿ "ಸಾ"ರಿಂದ ವಾದ್ಯವನ್ನು ನುಡಿಸುತ್ತ ಹಾಡಿಕೊಂಡು ಬಂದರು.

ಮೊಗಲರ ಕಾಲದಲ್ಲಿ ಆ ಸೈನ್ಯಕ್ಕೆ ದವಸ ಧಾನ್ಯಗಳನ್ನು ಸಾಗಿಸಲು ವಾಹನಗಳಿಲ್ಲದ ಸಂದರ್ಭದಲ್ಲಿ ಲಂಬಾಣಿಗರ ಹಸುಗಳೇ ವಾಹನಗಳಾಗಿದ್ದವು. ಶ್ರಮಜೀವಿ ಹಾಗೂ ಧೈರ್ಯಶಾಲಿಗಳಾಗಿದ್ದ ಲಂಬಾಣಿಗರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ

---

೭ ಡಾ. ಪಿ.ಕೆ. ಖಂಡೋಬಾ, ೧೯೯೧, **ಕರ್ನಾಟಕದ ಲಂಬಾಣಿಗಳು,** ಪು.ಸಂ. ೨೯–೩೦.

ನಿರ್ಭಯವಾಗಿ ಹೋಗುತ್ತಿದ್ದರು. ಹೀಗಾಗಿ ಸೈನಕರಿಗೆ ಆಹಾರ ಧಾನ್ಯ, ಮತ್ತಿತರ ವಸ್ತುಗಳನ್ನು ತಲುಪಿಸಲು ಈ ಜನಾಂಗವೇ ಮಹತ್ವದ್ದೆಂದು ಮೊಗಲರು ಇವರನ್ನು ತಮ್ಮೆಡೆಗೆ ಸೆಳೆದುಕೊಂಡರು. ಬಹುದೂರದ ಶತ್ರು ಪ್ರದೇಶದಲ್ಲಿ ಹೋರಾಡುತ್ತಿದ್ದ ಸೈನ್ಯಗಳಿಗೆ ತುಂಬಾ ಆಸರೆಯಾಗಿದ್ದ ಈ ಜನಾಂಗವನ್ನು ಯಾವ ಪಕ್ಷದವರೂ ಹಿಂಸಿಸುತ್ತಿರಲಿಲ್ಲ.

ಶಾಹಜಾನನ ಕಾಲದಲ್ಲಿ ಅವನ ವಜೀರ ಅಸಫ್‌ಖಾನನ ನೇತೃತ್ವದಲ್ಲಿ ದಕ್ಷಿಣದ ವಿಜಾಪುರದ ಆದಿಲ್‌ಶಾಹಿಯ ಮೇಲೆ ಆಕ್ರಮಣ ಮಾಡಲು ಕ್ರಿ.ಶ. ೧೬೩೦ರಲ್ಲಿ ಸುಮಾರು ಲಂಬಾಣಿ ಜನರು ಮೊಗಲರ ಸೈನ್ಯದೊಂದಿಗೆ ದಕ್ಷಿಣಕ್ಕೆ ಬಂದರು. ಕಾಲಾಂತರದಲ್ಲಿ ಈ ಭಾಗದಲ್ಲಿಯೇ ನೆಲೆಯೂರಿದರು. "ಮೊಗಲರ ಆಳ್ವಿಕೆ ಕೊನೆಗೊಂಡ ಮೇಲೆ ಹಿಂದೂಸ್ಥಾನ ದಲ್ಲಿ ಅನೇಕ ಪರಿವರ್ತನೆಗಳಾದವು. ಇದರಿಂದ ಕೆಲವರಿಗೆ ಲಾಭ, ಇನ್ನೂ ಕೆಲವರಿಗೆ ನಷ್ಟ ಉಂಟಾಯಿತು. ರೈಲು ಮೊದಲಾದ ವಾಹನ ಸೌಕರ್ಯಗಳು ಬಳಕೆಗೆ ಬಂದು ಲಂಬಾಣಿಗರ ಆವರೆಗಿನ ರಫ್ತು ಕಾರ್ಯ ಸಂಪೂರ್ಣವಾಗಿ ನಿಂತು ಹೋಯಿತು. ಇದರಿಂದ ಅವರ ಬದುಕು ದುರ್ಬಲವಾಯಿತು."[8]

ಅವರು ತಮ್ಮ ಅಸಂಖ್ಯಾತ ದನಕರುಗಳನ್ನು ಪೋಷಿಸುವುದು ದೊಡ್ಡ ಸಮಸ್ಯೆಯಾಗಿ ಅವುಗಳನ್ನು ಮಾರಾಟ ಮಾಡಿ ಬದುಕನ್ನು ಸಾಗಿಸಬೇಕಾಯಿತು. ರಫ್ತು ಕಾರ್ಯ ನಿಂತು ಹೋದ ಮೇಲೆ ಅವರ ಸಂಚರಿಸುವಿಕೆ ನಿಂತುಹೋಯಿತು. ಅಂದಿನಿಂದ ಈ ಜನರು ತಂಡೋಪತಂಡಗಳಾಗಿ ಹಿಂದೂಸ್ತಾನದ ತುಂಬೆಲ್ಲಾ ಅಲ್ಲಲ್ಲಿ ತಾಂಡದ ರೂಪದಲ್ಲಿ ಶಾಶ್ವತವಾಗಿ ನೆಲೆ ನಿಲ್ಲಲು ಆರಂಭಿಸಿದರು. ಹೀಗೆ ನೆಲೆನಿಂತ ಜನರು ಅಲ್ಲಲ್ಲಿ ವಿಭಿನ್ನ ಹುದ್ದೆಗಳಲ್ಲಿ ತೊಡಗಿದರು. ಹಾಗಾಗಿಯೇ ಆಯಾ ಪ್ರದೇಶಗಳಲ್ಲಿ ಅವರು ವಿಭಿನ್ನ ರೀತಿಯಿಂದ ಗುರುತಿಸಿಕೊಂಡರು. ಭಿನ್ನ ಚಹರೆಗಳು ರೂಢಿಯಾದವು. ಈ ಹಿನ್ನೆಲೆಯಲ್ಲಿ ಅವರನ್ನು ಆಯಾ ಪ್ರದೇಶಗಳಲ್ಲಿ ವಿಭಿನ್ನವಾದ ಜಾತಿಗಳ ಪಟ್ಟಿಗೆ ಸೇರಿಸಿರುವುದು ಕಂಡುಬರುತ್ತದೆ. ಬಿಹಾರ, ಒರಿಸ್ಸಾ, ಬಂಗಾಲ, ಆಂಧ್ರಪ್ರದೇಶ ಹಾಗೂ ಗುಜರಾತ್ ಭಾಗಗಳಲ್ಲಿ ಅವರನ್ನು ಪರಿಶಿಷ್ಟ ಬುಡಕಟ್ಟಿಗೆ(ಎಸ್.ಟಿ.,) ದೆಹಲಿ, ಹಿಮಾಚಲ, ಕರ್ನಾಟಕ, ರಾಜಸ್ತಾನ, ಕೇರಳಗಳಲ್ಲಿ ಪರಿಶಿಷ್ಟ ಜಾತಿಗೆ(ಎಸ್.ಸಿ.) ಮಹಾರಾಷ್ಟ್ರ, ಮಧ್ಯಪ್ರದೇಶ ಮೊದಲಾದ ಕಡೆಗಳಲ್ಲಿ ಅವರ್ಗೀಕೃತ ಜಾತಿ(ಡಿ.ಎನ್.ಟಿ)ಗೆ ಹಾಗೂ ಇನ್ನುಳಿದ ರಾಜ್ಯಗಳಲ್ಲಿ ಹಿಂದುಳಿದ ಜಾತಿಗೆ(ಓ.ಬಿ.ಸಿ) ಸೇರಿಸಲಾಯಿತು. ಹೀಗೆ ಅಲೆಮಾರಿಗಳಾಗಿದ್ದ ಲಂಬಾಣಿಗಳು ಬ್ರಿಟಿಷರ ವಿರುದ್ಧ ಹೋರಾಡಿದ ಬುಡಕಟ್ಟುಗಳಲ್ಲಿ ಒಂದಾಗಿದೆ. ಏಕೆಂದರೆ ಆಧುನಿಕ

---

೮. ಡಾ. ಪಿ.ಕೆ. ಖಂಡೋಬಾ, ೨೦೦೦, **ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು,** ಪು.ಸಂ. ೧೩-೧೫.

ಸಾರಿಗೆ ವಾಹನಗಳ ಬಳಕೆಯಿಂದ ಈ ಸಮುದಾಯದವರು ತಮ್ಮ ಬದುಕನ್ನು ನಿರ್ವಹಣೆ ಮಾಡಲು ತುಂಬ ಕಷ್ಟಕರವಾಯಿತು.

ಹೀಗಾಗಿ ಬ್ರಿಟಿಷರ ವಿರುದ್ಧ ಅನಿವಾರ್ಯವಾಗಿ ದಂಗೆಯೇಳುವ ಪರಿಸ್ಥಿತಿ ನಿರ್ಮಾಣವಾಯಿತು. ತಮ್ಮ ವಿರುದ್ಧ ಹೋರಾಟ ಆರಂಭಿಸಿದ ಈ ಲಂಬಾಣಿ ಸಮುದಾಯವನ್ನು ಅಪರಾಧಿ ಬುಡಕಟ್ಟಿಗೆ ಸೇರಿಸಿ ಕೊಲೆ, ಸುಲಿಗೆ, ಅತ್ಯಾಚಾರವನ್ನು ಮಾಡತೊಡಗಿದರು. ಇದರಿಂದ ನೊಂದ ಈ ಸಮುದಾಯ ಬ್ರಿಟಿಷ್ ದಬ್ಬಾಳಿಕೆಯನ್ನು ತಾಳಲಾರದೆ ತಂಡೋಪತಂಡಗಳಾಗಿ ಕಾಡುಮೇಡುಗಳಲ್ಲಿ ಅಲೆದಾಡಿದರು.

ಕೊನೆಗೆ ಕಾಡಿನಿಂದ ಹೊರಬಿದ್ದ ಈ ಜನ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತ ಅನೇಕ ಕಷ್ಟನಷ್ಟಗಳನ್ನು ಅನುಭವಿಸುತ್ತಾ ಸುಮಾರು ೧೯ನೇ ಶತಮಾನದ ಉತ್ತರಾರ್ಧದಲ್ಲಿ ತಾಂಡಾದ ರೂಪದಲ್ಲಿ ನಿಶ್ಚಿತವಾಗಿ ಒಂದೊಂದು ಕಡೆಗೆ ನೆಲೆಯಾದರು. ಭಾರತದಲ್ಲಿರುವ ಲಂಬಾಣಿಗರು ತಮ್ಮ ಆಚಾರ-ವಿಚಾರದಲ್ಲಿ, ಉಡುಗೆ-ತೊಡುಗೆಯಲ್ಲಿ ಗ್ರಾಮ ಹಾಗೂ ನಗರ ಸಂಸ್ಕೃತಿಗೂ ಸೇರಿಕೊಳ್ಳದೆ ತಮ್ಮದೇ ಆದ ಒಂದು ವಿಶಿಷ್ಟ ಸಂಸ್ಕೃತಿಯನ್ನು ಇಂದಿಗೂ ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ.

**ಲಂಬಾಣಿ ಪದದ ನಿಷ್ಪತ್ತಿ**

ಭಾರತದಾದ್ಯಂತ ಹರಡಿರುವ ಲಂಬಾಣಿ ಜನಾಂಗವನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಈ ಸಮುದಾಯದವರು ತಮ್ಮನ್ನು ತಾವು "ಗೋರಮಾಟಿ" ಎಂದು ಕರೆದುಕೊಳ್ಳುತ್ತಾರೆ. ಸುಮಾರು ಇಪ್ಪತ್ತೇಳು ಬಗೆಯ ಹೆಸರುಗಳಿಂದ ಲಂಬಾಣಿಗರನ್ನು ಗುರುತಿಸಲಾಗುತ್ತದೆ. ಬೇರೆ ಬೇರೆ ರಾಜ್ಯಗಳಲ್ಲಿ ಇವರನ್ನು ಕರೆಯುವ ಹೆಸರುಗಳಲ್ಲಿ ವಿಭಿನ್ನತೆಯನ್ನು ಕಾಣಬಹುದಾಗಿದೆ.

"ಬಂಜಾರ, ಬಂಜಾರಿ, ಬಣಜಾರ, ಬ್ರಂಜಾರಿ, ಬನಜಾರ, ಬಜವಾಸಿ, ಲಮಾಣಿ, ಲಂಬಾಣಿ, ಲಮಾನ, ಲಂಬಾಡ, ಲಂಬಾಡಿ, ಲಬಾನ, ಸುಗಾಲಿ ಹೀಗೆ ಹಲವು ರೀತಿಯಲ್ಲಿ ಈ ಸಮುದಾಯವನ್ನು ಗುರುತಿಸಲಾಗುತ್ತದೆ. ಸಾಮಾನ್ಯವಾಗಿ ಬಂಜಾರ ಎಂಬ ಪದ ಪ್ರಯೋಗ ಹೆಚ್ಚು ಕಂಡುಬರುತ್ತದೆ. ಮೂಲತಃ ವರ್ತಕರಾಗಿದ್ದ ಇವರನ್ನು ಬಂಜಾರ, ಬಣಜಾರ ಹೀಗೆ ಕರೆಯುವುದುಂಟು. "ಬಂಜಾರ ಎಂಬ ಪದ ಸಂಸ್ಕೃತದ ವಾಣಿಜ್ಯ ಎಂಬ ಶಬ್ದದಿಂದ ಉತ್ಪತ್ತಿಯಾಗಿದೆ. ಪೂರ್ವದಲ್ಲಿ ಇವರು ವ್ಯಾಪಾರವನ್ನು ಕೈಗೊಂಡು ದೇಶ ವಿದೇಶಗಳಲ್ಲಿ ಸಂಚರಿಸುತ್ತಿದ್ದುದ್ದರಿಂದ ಇವರನ್ನು ಬಂಜಾರ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ".[೯] 'ಬಣ' ಎಂದರೆ ಗುಂಪು. ಈ ಜನ ಗುಂಪುಗಳಲ್ಲಿ

---

೯. L.K.A. Iyear, **The Mysore Tribe and Castes**, Vol-II, pag-135-136.

ವಾಸಿಸುತ್ತಿದ್ದುದ್ದರಿಂದ ಇವರನ್ನು 'ಬಣಜಾರ' ಎಂದು ಕರೆದಿರಬೇಕು. ವನಚರ ಅಂದರೆ ಅಡವಿಯಲ್ಲಿ ಸಂಚರಿಸುವವನು ಎಂದರ್ಥ. ವನಸಂಚಾರಿಗಳಾದ ಲಂಬಾಣಿಗರು ವ್ಯಾಪಾರಕ್ಕಾಗಿ ತಮ್ಮ ಜಾನುವಾರುಗಳ ಮೇಲೆ ಸಾಮಾನುಗಳನ್ನು ಹೇರಿಕೊಂಡು ಅಡವಿ ಮುಖಾಂತರವಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದರಿಂದ ಇವರು ವನಚರ, ವನಜಾರ, ಬನಜಾರ, ಬಂಜಾರ ಎಂದು ಕರೆಯಲ್ಪಟ್ಟರು.

ಈ ಮೇಲ್ಕಂಡ ವಿದ್ವಾಂಸರ ಹೇಳಿಕೆಗಳನ್ನು ಗಮನಿಸಿದಾಗ ಬಂಜಾರ ಪದದ ನಿಷ್ಪತ್ತಿ ಮುಖ್ಯವಾಗಿ ನಾಲ್ಕು ಮೂಲಗಳಿಂದ ಬಂದಿರುವುದು ತಿಳಿದುಬರುತ್ತದೆ. "ಮೊದಲನೆಯದಾಗಿ ಸಂಸ್ಕೃತದ 'ವಣಿಕ್' ಪದದಿಂದ, ಎರಡನೆಯದಾಗಿ ಹಿಂದಿಯ 'ವನಚರ' ಪದದಿಂದ, ಮೂರನೆಯದಾಗಿ ಪರ್ಶಿಯ ಮೂಲದ 'ಬ್ರಂಜಾರಾ' ಪದದಿಂದ, ನಾಲ್ಕನೆಯದಾಗಿ ಪಂಜಾಬಿ ಮೂಲದ 'ಬಹಜ್ನ' ಪದದಿಂದ ಒಟ್ಟು ಈ ನಾಲ್ಕು ಮೂಲದಿಂದ ಬಂದ ಪದಗಳಲ್ಲಿ ಪರ್ಶಿಯನ್ ಮೂಲದ ಬ್ರಂಜಾರ ಪದವು ಬಂಜಾರ ಎಂಬ ಪದಕ್ಕೆ ಮೂಲವಾಗಿರಬೇಕೆಂದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ."[೧೦] ಈ ಬುಡಕಟ್ಟು ಸಮುದಾಯವನ್ನು ದೇಶದ ವಿವಿದೆಡೆ ಭಿನ್ನ ರೀತಿಯಲ್ಲಿ ಸಂಬೋಧಿಸುವ ಪರಿಪಾಟವಿದೆ. ಲಮಾಣಿ ಅಥವಾ ಲಂಬಾಣಿ, ಸುಗಾಲಿ, ಲಂಬಾಡಿ, ಲಬಾನ ಹೀಗೆ ಮುಂತಾದ ಹೆಸರುಗಳಿಂದ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರಗಳಲ್ಲಿ ಕರೆಯುವುದುಂಟು. ಎಚ್.ವಿ. ನಂಜುಂಡಯ್ಯ ಹಾಗೂ ಅನಂತಕೃಷ್ಣಅಯ್ಯರ್ ಅವರು ಲಮಾಣಿ ಅಥವಾ ಲಂಬಾಣಿ ಎಂಬುದು ಸಂಸ್ಕೃತದ 'ಲವಣ'(ಉಪ್ಪು) ಎಂಬ ಶಬ್ದದಿಂದ ಬಂದುದಾಗಿದೆ. ಲವಣ ಇದರ ಅಪಭ್ರಂಶ. ಲಮಣ ಇದರ ವಿಶೇಷಣ. ಲಮಾಣಿ ಪೂರ್ವದಲ್ಲಿ ಈ ಜನರು ಲವಣದ ವ್ಯಾಪಾರವನ್ನು ಮಾಡುತ್ತಿದ್ದುದ್ದರಿಂದ ಲಮಾಣಿಗರನ್ನು ಮುಂದೆ ಅಪಭ್ರಂಶಗೊಂಡ ಲಮಾಣಿಗ, ಲಂಬಾಣಿಗ, ಲಂಬಾಡಿಗರು ಎಂದು ನಿಷ್ಪತ್ತಿ ಹೊಂದಿ ಹೆಸರುಗಳಿಂದ ಕರೆಯಲ್ಪಟ್ಟರು.[೧೧]

ಆಂಧ್ರಪ್ರದೇಶ, ಕೇರಳ, ತಮಿಳುನಾಡು ಹೀಗೆ ಹಲವು ಪ್ರಾಂತ್ಯಗಳಲ್ಲಿ ಈ ಜನರನ್ನು ಸುಕಾಲಿ, ಸುಗಾಲಿ ಎಂದು ಕರೆಯುವುದುಂಟು. ಈ ಜನರು ಪ್ರಾರಂಭದಿಂದಲೂ ಗೋಪಾಲಕರಾಗಿದ್ದುದರಿಂದ ಈ ಭಾಗದಲ್ಲಿ ಈ ಸಮುದಾಯವನ್ನು ಮೇಲಿನ ಹೆಸರುಗಳಿಂದ ಸಂಬೋಧಿಸುವರು. ತೆಲುಗು ಭಾಷೆಯಲ್ಲಿ ಗೋವುಗಳಿಗೆ ಸುಗಾಲಿಯೆಂದು ಕರೆಯುತ್ತಾರೆ. ಹೀಗಾಗಿ ಹೆಚ್ಚು ಗೋವುಗಳನ್ನು ಹೊಂದಿದ ಈ ಸಮುದಾಯಕ್ಕೆ 'ಸುಕಾಲಿ' ಎಂದು ಕರೆಯುವವರು.

---

೧೦. ಡಾ. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ,** ಪು.ಸಂ. ೧೫.

೧೧. ಡಾ. ಪಿ.ಕೆ. ಖಂಡೋಬ, ೧೯೯೧, **ಕರ್ನಾಟಕದ ಲಂಬಾಣಿಗಳು,** ಪು.ಸಂ. ೧೦-೧೧.

ಹೀಗೆ ಲಂಬಾಣಿ ಪದನಿಷ್ಪತ್ತಿಯ ಕುರಿತಾಗಿ ಹಲವು ವಿದ್ವಾಂಸರು ಆಯಾ ಪ್ರದೇಶವಾರು ಕೈಗೊಂಡ ವೃತ್ತಿಯ ಆಧಾರದ ಮೇಲೆ ವಿಂಗಡಿಸಿದ್ದಾರೆ.

ಪ್ರತಿಯೊಂದು ಜನಾಂಗಕ್ಕೆ ತನ್ನದೇ ಆದ ಪ್ರಾಚೀನ ಇತಿಹಾಸ ಇರುತ್ತದೆ. ಆದರೆ ಈ ಜನಾಂಗದ ಇತಿಹಾಸವನ್ನು ಕುರಿತು ಅಧ್ಯಯನ ಮಾಡುವುದು ಅಷ್ಟು ಸುಲಭದ ಮಾತಲ್ಲ. ಹಲವು ರೀತಿಯ ಆಧಾರಗಳು ದೊರೆತರೂ ಅನೇಕ ವಿಷಯಗಳಲ್ಲಿ ಎಡರು ತೊಡರುಗಳನ್ನು ಅನುಭವಿಸಬೇಕಾಗುತ್ತದೆ. ಏಕೆಂದರೆ ಹಲವು ವಿಷಯಗಳು ಇವರ ಕುರಿತು ಕಾಲಗರ್ಭದಲ್ಲಿ ಮರೆಮಾಚಿರುತ್ತವೆ.

ಹೀಗಾಗಿ ಲಂಬಾಣಿ ಸಮುದಾಯದ ಇತಿಹಾಸವನ್ನು ಕುರಿತಾಗಿ ಹಲವು ಜನ ವಿದ್ವಾಂಸರು ಶೋಧಿಸಿದ್ದಾರೆ. ಇದು ಅತ್ಯಂತ ಪ್ರಯಾಸದ ಸಂಶೋಧನೆ. ಈ ಅಧ್ಯಯನಗಳು ಲಂಬಾಣಿಗರ ಈ ಪ್ರಾಚೀನತೆಯನ್ನು ಕುರಿತಾಗಿ ಅಧ್ಯಯನ ಮಾಡುವುದು ತುಂಬಾ ಕಷ್ಟದ ಕೆಲಸ. ಏಕೆಂದರೆ ಈ ಸಮಾಜದ ಬಗ್ಗೆ ಮಹತ್ತರವಾದ ಯಾವುದೇ ಲಿಖಿತರೂಪದ ಪ್ರಾಚೀನ ಉಲ್ಲೇಖಗಳು ಕಂಡುಬರುವುದಿಲ್ಲ.

ಹೀಗಾಗಿ ಈ ಜನಾಂಗದ ಕುರಿತಾಗಿ ಇತರೆ ಭಾಷೆಗಳಲ್ಲಿ ಬಂದಿರುವ ಆಕರಗಳನ್ನು ಶೋಧಿಸಬೇಕಾಗುತ್ತದೆ. ಈ ಸಮುದಾಯದ ಕುರಿತಾಗಿ ಅಧ್ಯಯನ ಮಾಡಿದ ವಿದ್ವಾಂಸರಾದ ಡಾ. ಸಣ್ಣರಾಮ, ಡಾ. ಪಿ.ಕೆ. ಖಂಡೋಬಾ, ಡಾ. ಹರಿಲಾಲ ಪವಾರ್ ಹಾಗೂ ಡಾ. ಡಿ.ಬಿ. ನಾಯಕರಂತಹ ವಿಚಾರಶೀಲರು ಈ ಸಮುದಾಯದ ಬಗೆಗೆ ಕೆಲವು ಆಧಾರಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಿದ್ದಾರೆ.

**೨.೨. ಮೌಖಿಕ ಆಧಾರಗಳು**

ಭಾರತದ ಕೆಲವೊಂದು ಬುಡಕಟ್ಟು ಭಾಷೆಗಳಿಗೆ ಲಿಪಿ ಇಲ್ಲ. ಅವುಗಳಲ್ಲಿ ಲಂಬಾಣಿ ಬುಡಕಟ್ಟು ಒಂದಾಗಿದೆ. ಹೀಗಾಗಿ ಇವರು ಶತಶತಮಾನಗಳಿಂದ ಮೌಖಿಕವಾಗಿ ಉಳಿಸಿಕೊಂಡು ಬಂದಿರುವ ಕೆಲವು ಐತಿಹ್ಯ ಮತ್ತು ಪುರಾಣಗಳ ಮೂಲಕ ಇವರ ಪ್ರಾಚೀನತೆಯನ್ನು ಕಂಡುಕೊಳ್ಳಬೇಕಾಗುತ್ತದೆ. ಈ ಮೌಖಿಕ ಸಾಹಿತ್ಯದ ಪರಂಪರೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನ ಪಾಠಾಂತರವಾಗುವ ಸಾಧ್ಯತೆ ಇದೆ. ಹೀಗಾಗಿ ಮೌಖಿಕ ಸಾಹಿತ್ಯದ ಮೂಲಕ ಸತ್ಯದ ಕುರುಹನ್ನು ಶೋಧಿಸುವಲ್ಲಿ ಅಡೆತಡೆಗಳು ಉಂಟಾಗುತ್ತವೆ. ಈ ಸಮುದಾಯದ ವಂಶೋತ್ಪತ್ತಿಯ ಕುರಿತಾಗಿ ಹಲವು ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಇವರ ಜಾತಿ, ಕುಲಗೋತ್ರ ಕುರಿತಾಗಿ ಜನಪದ ಕಥೆಗಳು, ಐತಿಹ್ಯಗಳು

ನೆರವಾಗುತ್ತವೆ. ಹೀಗಾಗಿ ಲಂಬಾಣಿ ಸಮುದಾಯದ ಉತ್ಪತ್ತಿಯ ಕುರಿತಾಗಿ ಈ ಕೆಳಗಿನ ಐತಿಹ್ಯಗಳ ಮೂಲಕ ಸಾದರಪಡಿಸಬಹುದು.

**ಐತಿಹ್ಯ ಒಂದು**

ಲಂಬಾಣಿಗರು ತಮ್ಮ ವಂಶೋತ್ಪತ್ತಿಯ ಕುರಿತಾಗಿ ಈ ಕೆಳಗಿನಂತೆ ಹೇಳುತ್ತಾರೆ.




ಈ ಮೇಲಿನ ಉಲ್ಲೇಖದ ಕೊನೆಯ ಭಾಗವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಜೋಗಿ, ಭೈಲ್ ಕಮ್ಮಾರ, ಮಾರವಾಡಿ, ಲಂಬಾಣಿ, ಹಕ್ಕಿಪಿಕ್ಕಿ(ವಾಗರಿ) ಈ ಐದು

ಬುಡಕಟ್ಟುಗಳು ಒಂದೇ ಮೂಲದಿಂದ ರೂಪಗೊಂಡಿವೆಯೆಂದು ತಿಳಿದುಬರುತ್ತದೆ. ಜೋಗಿ, ಮಾರವಾಡಿಗಳಿಗೆ ವ್ಯಾಪಾರವನ್ನು, ಬೈಲಕಮ್ಮಾರರಿಗೆ ಕಬ್ಬಿಣದ ಕೆಲಸವನ್ನು, ಲಂಬಾಣಿಗಳಿಗೆ ವ್ಯಾಪಾರವನ್ನು, ಹರಿಣಿ ಶಿಕಾರಿಗಳಿಗೆ ಬೇಟೆಯಾಡುವಿಕೆ ಹೀಗೆ ಮುಂದೆ ಅವರು ತಮ್ಮ ವೃತ್ತಿಯ ನಿಮಿತ್ತ ಪ್ರತ್ಯೇಕ ಬುಡಕಟ್ಟುಗಳಾಗಿ ಬೆಳೆದಿರಬೇಕು".[೧೨] 'ಮೋಲಾ' ಎಂಬ ವ್ಯಕ್ತಿಯಿಂದ ಲಂಬಾಣಿ ವಂಶ ಮುಂದೆ ಬೆಳೆದಿರಬೇಕೆಂದು ಹಲವು ವಿದ್ವಾಂಸರು ಈ ಮೌಖಿಕ ಆಧಾರಗಳ ಮೂಲಕ ಸಾದರಪಡಿಸುತ್ತಾರೆ. ಲಂಬಾಣಿಗರ ಮೂಲಪುರುಷನಾದ 'ಮೋಲಾ'ನಿಂದ ಮುಂದೆ ಲಂಬಾಣಿ ಬುಡಕಟ್ಟು ಬೆಳೆದಿರಬೇಕೆಂದು ಕೆಲವು ಐತಿಹ್ಯಗಳು ದೃಢಪಡಿಸುತ್ತವೆ. ಲಂಬಾಣಿಗರಲ್ಲಿ 'ಮೋಲಾ'ನ ಕುರಿತಾಗಿ ಹಲವು ರೀತಿಯ ಐತಿಹ್ಯಗಳು ಸೃಷ್ಟಿಗೊಂಡಿವೆ. ಅವನ ಕುರಿತಾಗಿ ಅನೇಕ ರೀತಿಯ ಕಥೆಗಳು ಹೆಣೆದುಕೊಂಡಿವೆ. ಈ ಎಲ್ಲಾ ಕಥೆ ಹಾಗೂ ಐತಿಹ್ಯಗಳನ್ನು ಪರಿಗಣಿಸಿದ ವಿದ್ವಾಂಸರಾದ ಡಾ.ಪಿ.ಕೆ.ಖಂಡೋಬಾ ಅವರು ಮೋಲನಿಂದಲೆ ಈ ಸಮುದಾಯದ ವಂಶವೃಕ್ಷ ಬೆಳೆದಿದೆಯೆಂದು ಸದ್ಯದ ಮಟ್ಟಿಗೆ ಹೇಳುತ್ತಾರೆ.

**ಐತಿಹ್ಯ ಎರಡು**

ಲಂಬಾಣಿಗರ ಸಂಚಾರಿ ವ್ಯಾಪಾರಿ ವೃತ್ತಿಯನ್ನು ಕುರಿತ ವಿಭಿನ್ನ ವಿವರಗಳು ಅನೇಕ ಗೀತೆಗಳಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಈ ಗೀತೆಯನ್ನು ಇಲ್ಲಿ ಉಲ್ಲೇಖಿಸಲಾಗಿದೆ.

"ಬಾರನ್ ಕೋಸೇಪರ ಮೈಯಾಬಾಳದ ಬಗದಿ।
ಹಾರೇ ಮೈಯಾ ಬಾಳದ ಬಗದಿ।
ಆವನ್ ಢಳೋ ಬಣಜಾರಾಯ।
ಕೊಂರೇ ಬಣಜಾರಾ ಮಾರಿಯ ಜಾತರಭರೋ।
ಹಾರೇ ಮೈಯಾ ಜಾತರ ಲಾಯೇ।
ಧಜಾ ನಾರಳ ಮೈಯಾ ಹಾಜರಲಾಯೇ।
ಅವಢಳೋ ಬಣಜಾರಾಯ। (ವಳಂಗ ಗೀತೆ)"[೧೩]

ಈ ಗೀತೆಯನ್ನು ಅವಲೋಕಿಸಿ ಹೇಳುವುದಾದರೆ ಹನ್ನೆರಡು ಹರದಾರಿಗಳ ದೂರದಲ್ಲಿ ಸಂಪತ್ತು, ಸಮೃದ್ಧಿಯಿಂದ ಕೂಡಿದ ಬಣಜಾರಗಳು ತಾಂಡವನ್ನು ನಿರ್ಮಿಸಿದ್ದಾರೆ. ಹೇ ಮಾರಿ ದೇವತೆಯೇ ನಿನ್ನ ಜಾತ್ರೆಯನ್ನು ತಪ್ಪದೆ ಮಾಡುತ್ತಿದ್ದಾರೆ. ಮಾತೆ, ನಿನಗೆ ಧೂಪ, ದೀಪ, ನೈವೇದ್ಯ ಕಾಯಿ ಕರ್ಪೂರಗಳನ್ನು ಸಲ್ಲಿಸುತ್ತಾರೆ. ಪ್ರಸ್ತುತ ಗೀತೆಯಲ್ಲಿ ಮೊದಲ ಸಾಲುಗಳು ಗಮನ ಸೆಳೆಯುತ್ತವೆ ಹಾಗೂ ಉಲ್ಲೇಖಿತಗೊಂಡಿರುವ ಬಣಜಾರ,

---

೧೨. ಡಾ. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ,** ಪು.ಸಂ. ೨೨-೨೩.

೧೩. ಡಾ. ಡಿ.ಬಿ. ನಾಯಕ, ೨೦೦೦, **ಲಂಬಾಣಿ ಜನಪದ ಸಾಹಿತ್ಯ,** ಪು.ಸಂ. ೧೪೩.

ತಾಂಡೊಥಳೋ(ತಾಂಡ ಹಾಕು) ಪದಗಳು ಲಂಬಾಣಿಗರ ವ್ಯಾಪಾರಿ ವೃತ್ತಿ ಮತ್ತು ಸಂಚಾರಿ ಜೀವನವನ್ನು ತಿಳಿಸುತ್ತವೆ. ಹಾಗೆ ಹೋಳಿ ಹಬ್ಬದ ಗೀತೆಯಲ್ಲಿ;

ಆದಿ ಆದಿ ರಾತೆರೋ ತಾಂಡಲೊಯೇ ಲಾದೋ।
ತಾಂಡೋ ಲಾದ ಆರೊ, ಲದೇಣಿನಚಾಲೋ।
ಭೋಜಾಯಿಯ ಕಾಗಲಾ ಲೇಗೋ ಕಬೋಲಿಯ।
ಅಬಕೆದೂಚು... ತೋನ।[೧೪]

ಅರ್ಧರಾತ್ರಿಯಲ್ಲಿ ತಾಂಡಾ ಸಾಗಿತು, ವ್ಯಾಪಾರಕ್ಕಾಗಿ ದೂರದ ಪ್ರದೇಶಕ್ಕೆ ಹೋಯಿತು. ಅತ್ತಿಗೆಯೇ ಕಾಗೆಯ ಕಬೋಲಿಯನ್ನು ತೆಗೆದುಕೊಂಡು ಹೋಯಿತು. ನಾನೀಗ ಅದನ್ನು ಅಣ್ಣನಿಗೆ ಹೇಳಿಬಿಡುತ್ತೇನೆ.

ಈ ಗೀತೆಯಲ್ಲಿ ಅರ್ಧರಾತ್ರಿಯಲ್ಲಿ ತಾಂಡಾ ಸಾಗುವುದು ಹಾಗೂ ವ್ಯಾಪಾರಕ್ಕಾಗಿ ಪ್ರಯಾಣ ಮಾಡುವುದು ಲಂಬಾಣಿಗರ ಸಂಚಾರಿ ಜೀವನ ಹಾಗೂ ವ್ಯಾಪಾರಿ ವೃತ್ತಿಯನ್ನು ಸ್ಪಷ್ಟಪಡಿಸಿವೆ.

**ಐತಿಹ್ಯ ಮೂರು**

ಲಂಬಾಣಿಗಳು ತಮ್ಮ ಮೂಲ ವೃತ್ತಿ ದೊಂಬರಾಟವಾಗಿತ್ತು ಎಂದು ಹೇಳುತ್ತಾರೆ. ಇದಕ್ಕೆ ಚರಿತ್ರೆಯಲ್ಲಿ ಯಾವುದೇ ಲಿಖಿತವಾದ ಆಧಾರಗಳು ದೊರೆಯುವುದಿಲ್ಲವಾದರೂ ಆ ಜನಾಂಗದಲ್ಲಿ ದೊರೆಯುವ ವಿಪುಲವಾದ ಮೌಖಿಕ ಆಧಾರಗಳು ಬಹಳ ಖಚಿತವಾಗಿ ಅವರ ವೃತ್ತಿಯ ಬಗೆಗೆ ಸಾಕಷ್ಟು ಮಾಹಿತಿಯನ್ನು ಒದಗಿಸುತ್ತವೆ. ಅಷ್ಟೇ ಅಲ್ಲದೆ ಈ ದೊಂಬರಾಟದ ವೃತ್ತಿಯು ಲಂಬಾಣಿ ಸಂಸ್ಕೃತಿಯ ಮೇಲೆ ಎಂದೂ ಮರೆಯಲಾಗದ ಪ್ರಭಾವ ಬೀರಿರುವುದನ್ನು ಆಧಾರ ಸಮೇತ ತೋರಿಸಲಾಗುತ್ತಿದೆ.

ಈ ವೃತ್ತಿಗೆ ಸಂಬಂಧಿಸಿದಂತೆ ಲಂಬಾಣಿಗಳಲ್ಲಿ ಅತ್ಯಂತ ಜನಪ್ರಿಯವಾದ ಹೇಳಿಕೆಯನ್ನು ನಾವೂ ಗಮನಿಸಬಹುದು.

"ಮಾಣಕಿರ್ ಖಾವ್, ಗದ್ದಾರಿ ಲದಣಿ
ಸೂರೇರಿ ಡಾರ್, ಕೆಂಟೋ ಭರೋ ತಮಾಕು
ಗುಣೆಮಾರ್ ಜಾಂಗ್ಯಾ, ಬುಂಟಸ್ ಭರ್ಚಿ
ಸಿಂಗೀಸ್ ಕೊತ್ರಿ, ಸಾಟೆಹಾ ತೇರಿ ಭಾಲೋ
ರಂಗೀ ಭಂಗಿರ್ ಡೋಲ್ ಅಂತರ್ ಮಂತರ್ ಲಾಗಾಮಾರತೆ ಆಯೇ"[೧೫]

---

೧೪. ಡಾ. ಡಿ.ಬಿ. ನಾಯಕ, ೨೦೦೦, **ಲಂಬಾಣಿ ಜನಪದ ಸಾಹಿತ್ಯ,** ಪು.ಸಂ. ೧೫೪.

೧೫. ಡಾ. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ,** ಪು.ಸಂ. ೩೨-೩೩.

ಇವರು ಗಂಡ–ಹೆಂಡತಿ ಮತ್ತು ಮಕ್ಕಳು ಒಟ್ಟಿಗೆ ಸೇರಿ ಒಂದೇ ಗಂಗಾಳದಲ್ಲಿ ಊಟ ಮಾಡುವ ಪದ್ಧತಿಯನ್ನುಳ್ಳವರು. ಕತ್ತೆಯ ಹೇರು, ಹಂದಿಯ ಮಂದೆ, ಹಿಡಿಯಷ್ಟು ತಂಬಾಕು, ದೊಗಲೆ ಚಡ್ಡಿ, ಮಡ್ಡ ಚೂರಿ, ಬಡಕಲು ನಾಯಿ, ಆರವತ್ತು ಮೊಳ ಉದ್ದದ ಬೊಂಬು, ಬಣ್ಣ ಬಣ್ಣದ ಡೋಲು ಸಮೇತ ಒಳ ಹೊರ ಲಾಗ ಹಾಕುತ್ತ ಬಂದವರು.

ಈ ಮೇಲಿನ ಐತಿಹ್ಯವನ್ನು ಗಮನಿಸಿದಾಗ ಮೌಖಿಕ ಸಂಪ್ರದಾಯದಲ್ಲಿ ತಲೆತಲಾಂತರದಿಂದ ಬಂದ ಈ ದೊಂಬರಾಟವೇ ಅವರ ವೃತ್ತಿ ಇದ್ದಿರಬೇಕೆಂದು ಊಹಿಸಬಹುದಾಗಿದೆ. ಹೀಗೆ ಈ ಗೀತೆಯಲ್ಲಿ ಆರ್ಧ ರಾತ್ರಿ ತಾಂಡಾ ಸಾಗುವುದು ಹಾಗೂ ವ್ಯಾಪಾರಕ್ಕಾಗಿ ಪ್ರಯಾಣ ಮಾಡುವುದು ಲಂಬಾಣಿಗರ ಸಂಚಾರಿ ಜೀವನ ಹಾಗೂ ವ್ಯಾಪಾರಿ ವೃತ್ತಿಯನ್ನು ಸ್ಪಷ್ಟಪಡಿಸುತ್ತದೆ.

### ೨.೩. ಶಾಸನಗಳಲ್ಲಿ ಲಂಬಾಣಿಗರ ಉಲ್ಲೇಖ

ಭಾರತದ ಇತಿಹಾಸದಲ್ಲಿ ಅನೇಕ ರಾಜಮಹಾರಾಜರು ಕೆತ್ತಿಸಿರುವ ಶಾಸನಗಳನ್ನು ನಾವು ನೋಡಿದ್ದೇವೆ. ಅದರಲ್ಲೂ ಅಶೋಕನ ಕಾಲದಲ್ಲಂತೂ ಅನೇಕ ಶಾಸನಗಳು ಕಂಡುಬರುತ್ತವೆ. ಅದರಲ್ಲಿ ಆಯಾಕಾಲದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸಿತ್ಥಿಗತಿಗಳ ಬಗೆಗೆ ಈ ಶಾಸನಗಳು ಬೆಳಕು ಚೆಲ್ಲುತ್ತವೆ. ಭಾರತದ ಉದ್ದಗಲಕ್ಕೂ ಸಹಸ್ರಾರು ಶಾಸನಗಳು ಕಂಡುಬಂದರೂ ಮುಖ್ಯವಾಗಿ ನಾಡಿಗೆ, ನಾಡಿನ ಸಂಸ್ಕೃತಿಗೆ ತನ್ನದೇ ಆದ ಸೇವೆ ಸಲ್ಲಿಸಿದ ಪ್ರಮುಖ ಜನಾಂಗಗಳಲ್ಲಿ ಒಂದಾದ ಲಂಬಾಣಿ ಸಮುದಾಯವನ್ನು ಕುರಿತಂತೆ ಈ ಶಾಸನಗಳಲ್ಲಿ ಹೆಚ್ಚು ಉಲ್ಲೇಖ ಇಲ್ಲದಿರುವುದು ಒಂದು ಆಶ್ಚರ್ಯದ ಸಂಗತಿ. ಆದ್ದರಿಂದಾಗಿ ಲಂಬಾಣಿಗರ ಪೂರ್ವ ಇತಿಹಾಸವನ್ನು ತಿಳಿದುಕೊಳ್ಳಲು ಶಾಸನಗಳನ್ನು ಆಧರಿಸಿ ಹೇಳಲು ನಮಗೆ ಯಾವ ಆಧಾರಗಳೂ ಸಿಗುವುದಿಲ್ಲ. "ಆದರೆ ಕುಂಬ್ರಲೆಜ್ ಅವರು ತಮ್ಮ ಗ್ರಂಥದಲ್ಲಿ 'ಭಂಗಿ–ಜಂಗಿ' ಎಂಬಿಬ್ಬರ ನಾಯಕರ ಬಗೆಗೆ ಮಾಹಿತಿಯನ್ನು ನೀಡುತ್ತಾರೆ. ಈ ಇಬ್ಬರು ಅಸಫ್‌ಜಾನ್ ಮತ್ತು ಅವನ ವಜೀರನಾದ ಷಹಜಹಾನ್ ಎಂಬುವರೊಂದಿಗೆ ಕ್ರಿ.ಶ. ೧೬೩೦ರಲ್ಲಿ ಮಾಡಿಕೊಂಡ ಒಪ್ಪಂದದ ಬಗೆಗೆ ಒಂದು ತಾಮ್ರಪತ್ರವನ್ನು ಕುರಿತು ಕುಂಬ್ರಲೆಜ್ ಅವರು ಉಲ್ಲೇಖಿಸುತ್ತಾರೆ".[೧೬] ಈ ತಾಮ್ರಪತ್ರವನ್ನು ಈಗಲೂ ಹೈದರಾಬಾದ್ ಕೋರ್ಟಿನ ಪ್ರವೇಶ ದ್ವಾರದಲ್ಲಿ ಕಾಣಬಹುದಾಗಿದೆ. ಉತ್ತರ ಭಾರತದಿಂದ ದಕ್ಷಿಣ ಭಾರತದ ಕಡೆಗೆ ಯುದ್ಧ ಮಾಡ ಹೊರಟ ಸೈನಿಕರನ್ನು ಹಿಂಬಾಲಿಸಲು ಅಸಂಖ್ಯಾತ ಜಾನುವಾರುಗಳನ್ನುಳ್ಳ ಜಂಗಿ–ಭಂಗಿ ಎಂಬ ಹೆಸರಿನ ಬಂಜಾರಿ ನಾಯಕರಿಗೂ ಮತ್ತು ೫೨.೦೦೦ ಜಾನುವಾರುಗಳನ್ನುಳ್ಳ

---

೧೬. ಡಾ. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ**, ಪು.ಸಂ. ೨೬.

ಭಗವಾನದಾಸ್ ವಡತ್ಯಾನಿಗೂ ಅಸಫ್‌ಜಾನ್ ಆದೇಶಿಸಿರುವುದು ಇಲ್ಲಿ ಕಂಡುಬರುತ್ತದೆ. ಸರಕು ಸಾಗಾಣಿಕೆಯಿಂದ ಆಗಬಹುದಾದ ತೊಂದರೆಯನ್ನು ಮೊದಲೇ ಊಹಿಸಿದ್ದ ಅಸಫ್‌ಜಾನ್ ಜಂಗಿ-ಭಂಗಿ ನಾಯಕರಿಗೆ ಬಂಗಾರದ ಬರಹವಿರುವ ತಾಮ್ರಶಾಸನದ ಮೂಲಕ ನಿರೂಪಣೆಯೊಂದನ್ನು ಹೊರಡಿಸಿರುವುದನ್ನು ಕೂಡ ಕುಂಬ್ರಲೆಜ್ ಅವರು ಉಲ್ಲೇಖಿಸಿದ್ದಾರೆ. ಅಲ್ಲದೆ ಈ ಶಾಸನದಲ್ಲಿ ಉಲ್ಲೇಖಿಸಿದಂತೆ ಜಂಗಿ-ಭಂಗಿ ನಾಯಕರು ತಮ್ಮ ಜಾನುವಾರುಗಳಿಗೆ ನೀರಿನ ತೊಂದರೆಯಾದಲ್ಲಿ ನನ್ನನ್ನು ಹಿಂಬಾಲಿಸುತ್ತಿರುವ ಸೈನಿಕರ ಪಾತ್ರೆಯಿಂದ ತೆಗೆದುಕೊಳ್ಳಬಹುದು ಎನ್ನುವ ವಿವರ ಪಶುಪಾಲನೆಗೆ ಅಥವಾ ಪಶುಗಳಿಗೆ ನೀಡಿದ ಮಹತ್ವವನ್ನು ಸಾರುತ್ತದೆ.

ಜೊತೆಗೆ ಒಂದು ವೇಳೆ ಹಸುಗಳಿಗೆ ಮೇವು ಕೊರತೆಯಾದಲ್ಲಿ ಮನೆಯ ಛಾವಣಿಯ ಹುಲ್ಲನ್ನು ಬಳಸಿಕೊಳ್ಳಬಹುದು. ಎಲ್ಲಿ ನನ್ನ ರಾವುತರಿರುತ್ತಾರೋ ಅಲ್ಲಿ ಜಂಗಿ-ಭಂಗಿಯರ ಜಾನುವಾರುಗಳು ಇರುತ್ತವೆ ಎಂದು ಅಸಫ್‌ಜಾನ್‌ನ ನಿರೂಪಣೆಯನ್ನು ಈ ಶಾಸನ ಉಲ್ಲೇಖಿಸಿದ್ದು ಬಂಜಾರ ಜನಾಂಗವನ್ನು ಕುರಿತು ಲಭ್ಯವಿರುವ ಮೊಟ್ಟಮೊದಲ ಲಿಖಿತ ರೂಪದ ದಾಖಲೆಯಾಗಿ ಚಾರಿತ್ರಿಕ ಮಹತ್ವವನ್ನು ಪಡೆದಿದೆ. ಈ ರೀತಿ ಅಸಫ್‌ಜಾನನು ಈ ಲಂಬಾಣಿ ಬಂಜಾರ ನಾಯಕರ ಮೇಲಿಟ್ಟಿದ್ದ ವಿಶ್ವಾಸ, ನಂಬಿಕೆಗಳು ಎಂತಹವು ಎಂಬುದು ವ್ಯಕ್ತವಾಗುತ್ತದೆ. ಒಟ್ಟಾರೆ ಈ ಶಾಸನವು ಲಂಬಾಣಿಗರು, ಅವರ ಜಾನುವಾರುಗಳು ಮತ್ತು ವ್ಯಾಪಾರ ಮಾಡುತ್ತಿದ್ದುದರ ಕುರಿತು ಶಾಸನವು ಹಲವಾರು ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ.

ಲಂಬಾಣಿಗಳು ಮಾತನಾಡುವ ಭಾಷೆಗೆ ಲಿಪಿ ಇಲ್ಲದಿರುವುದರಿಂದ ಅವರದೇ ಆದ ಗ್ರಾಂಥಿಕ ಸಾಹಿತ್ಯ ರಚನೆಯಾಗಿಲ್ಲ. ಈ ಕಾರಣದಿಂದಾಗಿ ಲಂಬಾಣಿಗರನ್ನು ಕುರಿತ ಗ್ರಂಥಸ್ಥ ಹಾಗೂ ಇತರ ಬಾಹ್ಯ ಆಕರಗಳನ್ನು ಶೋಧಿಸಬೇಕಾಗುತ್ತದೆ. ಈ ದಿಶೆಯಲ್ಲಿ ದಂಡಿಯ ದಶಕುಮಾರ ಚರಿತೆಯಲ್ಲಿ ಈ ಜನಾಂಗವನ್ನು ಕುರಿತು ಒಂದು ಸುಳಿವು ಸಿಗುತ್ತದೆ. ಉಳಿದಂತೆ ಈ ಜನಾಂಗದ ಬಗೆಗೆ ಲಿಖಿತ ಆಧಾರಗಳು ಚರಿತ್ರೆಯಲ್ಲಿ ಕಂಡುಬಂದಿಲ್ಲದಿರುವುದು ವಿಪರ್ಯಾಸದ ಸಂಗತಿಯೇ ಸರಿ. ಎಚ್.ಎಂ. ಎಲಿಯಟ್ ಅವರು ಬಂಜಾರ ಪದವನ್ನು ದಂಡಿಯ ಐತಿಹಾಸಿಕ ಕೃತಿಯಾದ 'ದಶಕುಮಾರ ಚರಿತೆ'ಯಲ್ಲಿ ಬರುವ 'ಪ್ರಮತಿ' ಕಥೆಯಲ್ಲಿ ಉಲ್ಲೇಖವಾಗಿದೆಯೆಂದು, ಆ ಪದದ ನಿಷ್ಪತ್ತಿಯನ್ನು ಪರ್ಷಿಯನ್ ಮೂಲದಲ್ಲಿ ಗುರುತಿಸಲು ಪ್ರಯತ್ನಿಸುತ್ತಾರೆ. ಅಲ್ಲದೆ W.Crook ಅವರು 'ದಶಕುಮಾರ ಚರಿತೆ'ಯ ಅನಂತರದ ಮುದ್ರಣಗಳಲ್ಲಿ ಕಾಣಿಸಿಕೊಳ್ಳುವ ಬಂಜಾರ ಪದವು ಪ್ರಕ್ಷಿಪ್ತವಿರಬೇಕೆಂದು W.Crook ಅವರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಈ ಕಾವ್ಯದಲ್ಲಿ ತಾಂಡದಲ್ಲಿನ ಹುಂಜಗಳ ಕಾಳಗದ ವರ್ಣನೆ ಬರುತ್ತದೆ. ಇದರಿಂದಾಗಿ

ಇದು ಬಂಜಾರ ಜನಾಂಗದ ಸಂಸ್ಕೃತಿ ರೀತಿನೀತಿಗಳ ವಿವರವೇ ಆಗಿರುವುದರಿಂದ ದಂಡಿಯು ಬಂಜಾರ ಪದವನ್ನು ನಿರ್ದಿಷ್ಟವಾಗಿ ಬಳಸದಿದ್ದರೂ ಆತನ ಮನಸ್ಸಿನಲ್ಲಿ ಆ ಜನಾಂಗವನ್ನು ಕುರಿತ ವರ್ಣನೆಯೇ ಆಗಿರಬೇಕೆಂದು W.Crook ಅಭಿಪ್ರಾಯಪಡುತ್ತಾರೆ. ಇದನ್ನೇ ಆಧಾರವಾಗಿಟ್ಟುಕೊಂಡು ಮುಂದಿನ ಚರಿತ್ರೆಕಾರರು "Mahatinigame Naigamanam" ಪದಕ್ಕೆ ಪರ್ಯಾಯವಾಗಿ ಈ ಬಂಜಾರ ಪದವನ್ನು ಬಳಸಿರಬೇಕೆಂಬುದು W.Crook ಅವರ ಅಭಿಮತ.

### ೨.೪. ಚಾರಿತ್ರಿಕ ದಾಖಲೆಗಳು

ಯಾವುದೇ ದೇಶದ ಚರಿತ್ರೆ ಅಲ್ಲಿ ವಾಸಿಸುವ ಸಮಸ್ತ ಜನಾಂಗದ ಪ್ರಾಚೀನತೆಯ ಪ್ರಾಥಮಿಕ ಮಾಹಿತಿಯನ್ನು ಒದಗಿಸಿಕೊಡುತ್ತವೆಂಬುದು ಸಹಜ. ಭಾರತವು ಸಾವಿರಾರು ವರ್ಷಗಳಿಂದ ತನ್ನ ಒಡಲಲ್ಲಿ ನೂರಾರು ಜಾತಿ, ಬುಡಕಟ್ಟುಗಳನ್ನು ರಕ್ಷಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಅದರಲ್ಲಿ ಲಂಬಾಣಿ ಸಮುದಾಯವು ಒಂದು. ಈ ಸಮುದಾಯದ ಪ್ರಾಚೀನತೆಯ ಕುರಿತು ನಮಗೆ ಖಚಿತ ದಾಖಲೆಗಳು ಸಿಗುವುದಿಲ್ಲವಾದರೂ ಲಂಬಾಣಿ ಸಮುದಾಯವು ಹಿಂದೆ ಕೈಗೊಂಡ ವೃತ್ತಿಯ ಮೂಲಕವೇ ಚರಿತ್ರೆಯಲ್ಲಿ ಕಂಡುಬರುವುದರಿಂದ ವೃತ್ತಿ ಮತ್ತು ಪ್ರಾಚೀನತೆ ಎರಡನ್ನೂ ಒಟ್ಟಿಗೆ ಹುಡುಕುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಭಾರತೀಯ ಸಮಾಜದಲ್ಲಿ ವೃತ್ತಿಗಳೇ ಜಾತಿಗಳಾಗಿ ಪರಿವರ್ತನೆಯಾದುದು ವಿಪರ್ಯಾಸದ ಸಂಗತಿಯೇ ಸರಿ. ಬುಡಕಟ್ಟು ತಮ್ಮ ಮೂಲ ವೃತ್ತಿಯೊಂದಿಗೆ ಸಮಾಜ ಬದಲಾದಂತೆ ಆ ಬದಲಾವಣೆಗೆ ಹೊಂದಿಕೊಂಡಂತೆಲ್ಲ ಜೀವನ ನಿರ್ವಹಣೆಗೆ ಅನುಕೂಲಕರವಾದ ವೃತ್ತಿಯನ್ನು ಕೈಗೊಳ್ಳುತ್ತ ಬಂದಿದ್ದಾರೆ. ಚೆಂಚರು, ಗೊಂಡ, ನಿಶ್ಶಿಹಿ, ಕೋಲಾಮ, ನಾಯಕ, ಪೊಡ, ಹಕ್ಕಿಪಿಕ್ಕಿ, ಕಾಡುಗೊಲ್ಲರು, ಸೋಲಿಗರು ಮೊದಲಾದ ಬುಡಕಟ್ಟುಗಳು ಕಾಡಿನ ಸಂಪನ್ಮೂಲವನ್ನೇ ಅವಲಂಬಿಸಿ ಜೀವನ ನಡೆಸುತ್ತಿದ್ದರು. ಮತ್ತೆ ಕೆಲವು ಬುಡಕಟ್ಟುಗಳು ವ್ಯಾಪಾರ ಮಾಡಿ ಜೀವನವನ್ನು ನಡೆಸುತ್ತಾ ಬಂದಿದ್ದಾರೆ. ಅವರಲ್ಲಿ ಲಂಬಾಣಿ ಸಮುದಾಯವು ಒಂದು.

ಲಂಬಾಣಿ ಸಮುದಾಯದ ಮೂಲ ವೃತ್ತಿಯು ವ್ಯಾಪಾರವಾಗಿತ್ತು. ಕ್ರಿ.ಶ. ೧೪ನೇ ಶತಮಾನದಲ್ಲಿ ಅವರು ಗುಂಪುಗುಂಪಾಗಿ ವ್ಯಾಪಾರ ಮಾಡುತ್ತಿದ್ದರು ಎಂಬುದು ಚರಿತ್ರೆಯಲ್ಲಿ ಸ್ಪಷ್ಟವಾಗಿ ತಿಳಿದುಬರುತ್ತದೆ. ವ್ಯಾಪಾರದ ಸಂರಚನೆ ವಿಭಿನ್ನವಾಗಿತ್ತು. ಪ್ರತಿಯೊಂದು ಗುಂಪಿಗೂ ಒಬ್ಬ ನಾಯಕ ಇರುತ್ತಿದ್ದನು. ಆ ನಾಯಕನನ್ನು ಅವರೇ ಆಯ್ಕೆ ಮಾಡಿ ಕೊಳ್ಳುತ್ತಿದ್ದರು. ವ್ಯಾಪಾರ ವೃತ್ತಿಯು ಕಣ್ಮರೆಯಾಗಿ ಲಂಬಾಣಿಗಳು ತಾಂಡಾಗಳಾದ ಮೇಲೆ ಸಂಕಷ್ಟದಿಂದ ದೂರವಿರಲಿಲ್ಲ. ಹೀಗಾಗಿ ಅವರು ಪುನಃ ಸಂಚಾರಿ ವ್ಯಾಪಾರದಲ್ಲಿ ತೊಡಗಿದರು. ಪ್ರಾಚೀನ ಕಾಲದಲ್ಲಿ ಒಳನಾಡು ವ್ಯಾಪಾರವು ಅತ್ಯಂತ ಶ್ರಮದಾಯಕ

ವೃತ್ತಿಯಾಗಿತ್ತು. ದುರ್ಗಮವಾದಂತಹ ಕಾಡು, ಬೆಟ್ಟ, ಹಳ್ಳಕೊಳ್ಳಗಳನ್ನು ದಾಟಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ದವಸಧಾನ್ಯಗಳನ್ನು ಸಾಗಿಸಬೇಕಾಗಿತ್ತು. ಚತುರ ಹಾಗೂ ಧೈರ್ಯಶಾಲಿಗಳು, ಸಾಹಸಿಗಳು ಆದ ಈ ಸಮುದಾಯದವರು ಈ ವೃತ್ತಿಯನ್ನು ನಿಭಾಯಿಸುವಲ್ಲಿ ಅತ್ಯಂತ ಯಶಸ್ವಿಯಾಗಿದ್ದರು.

ಕ್ರಿ.ಪೂ. ೩೨೧ರಲ್ಲಿ ಸ್ಥಾಪನೆಯಾದ ಮೌರ್ಯ ಸಾಮ್ರಾಜ್ಯದ ಚಕ್ರಾಧಿಪತ್ಯದಲ್ಲಿ ಬಂಜಾರರು ವ್ಯಾಪಾರ ವೃತ್ತಿಯಲ್ಲಿ ನಿರತರಾಗಿದ್ದರೆಂಬ ವಿಚಾರ ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ. "Such as the modern Brinjaras, Whose business was to supply merchants and others with armed protection of aquasi-professional character? while refraing from a decisive pronucnciation, we can not but incline in the Circumstances to the former alternative, for which the gilds of medieval Europe Supply a fair anology".[೧೭]

ಮೌರ್ಯ ಕಾಲದ ವ್ಯಾಪಾರ ವಹಿವಾಟುಗಳನ್ನು ವಿವರಿಸುತ್ತ ಲೇಖಕರು, ಬಂಜಾರ ಎಂಬ ಈಗಿನ ಹೆಸರು ಆ ಕಾಲದ ಜನಾಂಗಕ್ಕಿರದಿದ್ದರೂ, ಆ ಕಾಲದಲ್ಲಿ ವ್ಯಾಪಾರವನ್ನು ಮಾಡುತ್ತಿದ್ದ ಜನರು ಲಂಬಾಣಿಗಳೇ ಆಗಿದ್ದರೆಂಬುದಾಗಿ ಅಭಿಪ್ರಾಯಪಡುತ್ತಾರೆ. ಆದ್ದರಿಂದ ಲಂಬಾಣಿ ಜನಾಂಗವು ಕ್ರಿ.ಪೂ. ೩ನೇ ಶತಮಾನದಲ್ಲಿ ವ್ಯಾಪಾರದಲ್ಲಿ ನಿರತರಾಗಿದ್ದರೆಂಬುದು ತಿಳಿದುಬರುತ್ತದೆ.

"ಕ್ರಿ.ಶ. ೧೭ನೇ ಶತಮಾನದಲ್ಲಿ ಪೇಶ್ವೆಗಳ ಕಾಲದಲ್ಲಿ ಬಂಜಾರಾ ವ್ಯಾಪಾರಿಗಳಾದ ಪೋಮಾಜಿನಾಯಕ್ ಮತ್ತು ಗೊಂವಿದನಾಯಕ್ ಭುಕ್ಯಾ ಎಂಬುವವರು ೧೫ ಸಾವಿರ ಎತ್ತುಗಳ ಹೇರುಗಳಷ್ಟು ದವಸ ಧಾನ್ಯಗಳನ್ನು ಸೈನಿಕರ ವಸತಿಗಳಿಗೆ ತಲುಪಿಸಲು ಕರಾರು ಮಾಡಿಕೊಂಡಿರುತ್ತಾರೆ. ಅದಕ್ಕಾಗಿ ಅವರಿಗೆ ಆಕ್ಟ್ರಾಯಿ ಸುಂಕದಿಂದ ವಿನಾಯತಿ ಲಭಿಸಿರುತ್ತದೆ" ಎಂಬ ಮಾತುಗಳಲ್ಲಿ ಆ ಬಗೆಯ ವ್ಯಾಪಾರಿಗಳಿಗೆ ರಾಜರು ರಿಯಾಯ್ತಿಗಳನ್ನು ಕೊಡುತ್ತಿದ್ದರೆಂಬುದು ಕಂಡುಬರುತ್ತದೆ. ಹೀಗೆ ಹಲವಾರು ಅನುಕೂಲಗಳಿಗಾಗಿ ಅವರು ತಮ್ಮ ವ್ಯಾಪಾರದ ವಿಧಾನವನ್ನು ಬದಲಿಸಿಕೊಂಡಂತೆ ತಿಳಿದುಬರುತ್ತದೆ. ಉತ್ತರ ಮತ್ತು ಮಧ್ಯ ಭಾರತದಲ್ಲಿ ತಮ್ಮ ವ್ಯಾಪಾರವನ್ನು ಕೇಂದ್ರೀಕರಿಸಿದ ಲಂಬಾಣಿಗಳು ದಕ್ಷಿಣ ಭಾರತವನ್ನು ಪ್ರವೇಶಿಸಿದ್ದು ಬಹಳ ತಡವಾಗಿಯೇ ಎಂಬುದನ್ನು ವಿದ್ವಾಂಸರು ದಾಖಲಿಸಿದ್ದಾರೆ.

ಜನರಲ್ ಬ್ರಿಗ್ಸ್ ಅವರು ಕ್ರಿ.ಶ. ೧೮೧೩ರಲ್ಲಿ ಬರೆದ ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ. "ಕ್ರಿ.ಶ. ೧೪೧೭ರಲ್ಲಿ ಬಂಜಾರರ ಬೆಂಗಾವಲಿನ ಬಹುದೊಡ್ಡ ಎತ್ತುಗಳ ಗುಂಪೊಂದು

---

೧೭. ಡಾ. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ,** ಪು.ಸಂ. ೩೧.

ಖಾನ್‌ಕಹನ್‌ನಿಂದ ಸೆರೆ ಹಿಡಿಯಲ್ಪಟ್ಟಿತು ಮತ್ತು ದಕ್ಷಿಣದ ರಾಜಧಾನಿಯಾಗಿದ್ದ ಗುಲ್ಬರ್ಗಕ್ಕೆ ಕಳುಹಿಸಲ್ಪಟ್ಟಿತು. ಪೆರಿಸ್ತಾ ಬಂಜಾರರನ್ನು ಕಾಳು ವ್ಯಾಪಾರಿಗಳೆಂದು ಕರೆದಿದ್ದಾನೆ. ಅವರು ದೇಶದ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಸಂಚರಿಸುತ್ತಿದ್ದರು".[೧೮] ಕ್ರಿ.ಶ. ೧೪೧೭ರಲ್ಲಿ ಲಂಬಾಣಿಗಳು ದಕ್ಷಿಣ ಭಾರತವನ್ನು ಪ್ರವೇಶಿಸಿದ ದಾಖಲೆ ಸಿಗುತ್ತದೆ. ಆ ಕಾಲದಲ್ಲಿ ಅವರನ್ನು ಕಾಳು ಮಾರುವ ವ್ಯಾಪಾರಿಗಳು ಎಂದು ಕರೆಯುತ್ತಿದ್ದರೆಂಬ ವಿಷಯ ಇಲ್ಲಿ ಗಮನಾರ್ಹವಾಗುತ್ತದೆ.

**ವಿದೇಶಿ ಬರಹಗಳು**

ಭಾರತವು ಪ್ರಾಚೀನ ಕಾಲದಿಂದಲೂ ಅನೇಕ ಪ್ರವಾಸಿಗರನ್ನು ಆಕರ್ಷಿಸುತ್ತ ಬಂದಿದೆ. ಅದರಲ್ಲೂ ಚೀನಾದ ಪ್ರವಾಸಿಗರ ರಾಜನೆಂದು ಖ್ಯಾತನಾದ ಹ್ಯೂಯನ್‌ತ್ಸಾಂಗ್, ಪಿಯಾಸ್, ಮೊದಲಾದವರು ಇಲ್ಲಿಗೆ ಬಂದು ಭೇಟಿ ನೀಡಿ ತಮ್ಮ ಕಣ್ಣಾರೆ ಕಂಡ, ಕಿವಿಯಾರೆ ಕೇಳಿದ ಅನುಭವಗಳನ್ನು ತಮ್ಮ ಕೃತಿಗಳಲ್ಲಿ ಹಂಚಿಕೊಂಡಿದ್ದಾರೆ.

ಕ್ರಿ.ಶ. ೧೬೨೮ರಲ್ಲಿ ಭಾರತವನ್ನು ಸಂದರ್ಶಿಸಿದ ಪೀಟರ್ ಮಂಡಿಯು ಅವರ ಉಲ್ಲೇಖ ಗಮನಾರ್ಹವಾದುದು. "ಹೋಗುವ ದಾರಿಯಲ್ಲಿ ಬುರಾನ್‌ಪುರಕ್ಕೆ ದವಸಧಾನ್ಯಗಳನ್ನು ಸಾಗಿಸುವ ಹೇರೆತ್ತು, ಹೇರು ಕೋಣಗಳನ್ನು ಹೊಡೆದುಕೊಂಡು ಹೋಗುತ್ತಿದ್ದ ಅನೇಕ ಬಣಜಾರರನ್ನು ಕಂಡೆವು"[೧೯] ಎನ್ನುತ್ತಾನೆ. ಅವರು ಮತ್ತೊಂದು ಅನುಭವದಲ್ಲಿ ಈ ಸಮುದಾಯದ ನೆಲೆ, ವೃತ್ತಿಗಳನ್ನು ಹೀಗೆ ವಿವರಿಸುತ್ತಾರೆ. "ಆಗಸ್ಟ ೨೩ರಂದು ನಮಗೆ ಒಂದು ತಾಂಡಾ ಅಂದರೆ ಎತ್ತುಗಳ ಬಣಜಾರ ಸಿಕ್ಕಿತು. ತಾಂಡಾದಲ್ಲಿ ೧೪.೦೦೦ ಎತ್ತುಗಳಿದ್ದವು. ಗೋಧಿ, ಅಕ್ಕಿ ಮುಂತಾದ ದವಸಗಳನ್ನು ಅವುಗಳ ಮೇಲೆ ಹೇರಿದ್ದರು. ಒಂದೊಂದು ಎತ್ತಿನ ಮೇಲೆ ನಾಲ್ಕು ದೊಡ್ಡ ಮಣಗಳ ಹೇರು ಇತ್ತು. ಇವೆಲ್ಲ ಆಗ್ರಾಕ್ಕೆ ಹೋಗುತ್ತಿದ್ದವು. ಈ ಬಣಜಾರರು ತಮ್ಮ ಹೆಂಡತಿ, ಮಕ್ಕಳು ಮತ್ತು ಸಾಮಾನು ಸರಂಜಾಮುಗಳ ಸಮೇತ ಹೊರಡುತ್ತಾರೆ. ಇವರು ಒಂದು ಕಡೆ ನಿಲ್ಲದೆ ಊರಿಂದೂರಿಗೆ ಹೋಗುತ್ತಿರುತ್ತಾರೆ. ಎತ್ತುಗಳು ಅವರವೇ. ಈ ಎತ್ತುಗಳನ್ನು ಕೆಲವು ವೇಳೆ ವರ್ತಕರು ಬಾಡಿಗೆಗೆ ತೆಗೆದುಕೊಳ್ಳುತ್ತಾರೆ. ಆದರೆ ಬಹುತೇಕ ಬಣಜಾರರು ವರ್ತಕರು ಅಗ್ಗವಾಗಿರುವ ಕಡೆ ದವಸ ಧಾನ್ಯಗಳನ್ನು ಕೊಂಡು, ತುಟ್ಟಿಯಾಗಿರುವ ಕಡೆಗೆ ಸಾಗಿಸಿ ಮಾರಾಟ ಮಾಡಿ, ಅಲ್ಲಿ ಸಿಕ್ಕಬಹುದಾದ ಉಪ್ಪು, ಬೆಲ್ಲ, ಬೆಣ್ಣೆ ಮುಂತಾದವುಗಳನ್ನು ಕೊಂಡು ತರುತ್ತಾರೆ.

---

೧೮. ಡಾ. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ,** ಪು.ಸಂ. ೩೬-೩೭.

೧೯. ಎಚ್.ಎಲ್. ನಾಗೇಗೌಡ, **ಪ್ರವಾಸಿ ಕಂಡ ಇಂಡಿಯಾ,** ಸಂ-೪, ಲೇಖನ, ಪೀಟರ್ ಮಂಡಿ, ಪು.ಸಂ. ೨೮೪.

ಇಂಥ ಒಂದೊಂದು ತಂಡದಲ್ಲಿ ೬೦೦ರಿಂದ ೭೦೦ ಹೆಂಗಸರು, ಗಂಡಸರು ಮಕ್ಕಳಿರುತ್ತಾರೆ. ಹೆಂಗಸರು ಗಂಡಸರು ಧೈರ್ಯಶಾಲಿಯಾದ, ಗಟ್ಟಿಮುಟ್ಟಾದ ಜನರಾಗಿರುವರು. ಸಂದರ್ಭ ಬಂದರೆ ಹೆಂಗಸರೂ ಗಂಡಸರಂತೆ ಹೋರಾಡಬಲ್ಲರು. ದಿನಾ ತಂಪು ಹೊತ್ತಿನಲ್ಲಿ ಆರೇಳು ಮೈಲಿಗಳಂತೆ ದಾರಿ ಸಾಗಿಸುತ್ತಾರೆ. ತಂಗಿದಾಗ ಹೇರನ್ನು ಇಳಿಸಿ ಎತ್ತುಗಳನ್ನು ಮೇಯಲು ಬಿಡುತ್ತಾರೆ".[೨೦] ಈ ಮಾದರಿಯನ್ನು ಲಂಬಾಣಿ ಸಮುದಾಯದಲ್ಲಿ ಈಗಲೂ ಕಾಣಬಹುದಾಗಿದೆ.

ಕ್ರಿ.ಶ. ೧೬೫೮ರಿಂದ ೧೬೬೭ರವರೆಗೆ ಭಾರತದಲ್ಲಿ ಪ್ರವಾಸ ಮಾಡಿದ ಫ್ರಾನ್‌ಸ್ವಾಸ್ ಬೆರ್ನ್ಯೇ ಎಂಬುವವರು ಔರಂಗಜೇಬನಿಗೂ ಮತ್ತು ದಾರನಿಗೂ ನಡೆದ ಯುದ್ಧವನ್ನು ಕುರಿತು ವಿವರಿಸುತ್ತಾ ಲಂಬಾಣಿಗರ ಬಗೆಗೆ ಸಂಕ್ಷಿಪ್ತ ಮಾಹಿತಿಯನ್ನು ಕೊಡುತ್ತಾರೆ. ಇಷ್ಟಲ್ಲದೆ ಸೈನ್ಯವನ್ನು ಹಿಂಬಾಲಿಸಿ ಹೋಗುವ ಬಣಜಾರ ವರ್ತಕರು ಇತ್ಯಾದಿ ಅಸಂಖ್ಯಾತ ಜನರಿದ್ದರು. ಈತನ ವಿವರಣೆಯಲ್ಲಿ ಲಂಬಾಣಿ ವರ್ತಕರು ಸೈನಿಕರಿಗೆ ಆಹಾರ ಧಾನ್ಯಗಳನ್ನು ಸರಬರಾಜು ಮಾಡುವ ವಿಷಯ ತಿಳಿದುಬರುತ್ತದೆ. ಒಟ್ಟಾರೆಯಾಗಿ ಲಂಬಾಣಿ ಬುಡಕಟ್ಟಿನ ಸ್ವಭಾವ, ಸ್ಥಿತಿಗತಿಗಳನ್ನು ತಿಳಿಯಲು ವಿದೇಶಿ ಯಾತ್ರಿಕರು ನೀಡುವ ಮಾಹಿತಿ ಅತ್ಯಮೂಲ್ಯವಾದುದ್ದಾಗಿದೆ.[೨೧]

ಲಂಬಾಣಿಗರು ರಾಜಸ್ಥಾನ ಮೂಲದವರಾದ ಇವರು ಅಲೆಮಾರಿಗಳಾಗಿ ವ್ಯಾಪಾರ, ಉದ್ದಿಮೆಗಳ ವೃತ್ತಿಯನ್ನು ಕೈಗೊಂಡು ಭಾರತದ ಎಲ್ಲಾ ಪ್ರದೇಶಗಳಲ್ಲೂ ಹರಡಿದ್ದಾರೆ. ಕರ್ನಾಟಕದ ಲಂಬಾಣಿಗರು ಇದಕ್ಕೆ ಹೊರತಾಗಿಲ್ಲ. ಪ್ರಸ್ತುತ ಸಂದರ್ಭದಲ್ಲಿ ಇವರು ಅನೇಕ ಭಾಗಗಳಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ತಮ್ಮದೇ ಆದ ಜೀವನ ಶೈಲಿ ರೀತಿ-ನೀತಿ, ನಡೆ-ನುಡಿ ಮತ್ತು ಸಾಂಸ್ಕೃತಿಕವಾಗಿ ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿದ್ದಾರೆ. ಇಂದಿಗೂ ತಮ್ಮ ಮೂಲ ಸಂಸ್ಕೃತಿಗಳನ್ನು ಉಳಿಸಿಕೊಂಡು ಬಂದ ಬುಡಕಟ್ಟು ಸಮುದಾಯಗಳಲ್ಲಿ ಲಂಬಾಣಿಗರು ಪ್ರಥಮವಾಗಿ ನಿಲ್ಲುತ್ತಾರೆ ಎಂದರೆ ಅತಿಶಯೋಕ್ತಿ ಆಗಲಾರದು. ಕಾರಣ ಈ ಸಮುದಾಯದ ಮಹಿಳೆಯರು ಧರಿಸುವ ವೇಷಭೂಷಣಗಳೇ ಸಾಕ್ಷಿಯಾಗಿವೆ. ಆರಂಭದಲ್ಲಿ ಮೊಗಲ್ ಸೈನ್ಯವನ್ನು ಸೇರಿಕೊಂಡು ತಮ್ಮ ಸಾಹಸ, ಧೈರ್ಯಗಳನ್ನು ಪ್ರದರ್ಶಿಸಿದ ಇವರು ಮೊಗಲ್ ಸರದಾರರ ಮೆಚ್ಚುಗೆಯನ್ನು

---

೨೦. ಎಚ್.ಎಲ್. ನಾಗೇಗೌಡ, **ಪ್ರವಾಸಿ ಕಂಡ ಇಂಡಿಯಾ,** ಸಂ-೪, ಲೇಖನ, ಪೀಟರ್‌ಮಂಡಿ, ಪು.ಸಂ. ೨೮೮-೨೮೯.

೨೧. ಡಾ. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ,** ಪು.ಸಂ. ೪೦.





ಸೋಮಿಬಾಯಿ ಬಾಬು ನಾಯಕ



ಚಂದ್ರಮ್ಮ ಸೋಮಾ ನಾಯಕ

ಸುಶೀಲಾ ನಗರ ತಾಂಡಾದ ಒಂದು ನೋಟ





ೂಪಡಿ (ಲಂಬಾಣಿಗರ ಗುಡಿಸಲು)



ಲಂಬಾಣಿ ಮಹಿಳೆಯರು



ಲಂಬಾಣಿ ನೃತ್ಯ





ಸೂಯಿರ್ ಕಾಮ (ಕಸೂತಿ ಮಾಡುತ್ತಿರುವ ಲಂಬಾಣಿ ಮಹಿಳೆ)

ಗಳಿಸಿದರು. ಈ ಮೊಗಲ್ ಸೈನ್ಯಕ್ಕೆ ದವಸ ಧಾನ್ಯಗಳನ್ನು ಸಾಗಿಸಲಿಕ್ಕೆ ವಾಹನಗಳಿಲ್ಲದ ಸಂದರ್ಭದಲ್ಲಿ ಈ ಲಂಬಾಣಿಗರ ಹಸುಗಳೇ ವಾಹನಗಳಾಗಿದ್ದವು.

ದಟ್ಟವಾದ ಅರಣ್ಯಗಳಲ್ಲಿ ಕಲ್ಲುಮುಳ್ಳು ಎನ್ನದೇ ಹಗಲು ರಾತ್ರಿ ಅರಸರು ನೀಡುವ ಆಹಾರ ಸಾಮಗ್ರಿ ಹಾಗೂ ಇನ್ನಿತರೆ ವಸ್ತುಗಳನ್ನು ಅಚ್ಚುಕಟ್ಟಾಗಿ ಸೈನಿಕರಿಗೆ ತಲುಪಿಸುತ್ತಿದ್ದರು. ಅಪಾರ ಧೈರ್ಯಶಾಲಿಗಳಾದ ಇವರು ಪ್ರಾಮಾಣಿಕರಾಗಿ ಒಪ್ಪಿಸಿದ ಕೆಲಸಕಾರ್ಯಗಳನ್ನು ನಿಭಾಯಿಸುತ್ತಿದ್ದರು ಹೀಗಾಗಿ ಅರಸರಿಗೆ ಲಂಬಾಣಿಗರು ಪ್ರಿಯಪಾತ್ರರೆಂದು ಚರಿತ್ರೆಯಲ್ಲಿ ಉಲ್ಲೇಖವಿದೆ.

ಈ ಸಂದರ್ಭದಲ್ಲಿ ಮೊಗಲ್ ಸರದಾರರು ಇವರಿಗೆ ಅನೇಕ ಬಹುಮಾನ ಮತ್ತು ಉಡುಗೊರೆಗಳನ್ನು ಕೊಟ್ಟಿದ್ದುಂಟು. ಹೀಗೆ ಪ್ರಾಚೀನ ಕಾಲದಿಂದಲೂ ತಮ್ಮ ವೈವಿಧ್ಯಮಯ ಬದುಕನ್ನು ಸಾಗಿಸಿಕೊಂಡು ಬಂದ ಚರಿತ್ರೆ ಮೌಖಿಕವಾಗಿಯೇ ಉಳಿದುಕೊಂಡು ಬಂದಿದೆ. ಅನಕ್ಷರಸ್ಥರಾದ ಇವರು ತಮ್ಮ ಮೂಲ ಚರಿತ್ರೆಯ ಬಗೆಗೆ ಎಲ್ಲೂ ದಾಖಲೆಯನ್ನು ಬರೆದಿಟ್ಟಿಲ್ಲ. ಆದರೆ ಇವರ ಮೌಖಿಕ ಕಥನಗಳ ಮೂಲಕ ಸುಮಾರು ೪೦೦ ವರ್ಷಗಳ ಹಿಂದಿನಿಂದ ಇವರ ಚರಿತ್ರೆಯನ್ನು ಗುರುತಿಸಲು ವಿದ್ವಾಂಸರು ಪ್ರಯತ್ನಿಸಿದ್ದಾರೆ. ಸುಮಾರು ವರ್ಷಗಳಿಂದ ರಾಜವೈಭವದಿಂದ ಮೆರೆದ ಈ ಸಮುದಾಯದ ಸಾಂಸ್ಕೃತಿಕ ಇತಿಹಾಸ ಕಾಲಗರ್ಭದಲ್ಲಿ ಅಡಗಿದೆ. ರಾಜರ ವೈಷಮ್ಯ, ಬ್ರಿಟಿಷರ ವಿರೋಧ ಹಾಗೂ ಪ್ರಾಕೃತಿಕ ವಿಕೋಪದಿಂದಾಗಿ ಸಂಚಾರಿ ಬದುಕನ್ನು ಆರಂಭಿಸಿದ ಇವರ ಸಾಂಸ್ಕೃತಿಕ ಚರಿತ್ರೆ ಇನ್ನೂ ಗೌಪ್ಯವಾಗಿಯೇ ಉಳಿದಿದೆ. ಒಟ್ಟಾರೆ ಈ ಅಧ್ಯಾಯದಲ್ಲಿ ಲಂಬಾಣಿಗರ ಮೂಲದ ಬಗೆಗೆ ಶಾಸನಗಳಲ್ಲಿ, ಐತಿಹ್ಯಗಳಲ್ಲಿ, ಚಾರಿತ್ರಿಕ ದಾಖಲೆಗಳು ಹಾಗೂ ವಿದ್ವಾಂಸರು ನೀಡಿದ ಉಲ್ಲೇಖಗಳನ್ನು ಪರಾಮರ್ಶಿಸಿ ಲಂಬಾಣಿಗರ ಚರಿತ್ರೆಯನ್ನು ನಿರೂಪಿಸಲು ಇಲ್ಲಿ ಪ್ರಯತ್ನ ಮಾಡಲಾಗಿದೆ.

ಹೀಗೆ ಚಾರಿತ್ರಿಕ ಇತಿಹಾಸ ಪಡೆದವರು ಇಂದು ಯಾವ ರೀತಿಯಲ್ಲಿ ಬದುಕುತ್ತಿದ್ದಾರೆ. ವರ್ತಮಾನದ ಬದುಕಿಗೆ ಅವರ ಚರಿತ್ರೆ ಹೇಗೆ ನೆರವಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ನೋಡುವ ಪ್ರಯತ್ನವನ್ನು ಮಾಡಿದೆ. ಕರಕುಶಲ ಕಲೆಗಳ ಪ್ರಾಚೀನತೆ ಕೂಡ, ಲಂಬಾಣಿ ಸಮುದಾಯದ ಪ್ರಾಚೀನತೆಯ ಜತೆ ತಳಕು ಹಾಕಿಕೊಂಡಿದೆ. ಹಾಗಾಗಿ ಇಂದು ಲಂಬಾಣಿ ಸಮುದಾಯದ ಕರಕುಶಲ ಕಲೆಗಳ ಅಧ್ಯಯನ ಮಾಡುವುದೆಂಬಂತೆ ಅವರ ಚರಿತ್ರೆಯ ನೆನಪುಗಳನ್ನು ಮತ್ತೊಮ್ಮೆ ಮೇಲ್‌ಸ್ತರಕ್ಕೆ ತಂದಂತಾಗುತ್ತದೆ ಹಾಗೂ ಪ್ರಸ್ತುತ ಸಂದರ್ಭದ ಸ್ಥಿತಿಗತಿಗಳನ್ನು ಗುರುತಿಸಿದಂತಾಗುತ್ತದೆ.

ಮುಖ್ಯವಾಗಿ ಈ ತನಕವೂ ಲಂಬಾಣಿಗಳ ಮೌಖಿಕ ಸಾಹಿತ್ಯದಲ್ಲಿ ಮಾತ್ರ ಅವರ ಚರಿತ್ರೆ ಪ್ರಭಾವವನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ. ಈ ಅಧ್ಯಯನದಲ್ಲಿ ಅವರ ಕರಕುಶಲ ವಸ್ತುಗಳ ಹಿನ್ನೆಲೆಯಲ್ಲಿಯೂ ಲಂಬಾಣಿಗರ ಚರಿತ್ರೆಯನ್ನು ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಅವರ ನಿತ್ಯದ ಉಡುಗೆ, ತೊಡುಗೆಗಳು ಲಂಬಾಣಿಗಳ ಚರಿತ್ರೆಯನ್ನು ಹೇಗೆ ಕಾಣಿಸುತ್ತವೆ ಮತ್ತು ಅವುಗಳ ವರ್ತಮಾನದ ಪ್ರಾಮುಖ್ಯತೆ ಏನು ಎಂದು ಪರಿಶೀಲಿಸಲಾಗಿದೆ.

❑❑❑

ಅಧ್ಯಾಯ : ಮೂರು

# ಲಂಬಾಣಿ ಸಮುದಾಯದ ಕರಕುಶಲ ಕಲೆಗಳ ವೈವಿಧ್ಯತೆ, ಮಾಧ್ಯಮ ಮತ್ತು ವಸ್ತುವಿಷಯ

೩.೧. ಕರಕುಶಲ ಕಲೆಗಳ ಪರಂಪರೆ

೩.೨. ಬಟ್ಟೆ ಮಾಧ್ಯಮದ ಕರಕುಶಲ ಕಲೆ

೩.೩. ಲೋಹ ಮಾಧ್ಯಮದ ಕರಕುಶಲ ಕಲೆ

೩.೪. ಚರ್ಮ ಮಾಧ್ಯಮದ ಕರಕುಶಲ ಕಲೆ

೩.೫. ಸಂಕೀರ್ಣ ಮಾಧ್ಯಮದ ಕರಕುಶಲ ಕಲೆ

ಅಧ್ಯಾಯ : ಮೂರು

# ಲಂಬಾಣಿ ಸಮುದಾಯದ ಕರಕುಶಲ ಕಲೆಗಳ ವೈವಿಧ್ಯತೆ, ಮಾಧ್ಯಮ ಮತ್ತು ವಸ್ತುವಿಷಯ

ಯಾವುದೇ ಒಂದು ಸಮುದಾಯದ ಚರಿತ್ರೆಯನ್ನು ನೋಡುತ್ತಿದ್ದರೆ, ಅವುಗಳ ಬದುಕಿನ ಕ್ರಮದಲ್ಲಿಯೆ ತಮ್ಮ ಉಳಿವಿಗೆ ನಾನಾ ಬಗೆಯ ಸಾಹಸಗಳನ್ನು ಮಾಡಿರುವುದು ತಿಳಿಯುತ್ತದೆ. ಅಂತೆಯೇ ತಮ್ಮ ಪ್ರತಿಭೆಯನ್ನು ಬಳಸಿ ಕರಕುಶಲ ಕಲೆಗಳನ್ನು ಅಭಿವೃದ್ಧಿ ಮಾಡುತ್ತಿರುವುದು ಗೊತ್ತಾಗುತ್ತದೆ.

ಹಾಗೆ ನೋಡಿದರೆ ಲಂಬಾಣಿ ಸಮುದಾಯವು ಇತರೆಲ್ಲಾ ಸಮುದಾಯಗಳಿಗಿಂತ ಭಿನ್ನವಾದುದು. ಈ ಸಮುದಾಯವು ತನ್ನದೇಯಾದ ಕರಕುಶಲ ಕೆಲಸಗಳಿಂದಾಗಿಯೇ ಪ್ರಸಿದ್ಧಿಯನ್ನು ಪಡೆದಿದೆ. ವಿಶಿಷ್ಟ ಉಡುಗೆಯಿಂದಾಗಿ, ವೈವಿಧ್ಯಪೂರ್ಣ ಹಾಗೂ ತೊಡುಗೆ ಗಳಿಂದಾಗಿ ತೀರಾ ಭಿನ್ನವಾಗಿರುವುದನ್ನು ನೋಡಬಹುದಾಗಿದೆ.

ಹೀಗೆ ಪರಂಪರೆಯಿಂದ ಕರಕುಶಲ ಕಲೆಗಳಲ್ಲಿ ತನ್ನದೇ ಆದ ಅನನ್ಯತೆಯನ್ನು ಕಾಪಾಡಿಕೊಂಡ ಲಂಬಾಣಿ ಸಮುದಾಯ ಇಂದು ಆಧುನಿಕತೆಯ ಯಾಂತ್ರೀಕೃತ ಜಗತ್ತನ್ನು ಹೇಗೆ ಎದುರಿಸಿದೆ ಎನ್ನುವುದೂ ಕೂಡ ವಿಶೇಷವಾಗಿದೆ. ಆಧುನಿಕ ಯಂತ್ರದ ಭರಾಟೆಯನ್ನು ಮೀರಿಯೂ ಲಂಬಾಣಿಗರ ಕರಕುಶಲ ಕಲೆಗಳು ಉಳಿದಿವೆ ಎಂದರೆ ಅದಕ್ಕಿರುವ ಶಕ್ತಿ ಯಾವುದು? ಅದರ ಹಿಂದೆ ಇರುವ ಚೈತನ್ಯಗಳು ಯಾವುದು? ಮುಂತಾದವುಗಳನ್ನು ಪರಿಶೀಲಿಸಬೇಕಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಅಂತಹ ಪ್ರಯತ್ನವನ್ನು ಮಾಡಲಾಗಿದೆ.

ಲಂಬಾಣಿಗರು ಶತಶತಮಾನಗಳಿಂದ ಅತ್ಯಂತ ಕಡುಬಡತನದಲ್ಲಿ ಬದುಕುತ್ತಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿ ದೇಶದ ಮೂಲೆ ಮೂಲೆಗಳಲ್ಲಿ ಸಂಚರಿಸಿ ಪ್ರತಿನಿತ್ಯ ಬೇಕಾಗುವ

ಜೀವನಾವಶ್ಯಕ ವಸ್ತುಗಳನ್ನು ಒದಗಿಸುವಲ್ಲಿ ಬಹುಮುಖ್ಯವಾದ ಸೇವೆಯನ್ನು ಇವರು ಸಲ್ಲಿಸಿದ್ದಾರೆ. ಭಾರತದಂತಹ ವಿಶಾಲ ರಾಷ್ಟ್ರದಲ್ಲಿ ಒಂದು ಕಾಲಕ್ಕೆ ವ್ಯಾಪಾರದ ಸರಬರಾಜು ವ್ಯವಸ್ಥೆಯ ಈ ಜನರ ಹಿಡಿತದಲ್ಲಿತ್ತು ಎಂಬುದನ್ನು ಮರೆಯುವಂತಿಲ್ಲ. ಕೆಲವು ಅರಸರಿಂದ, ಸೈನಿಕರಿಂದ ಸ್ವಾತಂತ್ರ್ಯಪೂರ್ವದಲ್ಲಿ ಈ ಜನಸಮುದಾಯಕ್ಕೆ ಒಂದು ಬಗೆಯ ದಾಸ್ಯ, ಕಿರುಕುಳ, ತೊಂದರೆಗಳು ಆದ ವಿವರಗಳು ಕುರಿತು ಮೌಖಿಕ ಕಥೆಗಳಿವೆ. ಮೂಲ ಲಂಬಾಣಿಗರ ವೇಷಭೂಷಣಗಳು ಬೇರೆ ಮಾದರಿಯಲ್ಲಿದ್ದವು. ಅರಸರ ಉಪಟಳ ತಾಳಲಾರದೆ ತಮ್ಮ ಮೂಲ ಉಡುಗೆತೊಡುಗೆಯನ್ನು ಬಿಟ್ಟು ಈಗಿನ ಉಡುಪಿನ ಮೊರೆ ಹೋದ ಕುರಿತ ಮಾಹಿತಿಗಳಿವೆ.

**೩.೧. ಕರಕುಶಲ ಕಲೆಗಳ ಪರಂಪರೆ**

ಮನುಷ್ಯನಿಗೆ ರಸಾನುಭವವನ್ನು ಉಂಟುಮಾಡಬಹುದಾದ ಯಾವುದೇ ರೀತಿಯ ರಚನೆ ಅಥವಾ ಸೃಷ್ಟಿಯನ್ನೇ ನಾವು ಕಲೆ ಎಂದು ಗುರುತಿಸುತ್ತೇವೆ. ಕಲೆಗಳ ಕುರಿತಾಗಿ ಈ ಹಿಂದೆ ಹಲವು ರೀತಿಯ ಅಧ್ಯಯನಗಳು ನಡೆದಿವೆ. ೬೪ ಕಲೆಗಳು ಮನುಷ್ಯನ ಬದುಕಿನ ಪ್ರತಿ ಹಂತದಲ್ಲಿಯೂ ಒಂದಿಲ್ಲ ಒಂದು ರೀತಿಯಲ್ಲಿ ಪ್ರಕಟಗೊಳ್ಳುತ್ತಲೇ ಬಂದಿವೆ. ಕಲೆಗಾರಿಕೆ, ಚಿತ್ರ, ಶಿಲ್ಪ, ನೃತ್ಯ ಇತ್ಯಾದಿ ಕಲೆಗಳು ಒಳಗೊಂಡಿರುತ್ತವೆ. ಯಾವುದೇ ಸಮುದಾಯದ ಜನರ ಸೌಂದರ್ಯಪ್ರಜ್ಞೆ ಮತ್ತು ಸಾಂಸ್ಕೃತಿಕ ಪ್ರಗತಿಯನ್ನು ಈ ಕಲೆಗಳ ಮೂಲಕ ಸೂಚಿಸುತ್ತವೆ. ಜೊತೆಗೆ ಮನುಷ್ಯನ ಆರ್ಥಿಕ ಸ್ಥಿತಿಗತಿಗಳನ್ನು ಭೌತಿಕ ಜೀವನದ ಬಾಹ್ಯ, ಆಂತರಿಕ ಪರಿವರ್ತನೆಯನ್ನು ತಿಳಿಸುತ್ತವೆ. ಜಾನಪದ ಕಲಾಪ್ರಪಂಚವು ಜನ ಜೀವನದಷ್ಟೆ ವಿಶಾಲವಾದುದು. ಕಾರಣ ಈ ಒಂದು ಕಲಾಪ್ರಪಂಚದಲ್ಲಿ ಅನೇಕ ರೀತಿಯ ಕಲೆಗಳು ಅಡಗಿವೆ. ಹೀಗಾಗಿ ಈ ಕಲಾ ಸಾಮ್ರಾಜ್ಯವು ಅತ್ಯಂತ ವ್ಯಾಪಕವಾದದು ಮತ್ತು ಪ್ರಾಚೀನವಾದುದಾಗಿದೆ. ಮಾನವನ ಅಗತ್ಯಕ್ಕೆ ಅನುಗುಣವಾಗಿ ಕಾಲಕಾಲಕ್ಕೆ ತಕ್ಕಂತೆ ಹಲವು ಕಲೆಗಳ ಉಗಮ-ವಿಕಾಸ ವೈವಿಧ್ಯತೆಗಳಿಗೆ ಮಹತ್ವದ ಕಾರಣವಾಗಿವೆ. ಅವನ ಆಶೋತ್ತರ ಬೌದ್ಧಿಕ ವಿಚಾರ ಕಲ್ಪನಾ ಸಾಮರ್ಥ್ಯ ಹಾಗೂ ಅವನ ಮಾನಸಿಕ ವ್ಯಾಪಾರಗಳಿಗೆ ಈ ಕಲೆಗಾರಿಕೆ ಸಾಕ್ಷಿಯಾಗಿವೆ. ಪಾರಂಪರಿಕವಾಗಿ ಬಂದಿರುವ ಹಲವು ಕಲೆಗಳು ಪುಸ್ತಕ ಜ್ಞಾನದಿಂದಾಗಿ ಬಂದವಲ್ಲ. ವ್ಯಕ್ತಿ ತನ್ನ ಜೀವನ ಉಪಯೋಗಕ್ಕಾಗಿ ಅಥವಾ ಹವ್ಯಾಸಕ್ಕಾಗಿ ಕಲಿತ ಈ ಕಲೆಗಳು ಬದುಕಿನ ಸ್ಥಿತ್ಯಂತರವನ್ನೇ ಬದಲಿಸಿತು. ಹೀಗೆ ಮುಂದಿನ ಪೀಳಿಗೆಗೆ ಈ ಕಲೆಗಾರಿಕೆ ರವಾನಿಸಿತು.

"ತಾಯಿ, ಮಗಳಿಗೆ ಅಡುಗೆ, ಹೊಲಿಗೆ, ಕಸೂತಿ ನೇಯ್ಗೆ, ರಂಗೋಲಿಗಳನ್ನು ಕಲಿಸುವಲ್ಲಿ ರೈತ, ಕಮ್ಮಾರ, ಗೊಲ್ಲರು ತಮ್ಮ ಮಕ್ಕಳಿಗೆ ವ್ಯವಸಾಯದ, ಮರಮುಟ್ಟು ತಯಾರಿಕೆಯ ಮತ್ತು ಪಶುಪಾಲನೆಯ ವಿಧಾನವನ್ನು ವಿವರಿಸುವಲ್ಲಿ ಹಳ್ಳಿಯ ಹಿರಿಯರು

ಕಿರಿಯರಿಗೆ ಆಟಪಾಟಗಳನ್ನು ಹೇಳಿಕೊಡುವಲ್ಲಿ ಬೇಟೆಗಾರ ತನ್ನವರಿಗೆ ಬೇಟೆಗೆ ಸಂಬಂಧಿಸಿದ ತಂತ್ರಗಳನ್ನು ಪ್ರಯೋಗ ಪೂರ್ವಕವಾಗಿ ಮನದಟ್ಟು ಮಾಡಿಕೊಡುವಲ್ಲಿ ಹೀಗೆ ಹಲವಾರು ವೃತ್ತಿಗಾರರು ತಮ್ಮ ಜ್ಞಾನದ ಅನುಭವ ವಿವೇಕ, ಕೌಶಲ್ಯ, ಅಭ್ಯಾಸ, ಪದ್ಧತಿಗಳನ್ನು ನಾಗರಿಕ ಸಂಸ್ಥೆಗಳ ನೆರವನ್ನು ಕೋರದೆ ಆಡಿ ಮಾಡಿ ಮುಂದಿನ ಸಂತತಿಗೆ ತೋರಿಸುವಲ್ಲಿ ಜನಪದ ಉಪಯುಕ್ತ ಕಲೆಗಳು ಸಹಾಯಕವಾಗಿವೆ."[೧]

ಆಧುನಿಕ ಕಾಲಘಟ್ಟದಲ್ಲಿ ವೈವಿಧ್ಯಮಯವಾಗಿ ಗೋಚರಿಸುವ ಕಲೆಗಳಿಗೆ ಜಾನಪದೀಯ ಕಲೆಗಾರಿಕೆಗಳು ಮೂಲ ಮಾದರಿಗಳಾಗಿವೆ. ಆರಂಭದಲ್ಲಿ ಮನುಷ್ಯ ಪ್ರಾಕೃತಿಕ ವಿಕೋಪಗಳಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಲು ಪ್ರಾರಂಭದಲ್ಲಿ ಮರದ ತೊಗಟೆ ಅಗಲವಾದ ಎಲೆಗಳಿಂದ ತನ್ನ ಮೈಮನವನ್ನು ಮುಚ್ಚಿಕೊಳ್ಳುತ್ತಿದ್ದ, ಮುಂದೆ ಕಾಲಾಂತರದಲ್ಲಿ ಅವನ ಜ್ಞಾನವು ಬೆಳೆದಂತೆ ಉಡುಪನ್ನು ಧರಿಸಿದ ನಂತರ ನಾಗರಿಕತೆಯ ವಿಕಾಸದೊಂದಿಗೆ ಉಡುಪನ್ನು ವಿವಿಧ ಮಾದರಿಗಳಲ್ಲಿ ತಯಾರಿಸಿ ತನ್ನ ಕಲೆಗಾರಿಕೆಯನ್ನು ತೋರ್ಪಡಿಸಿದ. ನಮ್ಮ ನಿತ್ಯದ ಬದುಕಿನಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿರುವ ಈ ಕಲೆಗಳಲ್ಲಿ ಕೆಲವನ್ನು ಲಲಿತಕಲೆ(Fine Arts) ಮತ್ತು ಕುಶಲಕಲೆ(Craft) ಎಂದು ಗುರುತಿಸುತ್ತೇವೆ.

ಈ ಕರಕುಶಲ ಕಲೆಗಳ ಉಗಮದ ಕುರಿತಾಗಿ ನಿರ್ದಿಷ್ಟವಾಗಿ ಹೇಳುವುದು ಕಷ್ಟದ ಸಂಗತಿಯಾಗಿದೆ. ಇವುಗಳ ಉಗಮ ದೈವಿಮೂಲದಿಂದ ಬಂದಿದೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಅಂದರೆ ಕಲೆಗಳು ತ್ರಿಮೂರ್ತಿಗಳಿಂದ ಋಷಿಗಳಿಗೆ, ಋಷಿಗಳಿಂದ ದೇವ ಮಾನವನ ಶಿಲ್ಪಿಗಳಿಗೆ ಬೋಧಿತವಾಗಿ ಲೋಕದ ತುಂಬಾ ವಿಕಾಸನ ಹೊಂದಿದವು. ಈ ಹಿನ್ನೆಲೆಯಲ್ಲಿ ವೇದ, ಶಾಸ್ತ್ರ, ಪುರಾಣಗಳು ವಿಶ್ವಕರ್ಮರನ್ನು ಎಲ್ಲ ಸೃಜನಶೀಲತೆಯ ವ್ಯಕ್ತಿರೂಪವಾಗಿ ಕಂಡಿವೆ. ಆದುದರಿಂದಲೇ ವಿಶ್ವಕರ್ಮರನ್ನು ವಿಶ್ವರಚನಾಕಾರ ಎಂದು ವರ್ಣಿಸಿ ಅವನನ್ನು ಸಕಲ ಕಲಾಜನಕ, ಸಕಲ ಕಲಾ ಅಧಿಷ್ಠಾನ ದೇವತೆಯೆಂದು ಕಾಣಲಾಗಿದೆ."[೨]

ವಿಶ್ವಕರ್ಮನಿಂದ ಕುಶಲ ಕಲೆಗಳೆಲ್ಲವೂ ವಂಶಸೂತ್ರ ಹಿಡಿದು ವಿಕಾಸಗೊಂಡವೆಂದು ತಿಳಿದುಬರುತ್ತದೆ. ಹೀಗಾಗಿ ಈ ಕರಕುಶಲ ಕಲೆಗಳಿಗೆ ಒಂದು ದೀರ್ಘವಾದ ಸಾಂಪ್ರದಾಯಿಕ ಪರಂಪರೆ, ಇತಿಹಾಸ ಕಂಡುಬರುತ್ತದೆ. ಇನ್ನೂ ಕೆಲವು ಕರಕುಶಲ ಕಲೆಗಳು ಮಹಿಳೆಯರ ಕೈಕಸುಬಾಗಿ ಆರಂಭವಾದ ಈ ಕಲೆ ಮುಂದೆ ವಿಸ್ಮಯಕರವಾಗಿ ಬೆಳೆದುಬಂದಿದೆ.

---

೧. ದೇ. ಜವರೇಗೌಡ, ೧೯೮೬, **ಜಾನಪದ ವಾಹಿನಿ,** ಡಿ.ವಿ.ಕೆ. ಮೂರ್ತಿ ಪ್ರಕಾಶನ, ಪು.ಸಂ. ೪೭.

೨. ಕರೀಗೌಡ ಬೀಚನಹಳ್ಳಿ (ಸಂ), ೨೦೦೦, **ಕರಕುಶಲ ಕಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ–೧.

ನಾಗರಿಕತೆ ಬೆಳೆದಂತಲ್ಲಾ ಈ ಕರಕುಶಲ ಕಲೆಗಳಲ್ಲಿ ವೈವಿಧ್ಯಮಯವಾದ ಆವಿಷ್ಕಾರಗಳು ಆಗಿವೆ. ಇದು ಈ ಕಲೆಯಲ್ಲಿ ಆಗಿರುವ ಬದಲಾವಣೆಯನ್ನು, ಅಭಿವೃದ್ಧಿಯನ್ನು ಅಥವಾ ರೂಪಾಂತರವನ್ನು ತಿಳಿಸುತ್ತದೆ. ಇವು ಚಾರಿತ್ರಿಕ, ಪ್ರಾಕೃತಿಕ ಹಾಗೂ ಸಂಪ್ರದಾಯಕವಾಗಿ ಬಹುಮುಖ್ಯವಾದ ಸ್ಥಾನವನ್ನು ಈ ಕರಕುಶಲ ಕಲೆಗಳು ಅಲಂಕರಿಸಿವೆ. ಆಯಾ ಪರಿಸರದಲ್ಲಿ ಸಿಗುವ ಕಚ್ಚಾ ಸಾಮಗ್ರಿಗಳೇ ಈ ಕರಕುಶಲ ಕಲೆಗಳಿಗೆ ಮಹತ್ವದ ವಸ್ತುವಾಗಿದ್ದವು. ಇವುಗಳ ಮುಖಾಂತರ ಮನುಷ್ಯನ ಸೌಂದರ್ಯಪ್ರಜ್ಞೆ ಪ್ರತಿಫಲಿತವಾಗುತ್ತಿತ್ತು. ಕ್ರಿ.ಪೂ ಸುಮಾರು ೨೫೦೦ ವರ್ಷಗಳಿಂದಲೂ ಭಾರತೀಯ ಕರಕುಶಲ ಕಲೆಗಳಿಗೆ ಅಪಾರ ಬೇಡಿಕೆ ಇದೆ. ಈ ಕಲೆಗಾರಿಕೆ ಸಾಂಪ್ರದಾಯಿಕ ಹವ್ಯಾಸ ವೃತ್ತಿಯಾಗಿ ಮಾರ್ಪಟ್ಟಿದೆ.

"ಜನಪದ ವಸ್ತ್ರಕಲೆಯಂತೂ ಅತ್ಯಂತ ಪ್ರಾಚೀನವಾದುದು. ಈ ಕಲೆ ಜನಾಂಗದಿಂದ ಜನಾಂಗಕ್ಕೆ, ಬುಡಕಟ್ಟಿನಿಂದ ಬುಡಕಟ್ಟಿಗೆ, ದೇಶದಿಂದ ದೇಶಕ್ಕೆ, ವಯಸ್ಸಿನಿಂದ ವಯಸ್ಸಿಗೆ, ಲಿಂಗದಿಂದ ಲಿಂಗಕ್ಕೆ ಹಲವು ವ್ಯತ್ಯಾಸಗಳನ್ನು ಗಮನಿಸಬಹುದು. ಉಡುಗೆ ತೊಡುಗೆಗಳು ಒಂದೊಂದು ಬುಡಕಟ್ಟಿನ ವೈಶಿಷ್ಟ್ಯವನ್ನು ಕಾಪಾಡುವ ಕುರುಹುಗಳಾಗಿ ಪರಿಗಣಿಸಿವೆ. ಕೊಡವ ಸ್ತ್ರೀಯರ ಉಡುಗೆಯ ಮೋಡಿ ಒಂದಾದರೆ, ಇತರರದೇ ಮತ್ತೊಂದು ರೀತಿಯದ್ದಾಗಿದೆ. ಲಂಬಾಣಿ ಹೆಂಗಸರ ಉಡುಗೆಯ ಸಂಕೀರ್ಣತೆಯನ್ನು ಬೇರೆ ಎಲ್ಲಿಯೂ ಕಾಣುವಂತಿಲ್ಲ. ಉತ್ತರ ಭಾರತದ ಗಂಡಸರ ಉಡುಗೆ ಒಂದು ರೀತಿಯದ್ದಾದರೆ, ದಕ್ಷಿಣದವರದ್ದೇ ಮತ್ತೊಂದು ತೆರನದಾಗುತ್ತದೆ. ಪುರಾತನ ಹಾಗೂ ನೂತನ ಗ್ರೀಕರ ಉಡುಗೆ ತೊಡುಗೆಗಳಲ್ಲಿ ಅಜಗಜಾಂತರ ವ್ಯತ್ಯಾಸವಿದೆ. ಆಫ್ರಿಕಾದ ಕರಿಯರ ಉಡುಗೆಯ ಬೆಡಗೊಂದು ರೀತಿಯದಾದರೆ, ಕೆಂಪು ಇಂಡಿಯನ್ನರ ವಸ್ತ್ರವಿಧಾನವೇ ಬೇರೆಯದ್ದಾಗಿದೆ. ಕೂಸಿಗೆ ತೊಡಿಸುವ ಬಟ್ಟೆಯೇ ಬೇರೆ, ಯುವಕ ತೊಡುವ ಉಡುಪು ಬೇರೆ, ಅಂತೆಯೇ ಮುದಕನದು ಮತ್ತೊಂದು ಬಗೆಯದಾಗಿರುತ್ತದೆ."[೩] ಹೀಗೆ ವಯಸ್ಸಿನಿಂದ ವಯಸ್ಸಿಗೆ ಭಿನ್ನ ಅಭಿರುಚಿಯ ಆಸಕ್ತಿಯ ಉಡುಪುಗಳು ವಾಯುಗುಣಕ್ಕೆ ತಕ್ಕಂತೆ ಭಿನ್ನವಾಗಿ ಗೋಚರಿಸುತ್ತವೆ. ಒಂದು ಜನಾಂಗದ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಲು ಈ ವೇಷಭೂಷಣಗಳು ಮಹತ್ವದ ಆಕಾರವನ್ನು ಪಡೆದಿವೆ. ವಯೋಮಾನಕ್ಕೆ ತಕ್ಕಂತೆ ಲಿಂಗ, ವೃತ್ತಿಯ ಹಿನ್ನೆಲೆಯಲ್ಲಿ ಉಡುಗೆ ತೊಡುಗೆಗಳು ಕಂಡುಬರುತ್ತವೆ. ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಈ ಉಡುಪುಗಳಲ್ಲಿ ಹಲವು ಮಾದರಿಗಳನ್ನು ಕಾಣಲೂ ಸಾಧ್ಯವಿದೆ.

---

೩. ದೇ. ಜವರೇಗೌಡ, ೧೯೮೭, **ಜಾನಪದ ವಾಹಿನಿ,** ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪು.ಸಂ. ೫೩.

ಭಾರತೀಯ ಸಮಾಜದ ಉಡುಪುಗಳನ್ನು ಕೇವಲ ದೈಹಿಕ ಉಪಯುಕ್ತತೆಗೆ ಮಾತ್ರ ಸೀಮಿತ ಎಂದು ಪರಿಗಣಿಸುವುದು ಸಮಂಜಸವಾಗದು. ಏಕೆಂದರೆ ಭಾರತೀಯ ಉಡುಪುಗಳು ವೃತ್ತಿ, ವರ್ಗ, ಜನಾಂಗ ಭಿನ್ನತೆ ಮತ್ತು ವಯೋಗುಣವನ್ನು ಅನುಸರಿಸಿ ಭಿನ್ನ ಸ್ವರೂಪವನ್ನು ಪಡೆದಿವೆ.

ಕರಕುಶಲ ಕಲೆಗಳು ಕಾಲದಿಂದ ಕಾಲಕ್ಕೆ ಹೊಸ ಹೊಸ ಬಗೆಯ ವಿನ್ಯಾಸವನ್ನು ಪಡೆದವು. ಅವು ದೈನಂದಿನ ಬದುಕಿನ ನೆಲೆಯಿಂದ ಹುಟ್ಟಿಕೊಂಡ ಉಪಯೋಗಿ ವಸ್ತುಗಳಾಗಿವೆ. ಮಾನವನ ಸೃಜನಶೀಲ ಜ್ಞಾನ ಈ ವಸ್ತುಗಳಲ್ಲಿ ಅಭಿವ್ಯಕ್ತವಾಗಿದೆ. ಅವನ ಕಲ್ಪನೆ, ಪ್ರಯೋಗಶೀಲತೆ ಮತ್ತು ತಂತ್ರಕೌಶಲ್ಯಗಳು ಸೇರಿ ತನಗೆ ತನ್ನ ಕುಟುಂಬಕ್ಕೆ ಹಾಗೂ ಜನಾಂಗಕ್ಕೆ ಉಪಯೋಗವಾಗಬೇಕಾದ ವಸ್ತು, ಉಪಕರಣ, ಪರಿಕರ, ಸಾಧನ, ಸಲಕರಣೆಗಳನ್ನು ತಯಾರಿಸಿಕೊಂಡನು. ಹೀಗೆ ಮನುಷ್ಯ ತನ್ನ ಸ್ವಪ್ರತಿಭೆಯಿಂದ ಈ ಕರಕುಶಲ ಕಲೆಗಳಲ್ಲಿ ತನ್ನ ನಾವೀನ್ಯತೆಯನ್ನು ತೋರ್ಪಡಿಸಿದನು. ಇದರಿಂದ ತನ್ನ ಸಮಕಾಲೀನ ಸಮಾಜದ ಸಾಂಸ್ಕೃತಿಕ ಪ್ರತಿನಿಧಿಗಳು ಈ ಕರಕುಶಲ ಕಲೆಗಳು ಒಂದು ಪ್ರದೇಶದಿಂದ ಅಥವಾ ಒಂದು ಜನಾಂಗದ ಸಂಪ್ರದಾಯ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಮುಂದುವರೆಸುವ ಸಾಧನವಾಗಿ ಗೋಚರಿಸುತ್ತವೆ. ಭಾರತದ ವಿಶಾಲವಾದ ಪ್ರದೇಶದಲ್ಲಿ ಭೌಗೋಳಿಕ ಹಾಗೂ ಜನಾಂಗೀಯ ವ್ಯತ್ಯಾಸಗಳಿಂದಾಗಿ ತುಂಬಾ ಭಿನ್ನತೆಯು ಕಂಡುಬರುತ್ತದೆ. ಹಾಗಾಗಿ ಕರ್ನಾಟಕದ ವಿವಿಧ ಭಾಗಗಳಲ್ಲಿ ನೆಲೆಸಿರುವ ಲಂಬಾಣಿ ಸಮುದಾಯದ ಉಡುಪಿನಲ್ಲೂ ಭಿನ್ನತೆಗಳಿವೆ.

ಹೀಗಾಗಿ ಭಾರತೀಯ ಕರಕುಶಲ ಕಲೆಗಳು ವೈವಿಧ್ಯಪೂರ್ಣ ಮತ್ತು ಮಹತ್ವಪೂರ್ಣವಾಗಿರುವುದಕ್ಕೆ ಇಲ್ಲಿಯ ಹವಾಮಾನ ಹಾಗೂ ಜನರ ಸೃಜನಶೀಲ ಜ್ಞಾನವೇ ಮುಖ್ಯ ಕಾರಣ. ಭಾರತದ ಲಂಬಾಣಿಗರ ಉಡುಗೆ ತೊಡುಗೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋದಂತೆ ಭಿನ್ನತೆಯ ಸ್ವರೂಪ ಕಂಡುಬರುತ್ತದೆ. ಸ್ತ್ರೀಯರು ತಮ್ಮ ಮೈಮೇಲೆ ಧರಿಸುವ ಬಟ್ಟೆ ಅದರ ಮೇಲೆ ರಚಿಸಿದ ಕಸೂತಿಕಲೆಯಲ್ಲಿ ತಮ್ಮ ಸೃಜನಶೀಲತೆಯನ್ನು ತೋರ್ಪಡಿಸುತ್ತವೆ. ದೇಹದ ರಕ್ಷಣೆಗೆ ಮಾತ್ರ ಸೀಮಿತವಾಗಿದ್ದ ಉಡುಪುಗಳು ಕಾಲಾನಂತರದಲ್ಲಿ ನಾಗರಿಕತೆಯ ಪ್ರಭಾವಕ್ಕೆ ಒಳಗಾಗಿ ಮನುಷ್ಯ ತನ್ನ ಉಡುಗೆ ತೊಡುಗೆಗಳಲ್ಲಿ ವಿಭಿನ್ನತೆಯನ್ನು ಕಾಣಿಸಿಕೊಂಡ. ಅವನ ಸೌಂದರ್ಯಪ್ರಜ್ಞೆ ಹೆಚ್ಚುತ್ತಾ ಹೋದಂತೆ ತಾನು ತಯಾರಿಸುವ ವಸ್ತುಗಳನ್ನು ಆಕರ್ಷಕಮಯವಾಗಿ ತಯಾರಿಸಲು ಪ್ರಯತ್ನಿಸಿದ.

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಉಡುಪಿಗೆ ಮಹತ್ವ ಕೊಟ್ಟಂತೆ ತೊಡುವ ಆಭರಣಕ್ಕೂ ಮಹತ್ವದ ಸ್ಥಾನವನ್ನು ನೀಡಿದ್ದಾರೆ. ಕಾಲದಿಂದ ಕಾಲಕ್ಕೆ ಈ ಆಭರಣಗಳಲ್ಲಿ ವೈವಿಧ್ಯ ವಿನ್ಯಾಸಗಳ ಮಾದರಿಯಲ್ಲಿ ರಚನೆಯಾದ ಆಭರಣಗಳು ಗಮನ ಸೆಳೆಯುತ್ತವೆ. ಪ್ರಾಚೀನ ಕಾಲದ ಶಿಲ್ಪಿಗಳು ಈ ಆಭರಣ ಕುರಿತಾಗಿ ಉಡುಗೆಗಿಂತ ತೊಡುಗೆಯ ಕಡೆಗೆ ಹೆಚ್ಚಿನ ಒಲವನ್ನು ತೋರಿದ್ದಾರೆ. ಅಲ್ಲದೆ ಪ್ರಾಚೀನ ಕವಿಗಳು ತಮ್ಮ ಕಾವ್ಯಗಳಲ್ಲಿ ಆಭರಣಗಳ ಕುರಿತಾಗಿ ಮಹತ್ವದ ವಿಚಾರವನ್ನು ಅಭಿವ್ಯಕ್ತಿಪಡಿಸಿದ್ದಾರೆ. ರಾಜಮಹಾರಾಜರು, ರಾಣಿಯರು, ಮಂತ್ರಿಗಳು, ಸೈನಿಕರು ಹಾಗೂ ಸೇವಕ ಸೇವಕಿಯರು ವಿವಿಧ ಮಾದರಿಯ ಉಡುಪು ಮತ್ತು ಆಭರಣಗಳನ್ನು ತೊಡುತ್ತಿದ್ದರ ಬಗ್ಗೆ ಚಾರಿತ್ರಿಕ ಆಧಾರಗಳ ಮೂಲಕ ಮನಗಾಣಬಹುದು, ಅಲ್ಲದೇ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಸಮುದಾಯವಾರು, ಜಾತಿವಾರು ಅನೇಕ ರೀತಿಯ ಉಡುಗೆ ತೊಡುಗೆಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದಾಗಿದೆ.

ಕಸೂತಿ ಕಲೆಯು ಭಾರತದಲ್ಲಿ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ವಿವಿಧ ರೀತಿಯಲ್ಲಿ ಮೂಡಿಬಂದಿದೆ. ಈ ಕಸೂತಿ ಕಲೆಯನ್ನು ರೂಪಿಸುವಲ್ಲಿ ಮಹಿಳೆಯರ ಪಾತ್ರ, ಅಪಾರವಾಗಿದೆ. ಪ್ರಾಣಿ, ಪಕ್ಷಿ, ಗಿಡ, ಬಳ್ಳಿ, ಹೂ, ರಥ, ಎಲೆ, ಹೀಗೆ ಅನೇಕ ನೈಸರ್ಗಿಕದತ್ತವಾದ ಅಂಶಗಳನ್ನು ಆಧಾರವಾಗಿ ಇಟ್ಟುಕೊಂಡು ತಮ್ಮ ಕಸೂತಿಕಲೆಯ ವಿವಿಧ ಮಾದರಿಯ ಚಿತ್ತಾರಗಳನ್ನು ರಚಿಸಿದ್ದಾರೆ. ಸ್ತ್ರೀಯರ ಕೋಮಲ ಮನಸ್ಸಿನ ಭಾವನೆಗಳನ್ನು ಅಭಿವ್ಯಕ್ತಪಡಿಸುವ ಮಾಧ್ಯಮವಾಗಿ ಕಸೂತಿಕಲೆ ಮೂಡಿಬಂದಿದೆ. "ಕಸೂತಿಕಲೆಯಲ್ಲಿ ಮುಖ್ಯವಾಗಿ ನಾಲ್ಕು ಮಾದರಿಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ ನೇಗಿ, ಗಾವಂಟಿ, ಮೆಂಥಿ ಮತ್ತು ಮುರುಗಿ ಇವುಗಳಲ್ಲಿ ನೇಗಿ ಎನ್ನುವುದು ಕನ್ನಡದ ನೇಯ್ಗೆ ಆಗಿರಬಹುದು."[೪] ಎಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.

ಈ ನೇಯ್ಗೆ ಸಂಸ್ಕೃತಿಯನ್ನು ತಮ್ಮ ಬದುಕಿನಲ್ಲಿ ರೂಪಿಸಿಕೊಂಡ ಹಲವು ಸಮುದಾಯಗಳು ಕಂಡುಬರುತ್ತವೆ. ಅದರಲ್ಲೂ ಕಾಡಿನ ಪರಿಸರದಲ್ಲಿ ವಾಸವಾಗಿದ್ದ ಲಂಬಾಣಿಗರು ಪ್ರಕೃತಿಯ ವೈಚಿತ್ರ್ಯಗಳನ್ನು ತಮ್ಮ ಉಡುಗೆಯ ಮೇಲೆ ವಿವಿಧ ರೀತಿಯ ಚಿತ್ರಗಳ ಮೂಲಕ ತೋರ್ಪಡಿಸಿದ್ದಾರೆ. ಕೇವಲ ಬಟ್ಟೆ ಮಾಧ್ಯಮಗಳಲ್ಲದೆ ತಮ್ಮ ದೇಹದ ಅಂಗಾಂಗಗಳ ಮೇಲೆ ಅನೇಕ ರೀತಿಯ ಕಲೆಯ ವಿವಿಧ ಮಾದರಿಗಳನ್ನು ಹಚ್ಚೆ ಹಾಕಿಸಿಕೊಂಡಿದ್ದಾರೆ. ವಿವಿಧ ಶಬ್ದರೂಪದಲ್ಲಿ ಕರೆಸಿಕೊಳ್ಳುವ ಹಚ್ಚೆ ಚಿತ್ರಕಲೆ 'ಪಚ್ಚೆ'

---

೪. ಡಾ. ಕರೀಗೌಡ ಬೀಚನಹಳ್ಳಿ (ಸಂ), ೨೦೦೦, **ಕರಕುಶಲ ಕಲೆಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು-೪೨.

ಎಂಬ ಪದದಿಂದ ಬಂದಿದೆ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ. ಪ್ರಾಚೀನ ಕಾಲದಿಂದಲೂ ಮಾನವ ಈ ಹಚ್ಚೆಯ ಚಿತ್ರಕಲೆಗೆ ಮನಸೋತಿದ್ದಾನೆ. ಹಲವು ಬುಡಕಟ್ಟುಗಳಲ್ಲಿ ಮಹಿಳೆ ಹಾಗೂ ಅಪರೂಪಕ್ಕೆ ಪುರುಷರು ಸಹ ಈ ಹಚ್ಚೆಯ ಕಲೆಯನ್ನು ತಮ್ಮ ಅಂಗಾಂಗದ ಮೇಲೆ ಬಿಡಿಸಿಕೊಂಡಿರುವುದನ್ನು ಕಾಣುತ್ತೇವೆ. ಕಾಲದಿಂದ ಕಾಲಕ್ಕೆ ಈ ಹಚ್ಚೆಯ ಸ್ವರೂಪ ಹಾಗೂ ಮಾದರಿಯಲ್ಲಿ ವಿಭಿನ್ನತೆಗಳು ಗೋಚರಿಸಿವೆ.

ಇಂದಿನ ಕಾಲದಲ್ಲಿ ಯಂತ್ರಾಧಾರಿತ ಹಚ್ಚೆ ಹಾಕುವ ಮಾದರಿಗಳು ಕಾಣಿಸುತ್ತವೆ. ಕರ್ನಾಟಕದಲ್ಲಿ ಅನೇಕ ಜಾತಿಗಳ ಉಪಕಸುಬುಗಳು ಹಚ್ಚೆ ಹಾಕುವುದೇ ಆಗಿದೆ. ಈ ಕಲೆಗಾರಿಕೆ ಮೂಲಕ ಅನೇಕ ಕುಟುಂಬಗಳು ಬದುಕನ್ನು ಕಟ್ಟಿಕೊಂಡಿವೆ. ಈ ಹಚ್ಚೆ ಬಿಡಿಸುವ ಚಿತ್ರಗಳು ಪ್ರದೇಶದಿಂದ ಪ್ರದೇಶಕ್ಕೆ ಜನಾಂಗದಿಂದ ಜನಾಂಗಕ್ಕೆ ಭಿನ್ನ ಮಾದರಿಯಲ್ಲಿ ಕಲಾತ್ಮಕವಾಗಿ ಕಂಡುಬರುತ್ತವೆ. ಪ್ರಾಣಿ, ಪಕ್ಷಿಗಳು, ಹಾವು, ಚೇಳು ಹೀಗೆ ಅನೇಕ ಮಾದರಿಯ ಕಲೆಗಳು ಹಚ್ಚೆಯ ಮೂಲಕ ಹೊರಹೊಮ್ಮುತ್ತಿದ್ದವು. ಹಾಗೆ ಲಂಬಾಣಿ ಸಮುದಾಯದ ಮಹಿಳೆಯರು ಈ ಹಚ್ಚೆಗಳನ್ನು ತಮ್ಮ ಅಂಗಾಂಗಗಳ ಮೇಲೆ ವೈವಿಧ್ಯಮಯವಾಗಿ ಹಾಕಿಸಿರುವುದನ್ನು ಕಾಣುತ್ತೇವೆ. ಹೀಗೆ ಅನೇಕ ಕರಕುಶಲ ಕಲೆಗಳಲ್ಲಿ ಬಟ್ಟೆ ಮಾಧ್ಯಮ, ಲೋಹ ಮಾಧ್ಯಮ, ಚರ್ಮ ಮಾಧ್ಯಮ ಹಾಗೂ ಸಂಕೀರ್ಣ ಮಾಧ್ಯಮದಂತಹ ಕರಕುಶಲ ಕಲೆಗಳು ಪರಿಚಯಾತ್ಮಕ ಅಧ್ಯಯನವನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಲಂಬಾಣಿ ಸಮುದಾಯದ ಉಡುಗೆ ತೊಡುಗೆಯಲ್ಲಿ ಪುರುಷರಿಗಿಂತ ಮಹಿಳೆಯರೇ ಭಿನ್ನರಾಗಿ ಗೋಚರಿಸುತ್ತಾರೆ. ಕಾರಣ ಇವರು ನಿಸರ್ಗದತ್ತವಾಗಿ ದೊರಕುವ ಕವಡೆ, ಕನ್ನಡಿ, ನಾಣ್ಯಗಳನ್ನು ತಮ್ಮ ಉಡುಗೆ ತೊಡುಗೆಯಲ್ಲಿ ವಿಶೇಷವಾಗಿ ಬಳಸುವುದರಿಂದ ಇತರೆ ಸಮುದಾಯದ ಮಹಿಳೆಯರಿಗಿಂತ ಇವರು ಭಿನ್ನವಾಗಿ ಕಂಡುಬರುತ್ತಾರೆ. ನಿಸರ್ಗದ ನಡುವೆ ಬದುಕುತ್ತಿದ್ದ ಈ ಸಮುದಾಯದ ಮಹಿಳೆಯರು ತಮ್ಮ ಜ್ಞಾನಕ್ಕೆ ತೋಚಿದಂತೆ ಒಡವೆಗಳ ವಿನ್ಯಾಸಗಳನ್ನು ಮಾಡಿಕೊಂಡಿದ್ದಾರೆ. ಗಿಡಗಳ ಎಲೆ, ಲತೆ, ಮುಗುಳು, ಹೂ ಬೀಜ, ಹೀಗೆ ವಿವಿಧ ಆಕಾರದ ಚಿತ್ತಾರಗಳನ್ನು ತಮ್ಮ ಉಡುಪಿನ ಮೇಲೆ ಆಲಂಕಾರಿಕವಾಗಿ ನೆಯ್ದರು. ಅವರು ಧರಿಸುವ ವಿವಿಧ ಬಣ್ಣಗಳ ವಸ್ತ್ರಗಳು ಹಾಗೂ ಆಭರಣಗಳು ಅವರೇ ತಯಾರಿಸುತ್ತಾರೆ. ಈ ಸಮುದಾಯದ ಸ್ತ್ರೀಯರು ಕೈ, ಬೆರಳು, ಕೊರಳು, ಮೂಗು, ಎದೆ, ಕಿವಿ, ಪಾದ ಹೀಗೆ ಅಡಿಯಿಂದ ಮುಡಿಯ ತನಕ ವಿವಿಧ ರೀತಿಯ ಆಭರಣ ಹಾಗೂ ಕೆಲವೊಮ್ಮೆ ಮಣಿಸರಗಳನ್ನು ತಮ್ಮ ದೇಹದ ಮೇಲೆ ಅಲಂಕಾರಕ್ಕಾಗಿ ಧರಿಸುವರು.

ಕರ್ನಾಟಕದ ಹಲವು ಬುಡಕಟ್ಟುಗಳಲ್ಲಿ ವಿಭಿನ್ನ ರೀತಿಯ ಉಡುಗೆ ತೊಡುಗೆಗಳು ಧರಿಸುವುದನ್ನು ಕಾಣಬಹುದು, ಹಕ್ಕಿಪಿಕ್ಕಿ, ಕೊರಗರು, ಸಿದ್ಧಿಯರು, ಎರವರು, ದುರ್ಗಿಮುರ್ಗಿ, ಮೊಂಡರು, ಲಂಬಾಣಿಗರು ಈ ಎಲ್ಲಾ ಬುಡಕಟ್ಟುಗಳ ವೇಷಭೂಷಣಗಳಲ್ಲಿ ವಿಭಿನ್ನ ರೀತಿಯ ಮಾದರಿಗಳು ಕಂಡುಬರುತ್ತದೆ. ಈ ಅಧ್ಯಯನದಲ್ಲಿ ಲಂಬಾಣಿ ಮಹಿಳೆಯರ ಉಡುಗೆ ತೊಡುಗೆಯಂತಹ ಕರಕುಶಲ ಕಲೆಗಳ ಕುರಿತಾಗಿ ಈ ಕೆಳಗಿನಂತೆ ಪ್ರಸ್ತಾಪಿಸಲಾಗಿದೆ.

**೩.೨. ಬಟ್ಟೆ ಮಾಧ್ಯಮದ ಕರಕುಶಲ ಕಲೆ**

'ಕಸೂತಿ' ಇದೊಂದು ಅತ್ಯಂತ ಪ್ರಾಚೀನ ಕೃತಿಯಾಗಿದ್ದು, ಬಟ್ಟೆ, ಸೂಜಿ, ದಾರ, ಬೆರಳುಗಳು ಮತ್ತು ತಾಳ್ಮೆ ಹಾಗೂ ಸೃಜನಶೀಲ ಮನಸ್ಸುಗಳ ಸಂಯೋಜಿತ ನೃತ್ಯ ಸೃಷ್ಟಿಸುವ ಅದ್ಭುತ ದೃಶ್ಯ ಕಾವ್ಯವಾಗಿದೆ.

ಈಜಿಪ್ಟ್‌ನ ಮಮ್ಮಿಗಳ ಮೇಲಿನ ಹೊದಿಕೆಗಳಿಂದ ಹಿಡಿದು ಚೀನಾ, ಭಾರತದ ರಾಜಮಹಾರಾಜರುಗಳ ಸಿಂಹಾಸನ, ಪಾದರಕ್ಷೆ, ಉಡುಗೆ, ಕಿರೀಟಗಳವರೆಗೆ ಮೋಸೆಸ್‌ನ ಅರಮನೆಯ ಕಿಟಕಿ ಪರದೆಗಳಿಂದ ಹಿಡಿದು ಪರ್ಶಿಯಾದ ರತ್ನ ಕಂಬಳಿಗಳವರೆಗೆ ಎಲ್ಲವೂ ಕಸೂತಿಯಿಂದ ಮನಸೆಳೆಯುತ್ತವೆ.

ಕಸೂತಿ ಇಂಗ್ಲೀಷ್‌ನ EMBROIDERYಗೆ ಸಮಾನಾರ್ಥಕವಾಗಿದ್ದು, ಅದು ಫ್ರೆಂಚ್‌ನ 'BRODER'ನಿಂದ ಉಗಮವಾಗಿದೆ. 'BRODER' ಎಂದರೆ ಅಂಚು. ತುದಿ ಅಥವಾ ಗಡಿ ಎಂದರ್ಥ.

ಕಿ.ಪ್ರೂ. ೪ನೇ ಶತಮಾನದಲ್ಲಿ ನಮಗೆ ಸೂಜಿಗಳು ಹಾಗೂ ಕಸೂತಿ ವಸ್ತುಗಳು ದೊರೆತಿವೆ. ತೈತ್ತಕೀಯ ಸಂಹಿತೆ ಹಾಗೂ ಋಗ್ವೇದದಲ್ಲೂ ಸೂಜಿ ಮತ್ತು ಕಸೂತಿಗಳ ಮಾಹಿತಿ ಇದೆ.

ಕಸೂತಿ ಸಾಮಾನ್ಯವಾಗಿ ಹೆಣ್ಣುಮಕ್ಕಳ ಕೆಲಸವಾಗಿದ್ದರೂ ಒಬ್ಬ ಶ್ರೇಷ್ಠ ನೇಕಾರ ಅಥವಾ ಚಿತ್ರಕಾರದ ಅದ್ಭುತ ವರ್ಣ ಸಂಯೋಜನೆ ದೃಢವಾದ ಗೆರೆಗಳು, ಅನಾವಶ್ಯಕ ಅಂಶಗಳ ನಿವಾರಣೆ, ಘನತೆ, ಗಾಂಭೀರ್ಯ, ಕಲಾತ್ಮಕತೆ, ಸೃಜನಶೀಲತೆ, ಅಪೂರ್ವ ಅಭಿರುಚಿ, ಕೌಶಲ್ಯಗಳೆಲ್ಲಾ ಮೇಳೈಗೆ ಕಸೂತಿ ಬಟ್ಟೆಯನ್ನು ಕೇವಲ ಅಲಂಕಾರಿಕ ವಸ್ತುವಿನ ಮಟ್ಟದಿಂದ ಅಮೂಲ್ಯ ಕಲಾಕೃತಿಯ ಮಟ್ಟಕ್ಕೆ ಏರಿಸಿವೆ ಎಂದರೆ ಅತಿಶಯೋಕ್ತಿಯಾಗಲಾರದು.

ಹೊಲಿಯಲು ಸಾಧ್ಯವಾಗುವ ಯಾವುದೇ ಬಟ್ಟೆ, ಚರ್ಮಗಳ ಮೇಲೆ ದಾರ, ಚಿನ್ನ, ಬೆಳ್ಳಿ, ಪ್ರಾಣಿಗಳ ಕೂದಲುಗಳು, ಸಸ್ಯಜನ್ಯ, ನಾರುಗಳು ಇತ್ಯಾದಿಗಳನ್ನು ಬಳಸಿ ಅಮೂಲ್ಯ ರತ್ನಗಳು, ಕವಡೆ, ಕನ್ನಡಿ ಚೂರುಗಳ ಅಲಂಕಾರದೊಂದಿಗ ತಯಾರಾಗುವ ವಸ್ತುಗಳು ಅನಾದಿಕಾಲದಿಂದಲೂ ರಾಜಮಹಾರಾಜರಿಂದ ಹಿಡಿದು ಸಾಮಾನ್ಯ ಜನರವರೆಗೆ ನೆನಪಿನ



ಕಸೂತಿ ರಚಿಸುವಲ್ಲಿ ನಿರತಳಾದ ಮಹಿಳೆಯರು







ಕಸೂತಿಗೆ ಕನ್ನಡಿ ಜೋಡಿಸುತ್ತಿರುವುದು



ಕಸೂತಿ ಹಾಕುತ್ತಿರುವುದು



## ಕಸೂತಿ ಕಲಾವಿದರು

ಗಂಗುಬಾಯಿ ಚಾನು ರಾಠೋಡ





ಗೀರಿಜಾಬಾಯಿ ಗೋವಿಂದ ರಾಠೋಡ



## ಕಸೂತಿ ಕಲಾವಿದರು



ಮೋತಿಬಾಯಿ ರೂಪಸಿಂಗ ರಾಠೋಡ



ತಾರಾಬಾಯಿ ಮಹಾದೇವ ರಾಠೋಡ



ಪ್ರೇಮಾ ಮೋಹನ ನಾಯಕ



ಜಾನಕಿ ಗೇಮು ರಾಠೋಡ

ಕಾಣಿಕೆ ಅಥವಾ ಕೊಡುಗೆ ನೀಡಲು ಅತ್ಯಂತ ಸೂಕ್ತ ವಸ್ತುಗಳಾಗಿದ್ದು ಅನಿವಾರ್ಯ ಸಂದರ್ಭಗಳಲ್ಲಿ ಬಟ್ಟೆಗಳು ಹರಿದ ಹಳತಾಗುವಲ್ಲಿ ಅದರಲ್ಲಿರುವ ಚಿನ್ನ, ಬೆಳ್ಳಿ ದಾರಗಳು ಮತ್ತು ಮಣಿ, ಮುತ್ತು, ರತ್ನಗಳನ್ನು ಹೊರತೆಗೆದು ಮಾರಿಕೊಳ್ಳುವ, ಪುನಃ ಬಳಸುವ ಅವಕಾಶಗಳಿರುವುದರಿಂದ ಇವು ಉಳಿತಾಯದ ಅಪದ್ಧನದ ಮಾಧ್ಯಮಗಳೂ ಆಗಿವೆ.

"ಸೂಜಿ ಹಾಗೂ ವಿವಿಧ ವರ್ಣದ ದಾರಗಳಿಂದ ಬಟ್ಟೆಯ ಮೇಲೆ ತಮ್ಮ ಭಾವವನ್ನು ಮೂಡಿಸುವ ಚಿತ್ರವಿನ್ಯಾಸವೇ ಕಸೂತಿಕಲೆ. ಇದು ಬಹಳ ಪ್ರಾಚೀನವಾದ ಕಲೆ. ಶುಭ್ರವಾದ ಬಟ್ಟೆಯ ಮೇಲೆ ಬಣ್ಣ ಬಣ್ಣದ ದಾರಗಳಿಂದ ಹಾಕಿದ ಕಸೂತಿ ವಿನ್ಯಾಸ ತುಂಬಾ ಕಲಾತ್ಮಕವಾಗಿರುತ್ತದೆ. ಹೂವು, ಗಿಡ, ಬಳ್ಳಿ, ಪ್ರಾಣಿ, ಪಕ್ಷಿ ಮೊದಲಾದ ಪ್ರಕೃತಿಯಲ್ಲಿನ ಚಿತ್ರಗಳು ಕಸೂತಿಕಲೆಗೆ ಸ್ಫೂರ್ತಿಯ ಸೆಲೆಯಾಗಿ ಪರಿಣಮಿಸಿವೆ.

ಕಸೂತಿಯು ಒಂದು ಮನಮೋಹಕ ಕಲೆ. ರಂಗುರಂಗಿನ ದಾರಗಳಿಂದ ಬಣ್ಣ ಬಣ್ಣದ ತುಂಡುಬಟ್ಟೆಗಳನ್ನು, ಗಾಜಿನ ತುಂಡುಗಳನ್ನು ಪ್ರಿಯವಾದ ಸಣ್ಣ, ಸಣ್ಣ ವಸ್ತುಗಳನ್ನು ಬಟ್ಟೆಗಳ ಮೇಲೆ ದಾರದಿಂದ ಬಂಧಿಸಿ ಚಿತ್ತಾರವಾಗುವಂತೆ ಮಾಡುವ ಕಲೆಯೇ ಕಸೂತಿ. ಉತ್ತರ ಭಾರತದ ಗರಾಸಿಯಾ, ಸೋಧಾ, ಜಾಟ್ಸ್, ರೆಹಸಾಸ್, ಧಾನೇತಾಜಾಟ್ಸ್ ಜನರು ಮತ್ತು ಗುಜರಾತ್, ರಾಜಸ್ಥಾನ ಮಹಿಳೆಯರು ತಮ್ಮ ಬಟ್ಟೆಗಳ ಮೇಲೆ ಹಾಕಿಕೊಳ್ಳುವ ಕಸೂತಿಯು ಪ್ರಸಿದ್ಧವಾಗಿದೆ."[೫] ಹೀಗೆ ರಾಜಸ್ಥಾನ ಮೂಲದವರಾದ ಲಂಬಾಣಿ ಮಹಿಳೆಯರೂ ಸಹ ತಮ್ಮ ಬಟ್ಟೆಗಳ ಮೇಲೆ ವಿವಿಧ ಮಾದರಿಯ ಕಸೂತಿಯನ್ನು ಹಾಕುತ್ತಾರೆ.

ಕಸೂತಿಕಲೆಯು ಕ್ರಿ.ಶ. ೧೭ನೆಯ ಶತಮಾನದಲ್ಲಿಯೇ ಇತ್ತೆಂದು ಕವಯಿತ್ರಿಯಾಗಿದ್ದ ಸಂಚಿ ಹೊನ್ನಮ್ಮ ತನ್ನ ಕಾವ್ಯದಲ್ಲಿ ಈ ಕಲೆಯ ಬಗೆಗೆ ಅಷ್ಟೇ ಅಲ್ಲದೆ ಒಟ್ಟು ೬೪ ಕಲೆಗಳನ್ನು ಬಲ್ಲ ಮಹಿಳೆಯರು ಇದ್ದರೆಂದು ಹೇಳುತ್ತಾಳೆ. ಇದು ಕೇವಲ ಒಂದು ಕಾಲದ ಮಹಿಳೆಯರಿಗೆ ಮಾತ್ರ ಮೀಸಲಾಗಿರದೆ ನಯವಾದ ಬಟ್ಟೆಗಳ ಮೇಲೆ ತಮ್ಮ ಕಲಾಕೌಶಲ್ಯಗಳನ್ನು ಪ್ರದರ್ಶಿಸುವ ಪ್ರತಿಯೊಂದು ನಾಡಿನ ಮತ್ತು ದೇಶದ ಸ್ತ್ರೀಯರಿಗೂ ಅನ್ವಯಿಸುತ್ತದೆ. ವಿಶೇಷವಾಗಿ ಲಂಬಾಣಿ ಸಮುದಾಯದ ಮಹಿಳೆಯರು ಈ ಕಲೆಯನ್ನು ಕರಗತ ಮಾಡಿಕೊಂಡಿದ್ದಾರೆ. ಅವಳು ತನ್ನ ಮನೆಯ ಮಕ್ಕಳ ಬಟ್ಟೆ, ತನ್ನ ಲಂಗ, ಕುಪ್ಪಸಗಳ ಹಾಗೂ ಮೇಲ್ಹುಸುಕಿನ ಮೇಲೆ ಈ ಕಸೂತಿಯನ್ನು ಬಿಡಿಸುತ್ತಿದ್ದಳು.

---

೫. ಮಹಾದೇವಿ ಬಾಯಿ, ೨೦೦೨, **ಲಂಬಾಣಿ ಸಂಸ್ಕೃತಿ ಕೆಲವು ಅಧ್ಯಯನಗಳು**, ಕೀರ್ತಿ ಪ್ರಕಾಶನ, ಕೋಳಿವಾಳ್ಯ, ಪು.ಸಂ. ೪೭.

ಕಸೂತಿ ಎಂದರೆ ಸೂಜಿ ಹಾಗೂ ವಿವಿಧ ಬಣ್ಣದ ದಾರಗಳಿಂದ ಬಟ್ಟೆಗಳ ಮೇಲೆ ಅಥವಾ ತಮ್ಮ ಉಡುಪುಗಳ ಮೇಲೆ ಬಿಡಿಸಿದ ಚಿತ್ತಾರದ ವಿನ್ಯಾಸ ಇದೊಂದು ಆಕರ್ಷಕ ಕಲೆಯಾಗಿದ್ದು, ಶುಭ್ರವಾದ ಬಟ್ಟೆಯ ಮೇಲೆ ವಿವಿಧ ರೀತಿಯ ಬಣ್ಣದ ದಾರಗಳಿಂದ ಗಿಡ, ಬಳ್ಳಿ, ಹೂ, ಪ್ರಾಣಿ, ಪಕ್ಷಿಗಳ ಚಿತ್ರಗಳನ್ನು ಬಿಡಿಸಲಾಗುತ್ತಿತ್ತು. ವೇಷಭೂಷಣಗಳು ಒಂದು ಸಮಾಜದ ಜನರ ಸೌಂದರ್ಯಪ್ರಜ್ಞೆ, ಕಲಾಭಿರುಚಿ, ಸಾಂಸ್ಕೃತಿಕ ಪ್ರಗತಿಯನ್ನು ಸೂಚಿಸುತ್ತದೆ. ಜತೆಗೆ ಅದು ತತ್ಕಾಲದ ಆರ್ಥಿಕ ಸ್ಥಿತಿಗತಿಗಳನ್ನು ಭೌತಿಕ ಜೀವನದ ಮೇಲಿನ ಬಾಹ್ಯ-ಆಂತರಿಕ ಪ್ರಭಾವ ಪರಿವರ್ತನೆಗಳನ್ನು ತಿಳಿಸುತ್ತದೆ.

"ಆರಂಭದಲ್ಲಿ ಪ್ರಕೃತಿಯ ಅಡಚಣೆಗಳಿಂದ ರಕ್ಷಿಸಿಕೊಳ್ಳುವ ಉದ್ದೇಶದಿಂದ ಮಾನವ ಉಡುಪನ್ನು ಧರಿಸಿ ಕಾಲಾನಂತರದಲ್ಲಿ ನಾಗರಿಕತೆಯ ವಿಕಾಸದೊಂದಿಗೆ ಉಡುಪು ಶೀಲಾಶ್ಲೀಲತೆಯ ಸಭ್ಯತೆಯ ಮುಖವನ್ನು ಪಡೆದುಕೊಂಡಿತು. ಸೌಂದರ್ಯವರ್ಧನೆಯ ಹಾಗೂ ಪ್ರತಿಷ್ಠೆಯ ಕುರುಹಾಗಿ ಕಾಲದಿಂದ ಕಾಲಕ್ಕೆ ಭಾರತದಲ್ಲಿ ಅದು ಸಾವಧಾನಗತಿಯಲ್ಲಿಯೇ ವಿಸ್ತೃತಗೊಂಡಿತು, ಅಲ್ಲದೇ ವೈವಿಧ್ಯ ಹೊಂದಿತು. ಸೌಂದರ್ಯವರ್ಧನೆಯ, ಅನ್ಯಲಿಂಗಾಕರ್ಷಣೆಯ ಪ್ರಧಾನ ಉದ್ದೇಶದಿಂದ ಬಳಕೆಗೊಂಡ ಅಲಂಕಾರ ಸಾಮಗ್ರಿಗಳು ವೇಷಕ್ಕಿಂತಲೂ ತೀವ್ರಗತಿಯಲ್ಲಿ ವೈವಿಧ್ಯತೆ ಸಾಧಿಸಿದವು. ಈ ವೇಷಭೂಷಣಗಳು ಭಾರತೀಯರ ಧಾರ್ಮಿಕ ಹಾಗೂ ಭೌತಿಕ ಜೀವನದ ಅವಿಭಾಜ್ಯ ಅಂಗವೆನಿಸಿದವು."[೬] ಭಾರತದ ಸಾಂಸ್ಕೃತಿಕ ಬೆಳವಣಿಗೆಗೆ ವೇಷಭೂಷಣಗಳ ಕೊಡುಗೆ ಅಪಾರ. ಸುಂದರವಾದ, ಕಲಾತ್ಮಕವಾದ ವೇಷಭೂಷಣಗಳಿಂದ ದೇಹದ ಚೆಲುವು ಹೆಚ್ಚುತ್ತದೆಂಬ ಸಂಗತಿಯನ್ನು ಭಾರತೀಯರು ಬಹು ಹಿಂದೆಯೇ ಕಂಡುಕೊಂಡಿದ್ದರು. ಮನೋಹರವಾದ ಉಡುಪನ್ನು ಧರಿಸಿದವನಿಗೆ ಸಮಾಜದಲ್ಲಿ ವಿಶೇಷ ಮನ್ನಣೆ ಪುರಸ್ಕಾರಗಳಿದ್ದವು. ವ್ಯಕ್ತಿಯೊಬ್ಬನ ಐಶ್ವರ್ಯ, ಅಂತಸ್ತು, ಅಭಿರುಚಿ, ಸೌಂದರ್ಯಪ್ರಜ್ಞೆಗಳನ್ನು ಆತನ ವೇಷಭೂಷಣಗಳಿಂದ ಗುರುತಿಸಲಾಗುತ್ತಿತ್ತು. ಕಾಡಿನೊಳಗೆ ಪ್ರಾಣಿಯಂತೆಯೇ ಇದ್ದ ಆದಿಮಾನವನದು ಬೇಟೆಯ ಬದುಕು. ಗವಿ ಗಹ್ವರ ವಾಸಿಯಾದವನು, ಅತೀವ ಚಳಿಗೆ ಸೊಪ್ಪು ಸದೆ ಹೊದ್ದವನು ಕಾಲಾನಂತರ ಬೇಟೆಯಾಡಿದ ಪ್ರಾಣಿಯ ಚರ್ಮವನ್ನೇ ಬಳಸಿರಬಹುದು. ವಸ್ತ್ರ ನೇಯ್ಗೆ ಮೂಲದಿಂದ ರೂಪಿತವಾದುದು. ಕ್ರಮೇಣ ಒಂದೆಡೆ ನೆಲೆ ನಿಲ್ಲತೊಡಗಿದ ಮಾನವ ಬಳ್ಳಿ ಗರಿಗಳಿಂದ ಚಾಪೆಯಂತೆ ಹೆಣೆಯುವುದನ್ನು ಕಂಡುಕೊಂಡನು. ಅದಾಗಲೆ ರೂಪಿತವಾದುದು ಬಟ್ಟೆಯ ಆದಿರೂಪ. ನಾವು ಇಂದಿಗೂ ಬಳಸುವ ಚಾಪೆಯ

---

೬. ಡಾ. ಉಷಾ ಘಾಟಕ್, ೨೦೦೫, **ವೇಷಭೂಷಣ ಪ್ರಸಾಧನ**, ಹೈಪಾಜೆ ಪ್ರಕಾಶನ, ಮೈಸೂರು, ಪು.ಸಂ. ೧೧.

ಪ್ರಾಚೀನತೆ ಅಷ್ಟು ಹಿಂದಕ್ಕೆ ಸರಿಯುತ್ತದೆ. ಇಂದಿಗೂ ಈಚಲು ಜೊಂಡು ಹುಲ್ಲುಗಳ ಚಾಪೆಯನ್ನು ಸಾಮಾನ್ಯವಾಗಿ ಬಳಸುವುದಿದೆ. ಈಗಲೂ ಪ್ರಪಂಚದಲ್ಲಿ ಬಟ್ಟೆ ಧರಿಸದ ಹಲವು ಬುಡಕಟ್ಟು ಜನಾಂಗಗಳು ಇವೆ. ಅಂಡಮಾನ್‌ನ ಕೆಲವು ಬುಡಕಟ್ಟಿನ ಹಿರಿಯರು ತಮ್ಮ ಹಿಂದಿನವರು ಸೊಂಟಕ್ಕೆ ತೇಗದೆಲೆ ಕಟ್ಟಿಕೊಳ್ಳುತ್ತಿದ್ದ ಬಗ್ಗೆ ಹೇಳುತ್ತಾರೆ.

ಗವಿಯಿಂದ ಗವಿಗೆ ಅಲೆಯುವ ಅಲೆಮಾರಿ ಜೀವನ ಬಿಟ್ಟು ಒಂದೆಡೆ ನೆಲೆ ನಿಂತಾಗ ನೆರಳಿಗೆ ಇರುವುದಕ್ಕೆ ಅನುಕೂಲವಾಗಿ ಹುಲ್ಲು, ಗರಿ, ನಾರು, ಬೇರು, ಮರ, ಬಿದಿರು ಬಳಸಿ ತಡಿಕೆಗಳ ಹೆಣೆದು ಮಾಡಿದ ಬಾಗಿಲು ಮಾಡಿಕೊಂಡು ಬದುಕಿದ ಬುಡಕಟ್ಟುಗಳು ಇಂದಿಗೂ ಸಾಕಷ್ಟು ಇವೆ. ಹೀಗೆಯೇ ನಾರು ಬೇರುಗಳ ಉಪಯೋಗ ತಿಳಿದುಕೊಂಡು ಹೆಣೆಯುವುದನ್ನು ಕಂಡುಕೊಂಡನು, ಹಗ್ಗ ಹೊಸೆಯುವುದನ್ನು ಅರಿತುಕೊಂಡನು. ಭಾರತದ ಸಿಂಧೂ ನಾಗರಿಕತೆಯ ಸ್ಥಳಗಳಾದ ಹರಪ್ಪ ಮತ್ತು ಮೊಹೆಂಜೋದಾರೊಗಳ ಉತ್ಖನನದಲ್ಲಿ ದಾರ ಹುರಿ ಮಾಡಿಕೊಳ್ಳುವ ತಕಲಿಗಳು ದೊರೆತಿರುವುದು ಬಟ್ಟೆ ತಯಾರಿಕೆ ಆಗಿನ ಜನರಿಗೆ ಗೊತ್ತಿತ್ತೆಂಬುದಕ್ಕೆ ಆಧಾರಗಳಾಗಿವೆ.

ವೇದಗಳ ಕಾಲದಲ್ಲಿಯೂ ಕುಶ ಅಥವಾ ದರ್ಭೆ, ಸೆಣಬುಗಳ ಉಲ್ಲೇಖಗಳು, ನಾರುಗಿಡಗಳಿಂದ ನೇಯ್ದ ಬಟ್ಟೆಗಳು ಉಪಯೋಗದಲ್ಲಿದ್ದ ಬಗ್ಗೆ ತಿಳಿಯುತ್ತದೆ. ಭಾರತದ ವಸ್ತ್ರದ ವೈವಿಧ್ಯತೆಗೆ ಮುಸ್ಲಿಂರ ಕೊಡುಗೆ ಅಪಾರವಾದುದು. ಪರ್ಷಿಯಾ ಮೂಲದಿಂದ ಬಂದ ಇವರು ತಮ್ಮ ಶೈಲಿಯನ್ನು ದೇಶೀಯ ಶೈಲಿಯೊಂದಿಗೆ ಬೆರೆಸಿದರು. ಇಂದಿಗೂ ಪರ್ಷಿಯಾದ ರತ್ನಗಂಬಳಿಗಳು ಪ್ರಪಂಚದಲ್ಲಿ ಹೆಸರುವಾಸಿಯಾಗಿದೆ. ಇಪ್ಪತ್ತನೇ ಶತಮಾನದವರೆಗೆ ಪ್ರಾದೇಶಿಕತೆ ಹಾಗೂ ಸಾಮಾಜಿಕ ವರ್ಗಗಳ ಕುರುಹುಗಳಾಗಿ ಸಂಸ್ಕೃತಿಯನ್ನು ಮೆರೆಯುವ ಮುಖ್ಯ ಸಾಧನವಾಗಿದ್ದ ಉಡುಪು ಇಂದು ವೈಯಕ್ತಿಕತೆಯ ಹಾಗೂ ಕಲೆಯ ಸಂಕೇತವಾಗಿ ಮಾರ್ಪಾಡಾಗಿರುವುದಕ್ಕೆ ಮುಖ್ಯಕಾರಣ ನಮ್ಮ ಕಣ್ಣು ಹಾಗೂ ಮನಸ್ಸುಗಳು ಪೋಷಾಕುಗಳನ್ನು ಆಧರಿಸಿಯೇ ಅದರ ಹಿಂದಿರುವ ವ್ಯಕ್ತಿತ್ವವನ್ನು ಗುರುತಿಸಲು ಯತ್ನಿಸುವುದೇ ಆಗಿದೆ. ಹಾಗೆ ನೋಡಿದರೆ ಅಂದು "The dress that proclims the man" ಎಂದು ಹೇಳಿದ ಶೇಕ್ಸ್‌ಪಿಯರನ ಮಾತು ಇಂದಿಗೂ ನಿಜವಾಗಿದೆ.[೭]

ಆದಿಮ ಜನಾಂಗದಿಂದ ಮೊದಲುಗೊಂಡು ಅತ್ಯಾಧುನಿಕ ನಾಗರಿಕನವರೆಗೂ ಉಡುಗೆಗಳಲ್ಲಿ ವೈವಿಧ್ಯತೆಗಳಿವೆ. ಜನರ ಆಚಾರ ವಿಚಾರಗಳಂತೆಯೇ ಅವರ ಉಡುಗೆಗಳು ಭಿನ್ನವಾದುವುಗಳಾಗಿವೆ. ಸಾಮಾನ್ಯವಾಗಿ ಜನಪದ ಸಮುದಾಯಗಳಲ್ಲಿ ಉಡುಗೆಗಳು

---

೭ ಕರೀಗೌಡ ಬೀಚನಹಳ್ಳಿ (ಸಂ), ೨೦೦೦, **ಕರಕುಶಲ ಕಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೬೭.

ಮನುಷ್ಯನು ವಾಸಿಸುವ ನೆಲದ ಹವಾಗುಣಕ್ಕೆ ಅನುಗುಣವಾಗಿ ಮತ್ತು ಪರಂಪರಾಗತವಾದ ರೀತಿ-ರಿವಾಜುಗಳಿಗೆ ತಕ್ಕುದಾಗಿರುತ್ತದೆ. ಶೀತವಲಯದಲ್ಲಿ ವಾಸಿಸುವವರು ದೇಹದ ಎಲ್ಲಾ ಭಾಗಗಳಿಗೂ ಉಡುಗೆಗಳನ್ನು ಧರಿಸಿದರೆ ಉಷ್ಣ ವಲಯದಲ್ಲಿ ವಾಸಿಸುವವರು ಅವಶ್ಯಕ ಭಾಗಗಳಿಗೆ ಮಾತ್ರವೇ ಧರಿಸುತ್ತಾರೆ. ತಲೆ, ಎದೆ, ಸೊಂಟ, ಕೈಕಾಲುಗಳ ಉಡುಗೆಗಳು ಭೌಗೋಳಿಕ ಪರಿಸ್ಥಿತಿಯ ಮೇಲೆ ನಿರ್ಧರಿತವಾಗುತ್ತವೆ. ಆದರೆ ಕೇವಲ ಭೌಗೋಳಿಕ ಕಾರಣವೊಂದೇ ಅಲ್ಲದೆ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಕಾರಣಗಳೂ ಸಹ ಉಡುಗೆಗಳನ್ನು ನಿರ್ಧರಿಸುವಲ್ಲಿ ಪಾತ್ರ ವಹಿಸುತ್ತವೆ.[೮]

ಜಗತ್ತಿನ ಸಂಪ್ರದಾಯಬದ್ಧ ಸಮಾಜಗಳಲ್ಲಿ ಭಾರತ ಮಾತ್ರ ಉಡುಗೆಯ ವಿಚಾರವನ್ನು ಮೂಲ ಪರಂಪರೆಯಾಗಿ ಸಂಪ್ರದಾಯದ ರೀತಿಯಲ್ಲಿ ಉಳಿಸಿಕೊಂಡು ಬಂದಿದೆ. ಉಡುಪಿನ ವಿಚಾರದಲ್ಲಿ ಅನೇಕ ಸಾಂಪ್ರದಾಯಿಕ ರಾಷ್ಟ್ರಗಳಲ್ಲಿ ಬದಲಾವಣೆಯಾದಷ್ಟು ಉಡುಪಿನ ಆಕರ್ಷಣೆಯು ಒಂದಾಗಿರಬಹುದು. "ಭಾರತದಲ್ಲಿ ಪುರುಷರ ಉಡುಗೆಯಲ್ಲಿ ಬದಲಾವಣೆಯನ್ನು ಕಂಡಷ್ಟು ಪ್ರಮಾಣದಲ್ಲಿ ಸ್ತ್ರೀಯರ ಉಡುಪು ಬದಲಾವಣೆ ಕಂಡಿಲ್ಲ. ನಮ್ಮ ದೇಶದ ಬಹುತೇಕ ರಾಜ್ಯಗಳಲ್ಲಿ ವಿಶೇಷ ದಿನಗಳಲ್ಲಿ, ಸಭೆ, ಸಮಾರಂಭಗಳಲ್ಲಿ ಮತ್ತು ಧಾರ್ಮಿಕ ವಿಧಿಗಳಲ್ಲಿ ಸ್ತ್ರೀಯರು ಸಾಂಪ್ರದಾಯಿಕ ಉಡುಪನ್ನಷ್ಟೇ ಧರಿಸುತ್ತಾರೆ."[೯] ಆದರೆ ಇತ್ತೀಚೆಗೆ ಆಧುನಿಕತೆಯ ಪ್ರಭಾವದಿಂದ ಉಡುಪಿನಲ್ಲಿ ಹಲವು ಮಾದರಿಯನ್ನು ಪುರುಷ ಮಹಿಳೆಯರಲ್ಲಿ ಕಾಣಲು ಸಾಧ್ಯ.

"ವಸ್ತ್ರಕಲೆಯ ಒಂದು ಕಲಾತ್ಮಕ ಅಂಗ ಕಸೂತಿ. ಕರ್ನಾಟಕದಲ್ಲಿ ಕಸೂತಿ ಎಂದು ಕರೆಯಿಸಿಕೊಳ್ಳುವ ಈ ಕಲೆಗೆ ಪಂಜಾಬ್‌ದಲ್ಲಿ 'ಪುಲ್ಕಾರಿ', ಗುಜರಾತಿನಲ್ಲಿ 'ಕಡಿ', ರಾಜಸ್ಥಾನದಲ್ಲಿ 'ಪಿಚವಾಯಿ', ಬಂಗಾಲದಲ್ಲಿ 'ಕಾಂಥೆ', ಬಿಹಾರದಲ್ಲಿ 'ಕಸಿದಾ', ಮಣಿಪುರದಲ್ಲಿ 'ಪಾನ್ಯೆಕ', ಹಿಮಾಚಲ ಪ್ರದೇಶದಲ್ಲಿ 'ವಂಬಾ', ಸಿಂಧ್ ಪ್ರಾಂತದಲ್ಲಿ 'ಕಚ್', ಲಖನೌದಲ್ಲಿ 'ಚಿಕನ್ ಕಾರಿ', ಮಹಾರಾಷ್ಟ್ರದಲ್ಲಿ 'ಕಶೀದಾ', ಪರ್ಷಿಯನ್ ಮತ್ತು ಹಿಂದಿಯಲ್ಲಿ 'ಕಶೀದಹ' ಎಂದು ಪ್ರಾದೇಶಿಕವಾಗಿ ಇದಕ್ಕೆ ಬೇರೆ ಹೆಸರುಗಳಿವೆ."[೧೦] ಈ ಜಾಗತಿಕ ಪ್ರಭಾವದ ಅಡಿಯಲ್ಲಿ ಪ್ರಾಚೀನ ಕಸೂತಿ ಕಲೆಗಳು ಹೊಸ ಸೃಜನಶೀಲವಾದ ವಿನ್ಯಾಸವನ್ನು ಪಡೆಯುತ್ತಿವೆ. ಲಂಬಾಣಿ ಕಸೂತಿಯು ಇದಕ್ಕೆ ಹೊರತಾಗಿಲ್ಲ.

---

೮. ಕರೀಗೌಡ ಬೀಚನಹಳ್ಳಿ (ಸಂ), ೨೦೦೦, **ಕರಕುಶಲ ಕಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೯೨,

೯. ಕರೀಗೌಡ ಬೀಚನಹಳ್ಳಿ (ಸಂ), ೨೦೦೦, **ಕರಕುಶಲ ಕಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೫೯.

೧೦. ಕರೀಗೌಡ ಬೀಚನಹಳ್ಳಿ (ಸಂ), ೨೦೦೦, **ಕರಕುಶಲ ಕಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ. ೧೦೦.

ಕಸೂತಿ ಕಲೆ ವಿಶೇಷವಾಗಿ ಲಂಬಾಣಿ ಮಹಿಳೆಯರಿಗೆ ಬಹೂಪಯೋಗಿ ಸಾಧನವಾಗಿ ಬೆಳೆದುಬಂದಿದೆ. ವಿರಾಮದ ವೇಳೆಯನ್ನು ಸದುಪಯೋಗಪಡಿಸಿಕೊಳ್ಳುವ ಹಿನ್ನೆಲೆಯಲ್ಲಿ ಬಟ್ಟೆಯ ಮೇಲೆ ಕಲಾತ್ಮಕತೆಯನ್ನು ಸೃಷ್ಟಿಸುವರು. ಜೊತೆಗೆ ಈ ಕಲೆಯನ್ನು ಕಂಡವರ ಸಂತೋಷ ಹೇಳತೀರದು. ಹೀಗೆ ಹಲವು ಪ್ರಯೋಜನದ ಜೊತೆಗೆ ಈ ಕಲೆಯಲ್ಲಿ ಪ್ರಾವೀಣ್ಯತೆಯನ್ನು ಗಳಿಸಿಕೊಳ್ಳುವುದು ಲಂಬಾಣಿ ಮಹಿಳೆಯರ ಉದ್ದೇಶವಾಗಿತ್ತು.

ಕಸೂತಿ ಕಲೆಯಲ್ಲಿ, ಕಸೂತಿ ರಚನಾವಿಧಾನದಲ್ಲಿ ಎರಡು ವಿಧಾನಗಳಿವೆ. ಮೊದಲನೆಯದು ಹೊಲಿಗೆಯ ಕಸೂತಿ, ಎರಡನೆಯದು ಹೆಣಿಗೆ ಕಸೂತಿ. ಲಂಬಾಣಿಗರಲ್ಲಿ ಹೆಣಿಗೆ ಕಸೂತಿ ಹೆಚ್ಚು ಪ್ರಚಲಿತದಲ್ಲಿದೆ. ಹೆಣಿಗೆ ಕಸೂತಿಯಲ್ಲಿ ದಾರವನ್ನು ತೆಗೆದುಕೊಂಡು ಸೂಜಿಯಿಂದ ದಾರವನ್ನೇ ಹೆಣೆಯುತ್ತಾ ಕಸೂತಿ ಚಿತ್ರವಿನ್ಯಾಸ ಬಿಡಿಸುತ್ತಾರೆ. ಇದಕ್ಕೆ ಇವರದೇ ಆದ ಶೈಲಿ ಇದೆ. ಪರಿಕರಗಳಿವೆ, ಅದನ್ನು ವಿವರಿಸಬಹುದು. ಮೊದಲು ನೂಲನ್ನು ಅಥವಾ ದಾರವನ್ನು ಎಡಗೈ ತೋರುಬೆರಳಿಗೆ ಸುತ್ತಿಕೊಂಡು ಅಲ್ಲಿಂದ ದಾರವನ್ನು ಎಡಗೈ ಹೆಬ್ಬೆರಳು ಮತ್ತು ನಡುವಿನ ಬೆರಳುಗಳ ಮೂಲಕ ಸ್ವಲ್ಪ ಸ್ವಲ್ಪ ದಾರವನ್ನು ಬಿಡುತ್ತಾ ಬಲಗೈಯಲ್ಲಿ ಹಿಡಿದು ಸೂಜಿಯಿಂದ ಹೆಣೆಯುತ್ತ ಹೋಗುತ್ತಾರೆ. ವಿಶೇಷವೆಂದರೆ ಇದರಲ್ಲಿಯೂ ಬೇರೆ ಬೇರೆ ಸಂಖ್ಯೆಗಳು ಇರುತ್ತವೆ. ಹೀಗಾಗಿ ಕಸೂತಿ ಅಪ್ಪಟ ಮಹಿಳಾ ಪ್ರಧಾನವಾದ ಕಲೆಯಾಗಿದೆ.

ಈ ಕಲೆಯಲ್ಲಿ ಮುಖ್ಯವಾಗಿ ಸೂಜಿ, ಕತ್ತರಿ, ವಿವಿಧ ವರ್ಣದ ದಾರಗಳು, ಪೆನ್ಸಿಲ್ ಇತ್ಯಾದಿ ಪರಿಕರಗಳು ಬಳಕೆಯಾಗುತ್ತವೆ. ಲಂಬಾಣಿ ಮಹಿಳೆಯರು ಬಣ್ಣಬಣ್ಣದ ತುಂಡು ತುಕಡಿಗಳನ್ನು ಸೇರಿಸಿ ಮಾಡಿದ ಬಟ್ಟೆಗಳನ್ನು ಧರಿಸುತ್ತಾರೆ. ಅವರು ಧರಿಸುವ ವಸ್ತ್ರಗಳಲ್ಲಿ ಕೆಂಪು ಬಣ್ಣಕ್ಕೆ ಹೆಚ್ಚಿನ ಪ್ರಾಶಸ್ತ್ಯವಿರುವುದು ಕಂಡುಬರುತ್ತವೆ. ಈ ಬಣ್ಣ ಬಣ್ಣದ ತುಂಡು ತುಕಡಿಗಳ ಮೇಲೆ ಗಾಜಿನ ಬಿಲ್ಲೆಗಳನ್ನು ಸೇರಿಸಿ ಅವುಗಳ ಮೇಲೆ ವಿವಿಧ ಬಣ್ಣಗಳ ದಾರದಿಂದ ಕಸೂತಿಯನ್ನು ಬಿಡಿಸಿ ವಸ್ತ್ರಗಳನ್ನು ಅವರೇ ತಯಾರಿಸುತ್ತಾರೆ. ಈ ಗಾಜಿನ ಬಿಲ್ಲೆಗಳಲ್ಲಿ ಪ್ರತಿಬಿಂಬ ಮಾಡುವುದರಿಂದ ಕಾಡಿನಲ್ಲಿ ಇರುವ ಕ್ರೂರ ಪ್ರಾಣಿಗಳ ಪರಿಚಯವು ಅವರಿಗೆ ಉಂಟಾಗುತ್ತಿತ್ತು. ಅಲ್ಲದೆ ಕಾಡು ಪ್ರಾಣಿಗಳು ಗಾಜಿನ ಬಿಲ್ಲೆಗಳಲ್ಲಿ ಮೂಡಿದ ತಮ್ಮ ಪ್ರತಿಬಿಂಬಕ್ಕೆ ಹೆದರಿ ಓಡಿ ಹೋಗುತ್ತಿದ್ದವು ಎನ್ನುವ ನಂಬಿಕೆ ಅವರದು. ಲಂಬಾಣಿಗರು ವಸ್ತ್ರಗಳನ್ನು ತಯಾರಿಸುವುದು ಬಹುಕಷ್ಟದ ಕೆಲಸವಾಗಿದ್ದು ಒಂದೊಂದು ವಸ್ತ್ರ ತಯಾರಿಸಲು ಸುಮಾರು ೪ರಿಂದ ೫ ತಿಂಗಳು ಬೇಕಾಗುತ್ತದೆ ಎಂದು ಸಂಡೂರು ಕುಶಲ ಕಲಾಕೇಂದ್ರದ ಲಕ್ಷ್ಮೀಬಾಯಿ ಹೇಳುತ್ತಾರೆ. ಹಾಗಾಗಿ ಇದು ತಾಳ್ಮೆಯ ಕಾರ್ಯವೆನ್ನಬಹುದು. ಇವತ್ತು ಜನರಲ್ಲಿ ಈ ತಾಳ್ಮೆ ಇಲ್ಲ. ತಾತ್ಕಾಲಿಕ

ತೃಪ್ತಿಗಾಗಿ ಇಷ್ಟಪಡುತ್ತಾರೆ. ಇದು ಆಧುನಿಕತೆ, ಜಾಗತೀಕರಣ ನಮ್ಮ ಮುಂದೆ ಇಟ್ಟಿರುವ ಬಿಕ್ಕಟ್ಟು ಸರಿ.

ಭಾರತೀಯ ಬುಡಕಟ್ಟುಗಳಲ್ಲಿ ಹೆಚ್ಚು ಆಕರ್ಷಣೀಯವಾದ ಉಡುಗೆ ತೊಡುಗೆಗಳನ್ನು ಲಂಬಾಣಿ ಮಹಿಳೆಯರು ಧರಿಸುತ್ತಾರೆ. ಇವರ ಉಡುಗೆ ಮೇಲ್ನೋಟಕ್ಕೆ ತುಂಡು ತುಕಡಿಯಂತೆ ಕಂಡುಬಂದರೂ ಅವುಗಳನ್ನು ತಯಾರಿಸುವ ಕಲೆ ಅತ್ಯಂತ ಸೂಕ್ಷ್ಮವಾದುದಾಗಿದೆ. ಸುದೀರ್ಘವಾದ ಮಹತ್ವದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಈ ಸಮುದಾಯದ ವೇಷಭೂಷಣಗಳು ಇವರ ವೃತ್ತಿ, ಮನೋಧರ್ಮ, ಪರಿಸರದ ಪ್ರಭಾವ ಹಾಗೂ ಕಲ್ಪನಾ ಸಾಮರ್ಥ್ಯದ ಹಿನ್ನೆಲೆಯಲ್ಲಿ ಇವರ ಉಡುಪುಗಳು ರೂಪುಗೊಂಡಿವೆ.

ಇವರ ವೇಷಭೂಷಣಗಳಲ್ಲಿ ಪುರುಷರಿಗಿಂತ ಸ್ತ್ರೀಯರ ವೇಷಭೂಷಣಗಳು ವಿಶಿಷ್ಟವಾಗಿವೆ. ಇವರ ಉಡುಪಿನಂತೆ ಇವರನ್ನು ಲಂಬಾಣಿಗರೆಂದು ಗುರುತಿಸಲು ಸಾಧ್ಯವಾಗಿದೆ. ಈ ಸಮುದಾಯದ ಮಹಿಳೆಯರು ಧರಿಸುವ ಉಡುಪುಗಳು ಕೆಲವರಿಗೆ ಆಕರ್ಷಕವಾಗಿ ಕಂಡರೆ ಮತ್ತೆ ಕೆಲವರಿಗೆ ಅಸಹ್ಯವಾಗಿ ಕಾಣುವ ಮನೋಧರ್ಮವನ್ನು ಉಂಟುಮಾಡಿದೆ. ನೋಡುಗರಿಗೆ ಸ್ವಲ್ಪ ವಿಚಿತ್ರವಾದ ವೇಷಭೂಷಣ ಎನಿಸಿದರೂ ಅವು ಒಂದೊಂದು ರೀತಿಯ ಹಿನ್ನೆಲೆಯನ್ನು ಪಡೆದುಕೊಂಡಿವೆ. ಇವರ ಉಡುಪುಗಳು ಪೂರ್ಣಪ್ರಮಾಣದ ಮೈಯನ್ನು ಮುಚ್ಚುವ ಉಡುಪುಗಳಾಗಿಲ್ಲ. ಹೀಗಾಗಿ ಅವು ಅಪೂರ್ಣವಾಗಿವೆ. ಈ ಸಮುದಾಯದ ಮಹಿಳೆಯರ ಉಡುಪನ್ನು ಕುರಿತಾಗಿ ಪ್ರದೇಶದಿಂದ ಪ್ರದೇಶಕ್ಕೆ ಹಲವು ರೀತಿಯ ಐತಿಹ್ಯಗಳಿವೆ ಅವುಗಳನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.



**ಐತಿಹ್ಯ : ಒಂದು**

"ಯುದ್ಧ ವೀರರಾದ ಲಂಬಾಣಿಗರ ಪೂರ್ವಜರಲ್ಲೊಬ್ಬನು ಯುದ್ಧಕ್ಕೆಂದು ಧಾವಿಸಿ ಹೋಗಿ ಹೋರಾಟದಲ್ಲಿ ಇದ್ದಕ್ಕಿದ್ದಂತೆ ಅಕಾಲಮೃತ್ಯುವನ್ನು ಹೊಂದಿದ ವಾರ್ತೆಯನ್ನು ತಿಳಿದು, ಅವನ ವೀರಶಿರೋಮಣಿ ಸತಿಯು, ಅದೇ ತಾನೆ ತನ್ನ ಪೋಷಾಕುಗಳನ್ನು ಕಲಾತ್ಮಕವಾಗಿ ಕಸೂತಿ ಕೆಲಸದಿಂದ ಸಿದ್ಧಪಡಿಸಿಕೊಳ್ಳುತ್ತಿದ್ದಳು. ಅವನ ಸತಿ ಅವನ ಜೊತೆ ಚಿತೆ ಏರಿದ ಸಂಗತಿ ಅತ್ಯಂತ ರೋಮಾಂಚಕವಾಗಿದೆ. ಅನಾಗರಿಕತೆಯಿಂದ ನಾಗರಿಕತೆಯ ಹೊಸ್ತಿಲಲ್ಲಿ ಕಾಲಿಡುತ್ತಿರುವ ಆ ಸಮಯದಲ್ಲಿ ಈ ವೀರಶಿರೋಮಣಿಯು ಬಿಟ್ಟು ಹೋದ ಅಪೂರ್ಣಬಟ್ಟೆಗಳನ್ನು ಮುಂದಿನ ಪೀಳಿಗೆ ಅವುಗಳನ್ನು ಕೈಗೆತ್ತಿಕೊಂಡು ಪೂರ್ಣ ಬಟ್ಟೆಗಳೆಂದೇ ಧರಿಸಿಕೊಂಡರು. ಕಾರಣ ಇಂದು ಲಂಬಾಣಿಗಳು ಧರಿಸುವ ಲಂಗ(ಫೇಟಿಯಾ) ಹಾಗೂ ಕುಪ್ಪಸ(ಕಾಂಚಳಿ) ಇವೆರಡೂ ಅಪೂರ್ಣ ಬಟ್ಟೆಗಳಾಗಿರಲು

ಸಾಧ್ಯವಿದೆ. ಏಕೆಂದರೆ ಲಂಗದ ಎಡಗಡೆಗೆ ಇಂದಿಗೂ ಕಾಲುಭಾಗ ಹೊಲಿಯದೆ ಹಾಗೆಯೇ ಬಿಟ್ಟಿರುತ್ತಾರೆ. ಕುಪ್ಪಸವು ಕೂಡ ಕೇವಲ ಎದೆ ಮುಚ್ಚುವ, ಬೆನ್ನು ಸಂಪೂರ್ಣವಾಗಿ ಕಾಣುವ ಅಪೂರ್ಣ ಪೋಷಾಕು ಇನ್ನು ಛಾಂಟಿಯಾ ಎನ್ನುವ ಮೇಲ್ಮುಸುಕು ಪ್ರಾಯಶಃ ಮೊದ ಮೊದಲು ಇದ್ದಂತಿಲ್ಲ. ಮೇಲಿನ ಎರಡೂ ಅಪೂರ್ಣ ಪೋಷಾಕುಗಳನ್ನು ಮುಚ್ಚಿಕೊಳ್ಳಲು ಆನಂತರದಲ್ಲಿ ಮಾಡಿಕೊಂಡಿರೆಂದು ಕಾಣಿಸುತ್ತದೆ."[೧೧] ಈ ಐತಿಹ್ಯದಿಂದ ಲಂಬಾಣಿಗರಲ್ಲಿ ಸತಿಹೋಗುವ ಪದ್ಧತಿ ಕಾಣಲು ಸಾಧ್ಯತೆ ಇದೆ.

**ಐತಿಹ್ಯ : ಎರಡು**

"ಸಮುದಾಯದ ಮೂಲಪುರುಷನಾದ 'ದಾದಾಮೋಲ' ಮತ್ತು 'ರಾಧಿ' ದಾದಿಯರು ದೊಂಬರಾಟವನ್ನಾಡುತ್ತ ರಾಜಸ್ಥಾನ, ಗುಜರಾತ್ ಮತ್ತು ಮಹಾರಾಷ್ಟ್ರಗಳಲ್ಲಿ ಸಂಚರಿಸುತ್ತಿರುತ್ತಾರೆ. ಹೀಗೆ ಸಂಚರಿಸುತ್ತಾ ಮಹಾರಾಷ್ಟ್ರದ ಒಂದು ಸ್ಮಶಾನದ ಮಾರ್ಗವಾಗಿ ಬಂದಾಗ ಅಲ್ಲಿ ಆಕಸ್ಮಿಕ ಮರಣಕ್ಕೆ ತುತ್ತಾಗಿದ್ದ ಮಾರವಾಡಿ ಹುಡುಗಿಯನ್ನು ಹೂಳಿರುತ್ತಾರೆ. ರಾಧಿ ದಾದಿಯು ತನ್ನಲ್ಲಿರುವ ಅಪಾರ ಮಂತ್ರಶಕ್ತಿಯಿಂದ ಮರಣಿಸಿದ್ದ ಹುಡುಗಿಯನ್ನು ಬದುಕಿಸುತ್ತಾಳೆ. ಬೆತ್ತಲಿದ್ದ ಆ ಹುಡುಗಿಗೆ ತನ್ನ ಮೇಲುಹೊದಿಕೆಯನ್ನು ಹರಿದು ಎರಡು ತುಂಡು ಮಾಡಿ ಒಂದು ತುಂಡು ಸೊಂಟಕ್ಕೆ ಮತ್ತೊಂದು ತುಂಡು ಎದೆಗೆ ಕಟ್ಟಿಕೊಳ್ಳಲು ಕೊಡುತ್ತಾಳೆ. ಆ ಎರಡು ತುಂಡು ಬಟ್ಟೆಗಳನ್ನೇ ಲಂಬಾಣಿ ಸ್ತ್ರೀಯರು ತಮ್ಮ ಮೂಲ ಬಟ್ಟೆಗಳೆಂದು ಭಾವಿಸುತ್ತಾರೆ.[೧೨] ಈ ಐತಿಹ್ಯ ಲಂಬಾಣಿ ಸ್ತ್ರೀಯರು ಧರಿಸುವ ಪರಿಮಿತ ಉಡುಪುಗಳ ಬಗೆಗೆ ನಿರ್ದಿಷ್ಟ ಮಾಹಿತಿಯನ್ನು ಒದಗಿಸುತ್ತದೆ. ಲಂಬಾಣಿ ಮಹಿಳೆಯರ ಉಡುಪುಗಳು ಗುಜರಾತ್, ರಾಜಸ್ಥಾನ, ಮಹಾರಾಷ್ಟ್ರದ ಮಹಿಳೆಯರ ಉಡುಪುಗಳಿಗಿಂತ ಭಿನ್ನವಾದ ಕಸೂತಿ ಕಲೆಗಳಿಂದ ಕೂಡಿರುತ್ತದೆ.

**ಐತಿಹ್ಯ : ಮೂರು**

"ಬಹಳ ಹಿಂದೆ ಒಂದು ಪಟ್ಟಣದ ಗಡಿಯಲ್ಲಿ ಲಂಬಾಣಿಗರು ಬಿಡಾರ ಹೂಡಿದ್ದರು. ಪ್ರತಿದಿನ ಲಂಬಾಣಿ ಮಹಿಳೆಯರು ನೀರಿಗಾಗಿ ಹೊಳೆಯಲ್ಲಿ ಗೇಣಿ ಅಥವಾ ಒರತೆ ತೆಗೆದು, ಮಡಿಕೆಯ ಬಾಯಿಗೆ ಮೇಲೊಂದರಂತೆ ಏಳು ಬಟ್ಟೆಗಳನ್ನಿಟ್ಟು ಗೇಣಿಯಲ್ಲಿನ ನೀರು ಸೋಸಿ ಮನೆಗೆ ತರುತ್ತಿದ್ದರು. ಹೀಗಿರುವಾಗ ಒಮ್ಮೆ ಆ ಪಟ್ಟಣದ ಬಾಚ್ಯ(ರಾಜ) ಇವರು ನೀರು ತರುವುದನ್ನು ನೋಡಿ ವಿಸ್ಮಿತವಾಗಿ 'ಏನಾದರಾಗಲಿ ಈ ಸಮುದಾಯದ

---

೧೧. ಡಾ. ಪಿ.ಕೆ. ಖಂಡೋಬಾ, ೧೯೯೧, **ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ,** ದಿ. ತೇಜಸಿಂಗ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ, ಪು.ಸಂ. ೬೧.

೧೨. ಡಾ. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ,** ಪು.ಸಂ. ೨೧೭.

ಒಬ್ಬ ಹೆಣ್ಣು ಮಗಳನ್ನು ಮದುವೆಯಾಗಬೇಕೆಂದು' ಮನಸ್ಸಿನಲ್ಲಿಯೇ ನಿರ್ಧರಿಸಿ ಲಂಬಾಣಿ ನಾಯಕನನ್ನು ಕರೆದು 'ನಿಮ್ಮ ಕುಲದ ಒಬ್ಬ ಹೆಣ್ಣು ಮಗಳನ್ನು ನನಗೆ ಮದುವೆ ಮಾಡಿಕೊಡಿ' ಎಂದು ಕೇಳಿಕೊಂಡನು. ಲಂಬಾಣಿ ನಾಯಕ ಯಾವುದೇ ಕಾರಣಕ್ಕೂ ಪರಜಾತಿಯವರಿಗೆ ಹೆಣ್ಣು ಕೊಡುವುದಿಲ್ಲವೆಂದು ನೇರವಾಗಿ ಹೇಳಲಾಗಿ, ರಾಜ ಅವರನ್ನು ವಿಧವಿಧವಾಗಿ ಹಿಂಸೆಗೆ ಗುರಿಪಡಿಸಿದನು. ಹಿಂಸೆ ತಾಳಲಾರದೆ ಕೊನೆಗೆ ಲಂಬಾಣಿ ನಾಯಕ ಕೆಲವು ಷರತ್ತುಗಳೊಂದಿಗೆ ಹೆಣ್ಣು ಕೊಡಲು ಒಪ್ಪಿದನು. ಮದುವೆಗೆ ಮುಂಚೆ ಒಂದು ದಿನ ರಾಜನಿಗೆ ವಿಷದ ಸಾರಾಯಿ ಕುಡಿಸಿ ಆತ ಮೂರ್ಛೆ ಹೋಗುತ್ತಿದ್ದಂತೆ ತಮ್ಮವರನ್ನೆಲ್ಲ ಕರೆದುಕೊಂಡು ಆ ಪಟ್ಟಣಬಿಟ್ಟು ಕಾಡಿನ ಹಾದಿ ಹಿಡಿದನು. ಕಾಡಿನಲ್ಲಿ ಎಲ್ಲರೂ ಒಂದೆಡೆ ಕುಳಿತು ಸಮಾಲೋಚಿಸಿ ಒಂದು ತೀರ್ಮಾನಕ್ಕೆ ಬಂದರು.

ಅದರಂತೆ ಬಾಚ್ಯ(ರಾಜ)ನೇನಾದರೂ ಬದುಕಿದರೆ ನಮ್ಮ ಕುಲದವರನ್ನು ಎಲ್ಲಿದ್ದರೂ ಬಿಡಲಾರ ಆದ್ದರಿಂದ ನಾವು ನಮ್ಮ ಉಡುಗೆತೊಡುಗೆಗಳನ್ನು ಸಂಪೂರ್ಣವಾಗಿ ಬದಲಾಯಿಸಿಕೊಳ್ಳೋಣ. ಬದಲಾವಣೆಯಿಂದ ರಾಜನಿಗೆ ನಾವೇ ಲಂಬಾಣಿಗರೆಂಬುದು ತಿಳಿಯುವುದಿಲ್ಲವೆಂದು ತೀರ್ಮಾನಿಸಿದರು. ಆ ಕ್ಷಣದಿಂದಲೇ ಲಂಬಾಣಿ ಮಹಿಳೆಯರು ತಮ್ಮ ಜೊತೆಯಲ್ಲಿದ್ದ ತುಂಡುತುಕಡಿ ಬಟ್ಟೆಗಳನ್ನೇ ಸೇರಿಸಿ ಒಂದು ಗಿಡದ ಹೂವು(ಸೊಕಣ್ಯಾರ್ ಫೂಲ್)ನ್ನು ನೋಡಿ ಅದರಂತೆ ಪುಂದಾ(ಗೊಂಡೆ) ಕಟ್ಟಿ ಬಟ್ಟೆ ಹೊಲಿಯಲು ಪ್ರಾರಂಭಿಸಿ, ಅವರು ಬೇರೊಂದು ಪಟ್ಟಣ ಸೇರುವಷ್ಟರಲ್ಲಿ ಅವರ ವೇಷಭೂಷಣ ಸಂಪೂರ್ಣ ಬೇರೆಯಾಗಿ ವಿಶೇಷವಾದ ಉಡುಪಾಯಿತು. ಅನಂತರದಲ್ಲಿ ಅದನ್ನೇ ಮುಂದುವರೆಸಿಕೊಂಡು ಬಂದುದರ ಬಗೆಗಿನ ಮಾಹಿತಿ ಅವರ ಮೌಖಿಕ ಸಾಹಿತ್ಯದಲ್ಲಿ ದೊರೆಯುತ್ತದೆ. ಹೀಗೆ ಉಡುಗೆ ಬದಲಾಯಿಸಿಕೊಂಡ ಲಂಬಾಣಿಗರ ಮೊದಲಿನ ವೇಷಭೂಷಣ ಬೇರೆಯೇ ಇದ್ದಿರಬೇಕು. ಅವರು ಯಾವ ಉಡುಪಿನಿಂದ ಲಂಬಾಣಿಗರೆಂದು ಗುರುತಿಸಲ್ಪಡಬಾರದೆಂಬ ಇಚ್ಛೆಪಟ್ಟರೋ ಇಂದು ಅದೇ ಉಡುಪಿನಿಂದ ಅವರು ಲಂಬಾಣಿಗರೆಂದು ಗುರುತಿಸಲ್ಪಡುತ್ತಿರುವುದು ವಿಪರ್ಯಾಸವೇ ಸರಿ.[೧೩]

ಈ ಮೇಲಿನ ಮೂರು ಐತಿಹ್ಯಗಳನ್ನು ಗಮನಿಸಿದಾಗ ಈ ಸಮುದಾಯದ ಮಹಿಳೆಯರ ಉಡುಪಿನ ಬಗೆಗೆ ಮೌಖಿಕ ಮಾಹಿತಿ ದೊರೆಯುತ್ತದೆ. ಇನ್ನೂ ಹಲವು ಭಾಗಗಳಲ್ಲಿ ಈ ಉಡುಪಿನ ಕುರಿತಾಗಿ ಅಲ್ಲಲ್ಲಿ ಭಿನ್ನ ಭಿನ್ನ ರೀತಿಯ ವದಂತಿಗಳು ಗೋಚರಿಸುತ್ತವೆ. ಈ ಮಹಿಳೆಯರು ಕೆಂಪು ಬಣ್ಣದ ಬಟ್ಟೆಗೆ ಪ್ರಾಧಾನ್ಯತೆಯನ್ನು ನೀಡಿದರು. ಅದರೊಳಗೆ

---

೧೩. ಮಹಾದೇವಿ ಬಾಯಿ, ೨೦೦೨, **ಲಂಬಾಣಿ ಸಂಸ್ಕೃತಿ ಕೆಲವು ಅಧ್ಯಯನಗಳು,** ಕೀರ್ತಿ ಪ್ರಕಾಶನ, ಕೋಳಿಪಾಳ್ಯ, ಪು.ಸಂ. ೪೯–೫೦.

ಅಲ್ಲಲ್ಲಿ ನೀಲಿ, ಹಸಿರು, ಹಳದಿ, ಬಿಳಿ ಮುಂತಾದ ಬಟ್ಟೆಗಳ ಜೋಡಣೆಯಿಂದ ಸುಂದರವಾಗಿ ಕಾಣುವಂತೆ ರಚಿಸುವರು. ಈ ಉಡುಪುಗಳು ಆಕರ್ಷಕವಾಗಿ ಕಾಣುವಂತೆ ಕನ್ನಡಿಗಳನ್ನು ಬಳಸಿ ಕಸೂತಿಯನ್ನು ಮಾಡುತ್ತಾರೆ. ಜೊತೆಗೆ ತಾಮ್ರ, ಹಿತ್ತಾಳೆ, ಜರ್ಮನ್ ಸಿಲ್ವರ್ ಅಲ್ಯೂಮಿನಿಯಂಗಳಂತಹ ವಿವಿಧ ಲೋಹದ ಆಭರಣಗಳನ್ನು ತಮ್ಮ ಉಡುಪಿನ ಮೇಲೆ ಬಳಸುತ್ತಾರೆ. ಚಿಕ್ಕ ಚಿಕ್ಕ ಕನ್ನಡಿಗಳನ್ನು ಸೇರಿಸಿ ಸೂಕ್ಷ್ಮಾತಿಸೂಕ್ಷ್ಮವಾದ ಕಸೂತಿಯನ್ನು ಕೈಯಿಂದಲೇ ಹಾಕುತ್ತಾರೆ. ತಮ್ಮ ಪ್ರತಿಯೊಂದು ಪೋಷಾಕುಗಳಿಗೆ ಕನ್ನಡಿಗಳನ್ನು ಜೋಡಿಸಿಕೊಂಡು ಸುಂದರವಾಗಿ ಕಾಣುವಂತೆ ರಚಿಸುತ್ತಿದ್ದರು.

ಲಂಬಾಣಿ ಮಹಿಳೆಯರ ಉಡುಪುಗಳು ಒಂದು ದೃಷ್ಟಿಯಿಂದ ಆಲಂಕಾರಿಕವಾಗಿದ್ದರೂ ಇನ್ನೊಂದು ದೃಷ್ಟಿಯಿಂದ ಅವರ ಸೃಜನಶೀಲತೆಯನ್ನು ತೋರಿಸುತ್ತದೆ. ತಮ್ಮ ಉಡುಪುಗಳ ಮೇಲೆ ಕವಡೆ, ನಾಣ್ಯಗಳು, ಗೊಂಡೆ, ಗೆಜ್ಜೆ, ರಾಂಗ್‌ಪಾರಿ ಇತ್ಯಾದಿಗಳನ್ನು ಸೇರಿಸಿ ಹೊಲಿದಿರುತ್ತಾರೆ. ಈ ರೀತಿಯ ಒಡವೆಗಳನ್ನು ಬಟ್ಟೆಗಳ ಮೇಲೆ ಹೊಲಿಯಲು ಕೆಲವು ಕಾರಣಗಳನ್ನು ವಿದ್ವಾಂಸರು ಗುರುತಿಸುತ್ತಾರೆ. ಪುರಾತನ ಕಾಲದಲ್ಲಿ ಈ ಸಮುದಾಯದ ಪೂರ್ವಜರು ಅಲೆಮಾರಿಗಳಾಗಿದ್ದು ವ್ಯಾಪಾರಕ್ಕಾಗಿ ಕಾಡುಮೇಡುಗಳಲ್ಲಿ ದನಕರುಗಳ ಮೇಲೆ ತಮ್ಮ ವ್ಯಾಪಾರದ ಪದಾರ್ಥಗಳನ್ನು ಹೇರಿಕೊಂಡು ಹೋಗುವುದು ಸಹಜವಾಗಿ ಬೇಕಾಗಿತ್ತು. ಆಗ ಕಾಡುಪ್ರಾಣಿಗಳಿಂದ ಕೆಲವು ವಿಷಜಂತುಗಳಿಂದ ರಕ್ಷಿಸಿಕೊಳ್ಳಲು ಈ ಬಗೆಯ ಉಡುಪು ಇವರಿಗೆ ಅನಿವಾರ್ಯವಾಗಿತ್ತು. ಇವರು ಕಾಡುಗಳಲ್ಲಿ ನಡೆದುಬರುತ್ತಿದ್ದರೆ. ತಮ್ಮ ಉಡುಪಿನಲ್ಲಿ ಸೇರಿರುವ ಕವಡೆ, ನಾಣ್ಯ, ಗೊಂಡೆ, ಗೆಜ್ಜೆಗಳ ಶಬ್ದದಿಂದ ಈ ದುಷ್ಟ ಜಂತು ಮತ್ತು ಪ್ರಾಣಿಗಳು ದೂರ ಸರಿಯುತ್ತಿದ್ದವು. ಈ ಒಂದು ಮನೋಭಾವದ ಅಡಿಯಲ್ಲಿ ಬಟ್ಟೆಗಳಿಗೆ ಇವುಗಳೆಲ್ಲವನ್ನು ಜೋಡಿಸುತ್ತಿದ್ದರು. ಆ ಒಂದು ಪರಂಪರೆ ಇವತ್ತಿಗೂ ರೂಢಿಗತವಾಗಿ ಬಂದಿರುವುದನ್ನು ಕಾಣುತ್ತೇವೆ.

ಈ ಸಮುದಾಯದ ಮಹಿಳೆಯರು ಮುಖ್ಯವಾಗಿ ಶ್ರಮಜೀವಿಗಳು. ವ್ಯರ್ಥವಾಗಿ ಕಾಲ ಕಳೆಯದೇ ಈ ಕಸೂತಿ ಕಲೆಯನ್ನು ತಮ್ಮ ದಿನನಿತ್ಯದ ಕೆಲಸವನ್ನಾಗಿ ಮೈಗೂಡಿಸಿಕೊಂಡಿರುವರು. ಲಂಬಾಣಿ ಮಹಿಳೆಯರಿಗೆ ಸೂಜಿಯು ಒಡನಾಡಿಯಾಗಿದೆ. ಏಕೆಂದರೆ ಹುಡುಗಿ ವಯಸ್ಸಿಗೆ ಬಂದಾಗಿನಿಂದ ಹಿಡಿದು ಕೊನೆಯ ಹಂತದ ಕಣ್ಣು ಕಾಣುವರೆಗೂ ಈ ಕಸೂತಿಕಲೆಯಲ್ಲಿ ತೊಡಗಿರುತ್ತಾಳೆ. ಆದರೆ ಇಂದಿನ ಸರಳವಾದ ಆಧುನಿಕ ಜಗತ್ತಿಗೆ ಈ ಮಹಿಳೆ ಮೈಯೊಡ್ಡಿರುವುದರಿಂದ ಇಂತಹ ಮಹತ್ವದ ಕಸೂತಿ ಕಲೆಯು ಇಂದು ಬೇರೊಂದು ರೂಪದಲ್ಲಿ ಮೂಡಿಬರುತ್ತಿದೆ. ಹಿಂದೆ ಗೋವುಗಳನ್ನು ಮೇಯಿಸುವಾಗ, ಕುರಿ ಮೇಕೆಗಳನ್ನು ಕಾಯುವಾಗ ಮನೆಯಲ್ಲಿ ಬಿಡುವಿನ ವೇಳೆಯಲ್ಲಿ ಮತ್ತು ಅನೇಕ ಸಂದರ್ಭದಲ್ಲಿ ವ್ಯರ್ಥವಾಗಿ ಕಾಲಕಳೆಯದೆ ಕಸೂತಿಕಲೆಯಲ್ಲಿ

ತೊಡಗಿರುತ್ತಿದ್ದಳು. ಊಟದ ಬುತ್ತಿಯನ್ನು ಮರೆತರೂ ಈ ಸಮುದಾಯದ ಮಹಿಳೆ ಕಾಮೇರ ಪೋಡೆಯಾ(ಕಸೂತಿ ಚೀಲ)ವನ್ನು ಮರೆಯುತ್ತಿರಲಿಲ್ಲ.

"ಕಾಂಕೇಮ ದಂಡಿಯಾ ಪಾಟಲಿಮ ಬಾಟಿ
ಕಟೇರಿಯಾ ಮೋಡತಿ ಜಾವ
ಪಾಟಲಿಮ ಬಾಟಿ ಮಾತೇಪರ ಝೂರಿ
ವಡಘೂಲ ಭರತಿ ಜಾವ"[೧೪]

ಬಗಲಲ್ಲಿ ಕಟ್ಟಿಗೆ ಉಡಿಯಲ್ಲಿ ಬುತ್ತಿಗಂಟು
ಕಸೂತಿ ಹೆಣೆಯುತ್ತ ಹೊರಟಳು
ಉಡಿಯಲ್ಲಿ ಬುತ್ತಿಗಂಟು ತಲೆ ಮೇಲೆ ಕಳಸಿ
ಅಂದವಾದ ಕಸೂತಿ ಹೆಣೆಯುತ್ತ ಹೋಗುತ್ತಿದ್ದಳು

ಕನ್ನಡಿ, ಕವಡೆ, ತಗಡಿನ ಗುಂಡಿ, ಸತು, ಕಾಸಿನ ಬಿಲ್ಲೆ, ಹಿತ್ತಾಳೆ ಮೊದಲಾದ ವಿವಿಧ ಆಕಾರದ ಲೋಹಗಳನ್ನು ತಮ್ಮ ಉಡುಪಿನ ಮೇಲೆ ಕಸೂತಿ ಕೆಲಸ ಮಾಡಿ ಧರಿಸುತ್ತಿದ್ದರು. ವಿವಿಧ ಬಣ್ಣದ ಬಟ್ಟೆಗಳ ಮೇಲೆ ಸೂಕ್ಷ್ಮವಾಗಿ ಬಣ್ಣ ಬಣ್ಣದ ದಾರಗಳಿಂದ ತಮ್ಮದೇ ಆದ ವಿವಿಧ ವಿನ್ಯಾಸಗಳನ್ನು ರೂಪಿಸಿಕೊಳ್ಳುತ್ತಾರೆ. ಈ ಬಟ್ಟೆಯನ್ನು ತಯಾರಿಸಲು ಸಿಂಪಿಗನ ಕೆಲಸ ತುಸುವಾಗಿದ್ದರೆ ಈ ಮಹಿಳೆಯೇ ಸಂಪೂರ್ಣವಾಗಿ ಉಡುಪನ್ನು ತಯಾರಿಸುತ್ತಾಳೆ.

ಆಧುನಿಕತೆಯ ಪ್ರಭಾವಕ್ಕೆ ಒಳಗಾದ ಈ ಸಮುದಾಯವು ತಮ್ಮ ಪಾರಂಪರಿಕವಾಗಿ ಬಂದ ವೇಷಭೂಷಣವನ್ನು ಉಡುವಲ್ಲಿ ಹಿಂದೇಟು ಹಾಕುತ್ತಿದೆ. ಹೀಗಾಗಿ ಮುಂದೊಂದು ದಿನ ಸಂಪೂರ್ಣವಾಗಿ ಈ ಉಡುಪುಗಳು ಅಳಿದು ಹೋಗಿ ಕೇವಲ ಪ್ರದರ್ಶನಾತ್ಮಕವಾಗಿ ಉಳಿಯಬಹುದಾಗಿದೆ. ಹೀಗಾಗಿ ಈ ಸಮುದಾಯದ ಉಡುಗೆಯ ಕುರಿತಾಗಿ ಪ್ರತಿಯೊಂದರ ಬಗೆಗೆ ಈ ಕೆಳಗಿನಂತೆ ಚರ್ಚಿಸಲಾಗಿದೆ. ಭಾರತದ ಹಲವು ಭಾಗಗಳಲ್ಲಿ ಉಡುಗೆ ತೊಡುಗೆಯಲ್ಲಿ ವೈವಿಧ್ಯತೆಯನ್ನು ನಾವು ಕಾಣುತ್ತೇವೆ. ಅದರಲ್ಲೂ ಧರಿಸುವ ಬಗೆಯಲ್ಲೂ ವಿಭಿನ್ನತೆಯು ಗೋಚರಿಸುತ್ತದೆ. ಅದರಂತೆ ಲಂಬಾಣಿ ಮಹಿಳೆಯರು ತಾವು ಧರಿಸುವ ಬಟ್ಟೆಗಳನ್ನು ಮೂರು ರೀತಿಯಲ್ಲಿ ವಿಂಗಡಿಸಬಹುದು.

೧. ಛಾಂಟಿಯಾ(ಮೇಲ್ಮುಸುಕು)

(ತಲೆಯ ಮೇಲೆ ಹೊದ್ದುಕೊಳ್ಳುವ ದೊಡ್ಡದಾದ ವಸ್ತ್ರ).

---

೧೪. ಡಾ. ಹರಿಲಾಲ ಪವಾರ, ಡಾ. ಪಂಡಿತ ಕೆ. ರಾಠೋಡ, ೧೯೯೭, **ಲಂಬಾಣಿಗರ ಹೋಳಿ ಹಬ್ಬ**, ಶಶಿಪ್ರಕಾಶನ, ಧಾರವಾಡ, ಪು.ಸಂ. ೪೦.

೨. ಕಾಂಚಳಿ(ಕುಪ್ಪಸ)

(ಕುತ್ತಿಗೆಯಿಂದ ಸೊಂಟದವರೆಗೆ ದೇಹದ ಮುಂಭಾಗವನ್ನು ಆವರಿಸುವ ಉಡುಗೆ)

೩. ಫೇಟಿಯಾ(ಲಂಗ)

ಸೊಂಟದಿಂದ ಕಾಲಿನವರೆಗಿನ ಭಾಗಗಳನ್ನು ಮರೆಮಾಚಲು ಧರಿಸುವ ಮತ್ತೊಂದು ಮಹತ್ವದ ಉಡುಗೆ.

**೧. ಛಾಂಟಿಯಾ(ಮೇಲ್ಮುಸುಕು)**

ಈ ಉಡುಗೆ ಲಂಬಾಣಿ ಮಹಿಳೆಯರಿಗೆ ಅತ್ಯಂತ ಮಹತ್ವದ ಉಡುಗೆಯಾಗಿದೆ. ಇದನ್ನು ತಲೆಯ ಮೇಲೆ ಹೊದ್ದುಕೊಂಡರೆ ಗೌರವದ ಸಂಕೇತ. ಇದನ್ನು ಹೊದ್ದುಕೊಳ್ಳುವುದರಿಂದ ಹಿರಿಯರಿಗೆ ಗೌರವ ಕೊಟ್ಟಂತಾಗುತ್ತದೆ. ಇದು ಸಾಮಾನ್ಯವಾಗಿ ಕೆಂಪು ಬಟ್ಟೆಯದ್ದಾಗಿದ್ದು ಇಲ್ಲವೇ ಹಸಿರು ಹಾಗೂ ಕಂದು ಬಣ್ಣದ ಬಟ್ಟೆಗಳಿಂದಲೂ ಇದನ್ನು ತಯಾರಿಸಲು ಬಳಸುವರು. ಸುಮಾರು ಆರು ಅಡಿ ಉದ್ದ, ನಾಲ್ಕು ಅಡಿ ಅಗಲ ಇರುತ್ತದೆ. ಐದು ಮೊಳ ಉದ್ದ, ಮೂರು ಮೊಳ ಅಗಲ ಇದರ ಒಂದು ಅಂಚನ್ನು ಸೊಂಟದ ಎಡ ಭಾಗದಲ್ಲಿ ಲಂಗಕ್ಕೆ ಸಿಕ್ಕಿಸಿ, ಉಳಿದೆಲ್ಲ ಭಾಗವನ್ನು ಎಡಗಡೆಯಿಂದ ತಲೆಯ ಮೇಲೆ ಹಾಯಿಸಿ, ಬಲಭುಜದ ಮೇಲಿಂದ ನೇತಾಡುವಂತೆ ಹೊದೆಯುತ್ತಾರೆ. ಸುಮಾರು ಆರು ಅಡಿ ಅಗಲ ಮತ್ತು ಮೂರು ಅಡಿ ಉದ್ದ ಕೆಂಪು ಬಟ್ಟೆಯನ್ನು ವಿಶೇಷವಾಗಿ ಕಸೂತಿ ಕೆಲಸ ಮಾಡಿ ಅದಕ್ಕೆ ರಾಂಗ್‌ಪಾರಿ, ಸೀಸದ ಆಭರಣಗಳು, ಬೆಳ್ಳಿಯ ನಾಣ್ಯಗಳ ಸಾಲುಗಳು, ಕನ್ನಡಿಯ ಚೂರುಗಳು, ಕವಡೆಗಳು ಮುಂತಾದವುಗಳನ್ನು ಬಣ್ಣ ಬಣ್ಣದ ದಾರಗಳಿಂದ ಹೊಲಿದು, ಮೇಲೆ ಮುಸುಕಿಗೆ ತಲೆಯ ಮೇಲೆ ಎರಡೂ ಕಡೆ ಸಮನಾಗಿ ಬರುವಂತೆ ಹೊಲಿದಿರುತ್ತಾರೆ. ಇದಕ್ಕೆ ಘುಂಗಟೊ(ಮುಸುಕು) ಎನ್ನುತ್ತಾರೆ.

ಛಾಂಟಿಯಾದ ಬಲತುದಿಯಲ್ಲಿ ಒಂದು ಸಣ್ಣ ಕಸೂತಿ ಮಾಡಿರುವ ಚೀಲವನ್ನು ದಪ್ಪನೆಯ ಮೂಲೆಯಲ್ಲಿ ಹೊಲಿದಿರುತ್ತಾರೆ. ಇದನ್ನು “ಅಡಭೇಡಾ” ಎಂದೂ ಚೀಲವನ್ನು ಥೇವಟಿಯಾ ಎಂದು ಕರೆಯುತ್ತಾರೆ. ಈ ಅಡಭೇಡಾ ತುದಿಯನ್ನು ಬಲಬಗಲ ಕೆಳಗೆ ಹಾಯಿಸಿ ಎದೆಯ ಮೇಲಿಂದ ಎಡಭುಜದ ಮೇಲೆ ಸೆರಗು ಹಾಕಿಕೊಳ್ಳುತ್ತಾರೆ. ಇದನ್ನು ತಯಾರಿಸಲು ಮೂರು ಮೀಟರ್ ಕೆಂಪು ಬಟ್ಟೆ, ಆರು ಅಡಿ, ನಾಲ್ಕು ಅಡಿ ಅಗಲದ ಹಸಿರು ಬಟ್ಟೆ, ಅದರ ಮೇಲೆ ಕನ್ನಡಿ ಕಸೂತಿ ಮಾಡಿದ ಐದು ಚೌಕಾಕಾರದ ಒಂದೇ ಪ್ರಮಾಣದ ಹೂವುಗಳು(ಪಾಂಚಪೂಲ್) ಎರಡು ಅಡಿ ಅಳತೆಯ ಎರಡು ಪಟ್ಟಿ(ಪಾಟಾ) ಹಾಗೂ ಒಂದು ಭಾರವಾದ ದಪ್ಪನೆಯ ಘುಂಗಟೊವನ್ನು ಜೋಡಿಸುತ್ತಾರೆ.

ಘುಂಗಟೋವನ್ನು ಅತ್ಯಂತ ಕಲಾತ್ಮಕವಾಗಿ ಕನ್ನಡಿ ಹಾಕಿ ಕಸೂತಿ ಮಾಡಿರುತ್ತಾರೆ. ಜೊತೆಗೆ ಅಲ್ಲಲ್ಲಿ ಗುಂಡಿ, ಬೆಳ್ಳಿಸರ ಹಾಗೂ ಹಳೆಯ ನಾಣ್ಯದ ಬಿಲ್ಲೆಗಳನ್ನು ಸಾಲಾಗಿ ಜೋಡಿಸಿ ಭಾರವಾಗುವಂತೆ ಮಾಡಿರುತ್ತಾರೆ.

ಮೇಲ್ಮುಸುಕಿನ ಒಡಲೊಳಗೆ ಅಲಂಕಾರಕ್ಕಾಗಿ ಅಲ್ಲಲ್ಲಿ ಬಣ್ಣ ಬಣ್ಣದ ತ್ರಿಕೋನಾಕಾರದ ತುಂಡು ತುಕಡಿಗಳನ್ನು ಖಾಪಲಿ ಹಚ್ಚುತ್ತಾರೆ. "ಛೇವಟಿಯಾ ಒಂದು ನಾಣ್ಯ ಇರುತ್ತದೆ. ಈ ತೂಕದಿಂದ ಛಾಂಟಿಯಾ ಎಡಭುಜದ ಮೇಲಿನಿಂದ ಸರಿಯದಂತೆ ನಿಂತಿರುತ್ತದೆ. ಲಂಬಾಣಿ ಮಹಿಳೆಯರು ನಮಸ್ಕಾರ ಮಾಡುವಾಗ ಈ ಛೇವಟಿಯಾ ಚೇಲವನ್ನು ಕೈಯಲ್ಲಿ ಹಿಡಿದುಕೊಂಡು ನಮಸ್ಕಾರ ಮಾಡುತ್ತಾರೆ. ಛೇವಟಿಯಾ ಬಣ್ಣ ಬಣ್ಣದ ಝುಂಡಿರಪಳಿ, ಕೋಡಿರಪಳಿ ಕಸೂತಿ ಕೆಲಸದಿಂದ ಅಲಂಕೃತವಾಗಿರುತ್ತದೆ."

ಹೀಗೆ ಈ ಮಹಿಳೆಯರು ಮೇಲುವಸ್ತ್ರವಾದ ಛಾಂಟಿಯಾದ ಕೊನೆಯ ಅಂಚುಗಳನ್ನು ಪಟ್ಟೆಯಾಕಾರದಲ್ಲಿ ವಿವಿಧ ಬಣ್ಣದ ದಾರಗಳಿಂದ ಸುಂದರವಾಗಿ ಕಸೂತಿ ಹಾಕಿರುತ್ತಾರೆ. ಇವುಗಳ ಮೇಲೆ ಪತಡಿ(ಗುಂಡಿ), ಕೋಡಿ(ಕವಡೆ), ಕಾಚು(ಗಾಜು), ಫುಂದಾ(ಉಣ್ಣೆಯ ಗುಚ್ಛ) ಇವುಗಳಿಂದ ಮೇಲು ಹೊದಿಕೆಯನ್ನು ಆಕರ್ಷಕವಾಗಿ ತಯಾರು ಮಾಡುತ್ತಾರೆ. ಈ ಮೇಲು ಹೊದಿಕೆಯ ಮೇಲೆ ಐದು ಚೌಕಾಕಾರ ಒಂದೇ ಪ್ರಮಾಣದ ಹಳದಿ ಬಣ್ಣದ ಪಿಡಿ, ಪಾಂಚಪೂಲ್ ಅದರ ಮಧ್ಯೆ ಚುಂಗಾ, ಗಾಜಿನ ಬಿಲ್ಲೆಗಳು ವಿವಿಧ ದಾರಗಳಿಂದ ಹಾಕಿದ ಮಾಕಿ, ರೇಲೊ, ಟೇಕಾ, ಮಂದ್ರಿ, ಗೋಟೆ, ಗಾಜಿನ ಬಿಲ್ಲೆಗಳಿಂದ ಜೋಡಿಸಿ ಈ ಮೇಲು ಹೊದಿಕೆಯನ್ನು ತಯಾರಿಸುವರು. ಇದನ್ನು ತಯಾರಿಸಲು ಸುಮಾರು ದಿನಗಳು ಬೇಕಾಗುವುದು.

**ಪಾಂಚಫೂಲ(ಐದು ಹೂಗಳು)**

ಛಾಂಟಿಯಾದ ಕೆಳಭಾಗ ಹಾಗೂ ಮೇಲ್ಭಾಗದ ಎರಡೂ ಬದಿಗೆ ಎರಡು ಅಂಗುಲ ಅಳತೆಯ ಕರಿ ಮತ್ತು ಕೆಂಪನೆಯ ಎರಡು ಪಟ್ಟಿಗಳಿರುತ್ತವೆ. ವಿವಿಧ ಬಗೆಯ ವಿನ್ಯಾಸದ ಕಸೂತಿ ಮೇಲ್ಭಾಗಕ್ಕೆ ಹಾಗೂ ಕೆಳಭಾಗಕ್ಕೆ ಐದು ಖಾಂಪಲಿ(ಕಸೂತಿ ಬಟ್ಟೆ) ಅದರ ಮೇಲೆ ಗೊಂಡೆ ಅಲ್ಲಲ್ಲಿ ವಿವಿಧ ವಿನ್ಯಾಸದ ಕರಿ ಮತ್ತು ಬಿಳಿ ಕಟ್ಟಾ, ಟೆಕಾ ಬದಿಗೆ ರೇಲೊ, ಕಾಚೆ(ಗಾಜು) ಹೀಗೆ ವಿವಿಧ ಬಗೆಯ ಕಸೂತಿ ಹಾಕಿರುತ್ತಾರೆ.

**ಘುಂಗಟೋ**

ಈ ಸಮುದಾಯದ ಮಹಿಳೆಯರು ಕೆಂಪು, ಹಸಿರು ಇಲ್ಲವೆ ಕಂದುಬಣ್ಣದ ಐದು ಮೊಳ ಉದ್ದ, ಮೂರು ಮೊಳ ಅಗಲದ ಬಟ್ಟೆಯನ್ನು ಮೇಲ್ಮುಸುಕಾಗಿ ಉಪಯೋಗಿಸುತ್ತಾರೆ.





ಛಾಂಟಿಯಾ (ಮೇಲ್ಮುಸುಕು)



ಪಾಂಚಫೂಲ (ಐದು ಹೂಗಳು)



ಭಾಂಟಿಯಾ (ಮೇಲ್ಹುಸುಕು) ಧರಿಸಿದ ಮಹಿಳೆ

ಈ ಮೇಲ್ಮುಸುಕಿನ ಮುಂದುಗಡೆ ಘುಂಗಟೋ ಎಂಬ ಬೆಳ್ಳಿಯ ನಾಣ್ಯಗಳನ್ನು ಸಾಲಾಗಿ ಜೋಡಿಸಿರುವರು. ಈ ಒಡವೆಯನ್ನೇ ಘುಂಗಟೋ ಎಂದು ಕರೆಯುವರು. ಈ ಘುಂಗಟೋಗೆ ಸುಮಾರು ಮೂವತ್ತೆರಡು ನಾಲ್ಕಾಣೆಗಳನ್ನು ಸಾಲಾಗಿ ಜೋಡಿಸಿ ತಯಾರಿಸುವರು. ಇದರ ಒಳಗಡೆ ಅಲ್ಲಲ್ಲಿ ಅಲಂಕಾರಕ್ಕಾಗಿ ರಾಂಗ್‌ಪಾರಿ, ಚಿಕ್ಕ ಚಿಕ್ಕ ಗೆಜ್ಜೆ ಇವುಗಳ ಮೇಲೆ ಜೋಡಿಸಿರುವರು. ತಲೆಯ ಮೇಲಿನ ಈ ಸೆರಗು ಕೆಳಗೆ ಜಾರಿ ಬಿಳಬಾರದೆಂಬ ಉದ್ದೇಶದಿಂದ ಈ ಘುಂಗಟೋ ಛಾಂಟಿಯಾ(ಮೆಲ್ಮುಸುಕು)ಕ್ಕೆ ಜೋಡಿಸಿರುವರು.

ತಲೆಯ ಮೇಲೆ ಲಂಬಾಣಿ ಮಹಿಳೆಯರು ಇದನ್ನು ಸದಾ ಹಾಕಿಕೊಳ್ಳುತ್ತಿದ್ದರು. ಆದರೆ ಈಗ ಇವುಗಳ ಬದಲಿಗೆ ತೆಳ್ಳನೆಯ ಡಾವಣಿಯ ಮೇಲೆ ಒಂದು ಗೇಣು ಅಗಲ ಹಾಗೂ ಎರಡರಿಂದ ಮೂರು ಮೊಳ ಉದ್ದದ ಬಟ್ಟೆಯ ಮೇಲೆ ಚಿಕ್ಕ ಚಿಕ್ಕ ಕನ್ನಡಿಗಳನ್ನು ಕಸೂತಿ ಮಾಡಿ, ವ್ಯವಸ್ಥಿತವಾಗಿ ಜೋಡಿಸಿರುವರು. ಹಿರಿಯರಿಗೆ ಗೌರವದ ಸೂಚಕವಾಗಿ ತಲೆಯ ಮೇಲೆ ಈ ರೀತಿಯ ಸೆರಗನ್ನು ಹಾಕಿಕೊಳ್ಳಲೇಬೇಕು. ಆದರೆ ಪ್ರಸ್ತುತ ಸಂದರ್ಭದಲ್ಲಿ ಅದು ತುಂಬ ಭಾರವಾದ ಉಡುಗೆ ಎಂದು, ಸರಳವಾಗಿರುವ ಡಾವಣಿಯನ್ನು ಹೊದ್ದುಕೊಳ್ಳುವರು. ವಿಶೇಷ ದಿನಗಳಲ್ಲಿ ಈ ಮಾದರಿಯ ಉಡುಗೆಯನ್ನು ಧರಿಸುವರು.

**ಅಡಭೇಡಾ**

ಮೇಲ್ಮುಸುಕಿನ ಬಲತುದಿಗೆ ಅಡಭೇಡಾ ಇರುತ್ತದೆ. ಇದರಲ್ಲಿ ಹತ್ತು ಕಾಜಿನ ಬಿಲ್ಲೆಗಳು ಇರುತ್ತವೆ. ಅದಕ್ಕೆ ಕಲಾತ್ಮಕವಾಗಿ ಕಸೂತಿ ಹಾಕಿರುತ್ತಾರೆ. ಖಿಲಣ, ಬಳ್ಳಿ, ಬಿಳಿಬಳ್ಳಿ ಮುಂತಾದ ವಿನ್ಯಾಸದ ಕಸೂತಿಗಳನ್ನು ಹಾಕಿರುತ್ತಾರೆ. ಹದಿನೈದರಿಂದ ಇಪ್ಪತ್ತರವರೆಗೆ ಗೊಂಡೆಗಳು, ಗೆಜ್ಜೆಸರ, ಎಂಟ್ಹತ್ತು ಕವಡೆಗಳು, ಸಣ್ಣದಂತದ ಚೂಡಿ(ಬಳೆ) ಮತ್ತು ಬಲಿಯಾ ಹಾರೆ ತಯಾರಿಸಿರುತ್ತಾರೆ. ಮೇಲ್ಮುಸುಕಿನ ಅಂಚಿನಲ್ಲಿ ಕಾಜಿನ ಬಿಲ್ಲೆಗಳು, ಖಾಂಪಲಿ(ತ್ರಿಕೋನಾಕಾರದ ಬಟ್ಟೆ) ವಿವಿಧ ಮಾದರಿಯ ಕಸೂತಿ ಹಾಕಿರುತ್ತಾರೆ.

**ಕಾಂಚಳಿ(ಕುಪ್ಪಸ)**

ಲಂಬಾಣಿ ಮಹಿಳೆಯರು ಧರಿಸುವ ಕಾಂಚಳಿ(ಕುಪ್ಪಸ)ಯು ಸಾಮಾನ್ಯವಾಗಿ ಹೊಟ್ಟೆಯಿಂದ ಎದೆಯ ಭಾಗದವರೆಗೆ ಮುಚ್ಚಿರುತ್ತದೆ. ಬೆನ್ನಿನ ಭಾಗವು ಹಾಗೆಯೇ ಇರುತ್ತದೆ. ಆ ಕುಪ್ಪಸವನ್ನು ಬೆನ್ನಿನ ಹಿಂದುಗಡೆ ಎರಡು ಲಾಡಿಗಳಿಂದ ಕಟ್ಟಿಕೊಂಡಿರುವರು. ಆ ಬೆನ್ನು ಭಾಗವನ್ನು ಮುಚ್ಚಲು ಛಾಂಟಿಯಾ(ಮೇಲ್ಮುಸುಕು)ವನ್ನು ಬಳಕೆ ಮಾಡುವರು.





ಕಾಂಚಳಿ(ಕುಪ್ಪಸ)





ಖವ್ಯಾ(ಎಡಭಾಗದ ಭುಜ ಪಟ್ಟಿ)







ಖವ್ಯಾ(ಎಡಭಾಗದ ಭುಜ ಪಟ್ಟಿ)

ಕಾಂಟ್ಲ (ಕುಪ್ಪಸದ ಎದೆಯ ಮೇಲಲಿರುವ ಪಟ್ಟಿ)





ಕಾಂಚಳಿರ (ಕುಪ್ಪಸದ ಎದೆಯ ಭಾಗದ ಮಾದರಿ)

ಪಾಂಚಫೂಲ (ಐದು ಹೂಗಳು)











ಪಾಂಚಫೂಲ (ಐದು ಹೂಗಳು)ದ ವಿವಿಧ ಮಾದರಿಗಳು

ಈ ಸಮುದಾಯದ ಮಹಿಳೆಯರು ತಮ್ಮ ಪ್ರತಿಯೊಂದು ಉಡುಗೆಗೂ ಕನ್ನಡಿಯ ಚೂರುಗಳು, ರಾಂಗ್‌ಪಾರಿ, ಕವಡೆ, ಬೆಳ್ಳಿಯ ನಾಣ್ಯಗಳು, ಚಿಕ್ಕ ಚಿಕ್ಕ ಗೆಜ್ಜೆ ಸರಗಳನ್ನು ಹೆಚ್ಚಾಗಿ ಉಡುಪಿನ ಮೇಲೆ ಅಲಂಕಾರಕ್ಕಾಗಿ ಬಳಸುವರು. ಹೀಗಾಗಿ ಲಂಬಾಣಿ ಮಹಿಳೆಯರು ಧರಿಸುವ ರವಿಕೆಯನ್ನು ಕಾಂಚಳಿ ಎಂದು ಕರೆಯುವರು. ಈ ಕಾಂಚಳಿಯು ಎರಡು ತೋಳು, ಎದೆಭಾಗ, ಹೊಟ್ಟೆಯನ್ನು ಮರೆಮಾಡಿದ್ದು ಬೆನ್ನು ಮಾತ್ರ ಕಾಣುವಂತೆ ಇರುತ್ತದೆ. ಕಾಂಚಳಿ ಎರಡು ಪಕ್ಕದ ದಾರಗಳಿಂದ ಬೆನ್ನಿಗೆ ಬಿಗಿದು ಕಟ್ಟಿರುತ್ತಾರೆ. ಬಣ್ಣ ಬಣ್ಣದ ದಾರಗಳಿಂದ ಈ ರವಿಕೆಯ ಮೇಲೆ ತ್ರಿಕೋನಾಕಾರದ ಬಿಳಿ ಮತ್ತು ಕರಿ ಬಟ್ಟೆಯ ಪಟ್ಟಿಗಳನ್ನು ಕುಪ್ಪಸದ ಮೇಲೆ ಹಚ್ಚಿ ಅವುಗಳನ್ನು ಆಕರ್ಷಕವಾಗಿ ಕಾಣುವಂತೆ ಕಸೂತಿ ಮಾಡಿರುತ್ತಾರೆ. ಈ ಕುಪ್ಪಸದ ಎಡ ತೊಳಿನ ಮೇಲೆ ನೇತಾಡುವಂತೆ ಖವ್ವ್ಯಾವಿರುತ್ತದೆ. ಇವುಗಳ ಮೇಲೆ ಪತಡಿ, ರಾಂಗ್‌ಪಾರಿ, ಕವಡೆ, ಗಾಜು ಮುಂತಾದವುಗಳನ್ನು ಹಚ್ಚಿ ವಿವಿಧ ಬಣ್ಣದ ದಾರಗಳಿಂದ ಖಿಲಣ, ಪೋಟೆ, ಜವಲ್ಯಾ, ವೆಲೆಗಳಿದ ಸುಂದರವಾಗಿ ಕಾಣುವಂತೆ ಕಸೂತಿ ಮಾಡಿರುವರು. ಈ ಕುಪ್ಪಸ(ಕಾಂಚಳಿ)ದ ಮೇಲೆ ಇರುವ ಖವ್ವ್ಯಾವು ವಿಧವೆಯರು ಧರಿಸಲಾರರು(ಇದು ಗಂಡ ಕಟ್ಟಿದ ತಾಳಿ ಇದ್ದ ಹಾಗೆ) ಈ ಬಗೆಯ ಕುಪ್ಪಸವನ್ನು ಮದುವೆಯಾದ ಹೆಂಗಸರು ಮಾತ್ರ ಧರಿಸುತ್ತಾರೆ. ಅವಿವಾಹಿತ ಯುವತಿಯರು ಇವನ್ನು ಧರಿಸುವಂತಿಲ್ಲ.

ವಿಧವೆಯರು ಕೇವಲ ಖವ್ಯಾ ಇಲ್ಲದ ಸಾಧಾರಣ ಕುಪ್ಪಸವನ್ನು ಧರಿಸುವರು. ಈ ಕಾಂಚಳಿ ಸಿದ್ಧಪಡಿಸಲು ಛಾತೀರ್ ಪಟ್ಟೆ(ಎದೆ ಅಳತೆಯ ಪಟ್ಟಿ), ಫೇಟ(ಹೊಟ್ಟೆ ಅಳತೆಯ ಪಟ್ಟಿ) ಎದೆಯ ಮೇಲೆ ಚೋಟಿಯಾ ಇರುತ್ತದೆ. ಬೆನ್ನಿನ ಎರಡೂ ಕಡೆಗೆ ಮೂರು ಅಂಗುಲದ ಅಳತೆಯ ಕಡಪಾ(ಪಟ್ಟಿ) ಬೇಕಾಗುತ್ತದೆ. ಅಲ್ಲದೆ ಎದೆಯ ಮೇಲೆ ಎರಡು ಕಡೆಗಳಲ್ಲಿ ಕಾಂಟಲಿ, ಎಡತೋಳಿನ ಮೇಲೆ ಖವ್ಯಾ, ಕುಪ್ಪಸದ ತುಂಬೆಲ್ಲ ಅಲ್ಲಲ್ಲಿ ಚಿಕ್ಕ ಚಿಕ್ಕ ಕನ್ನಡಿ, ತಗಡಿನ ಗುಂಡಿ, ಗಾಜಿನ ಬಿಲ್ಲೆಗಳು, ಉಣ್ಣೆಯಗೊಂಡೆ, ಸಣ್ಣ ಕಟೇರಿಯಾ ಹಾಗೂ ಕಲಾತ್ಮಕವಾದ ಕಸೂತಿ ಕೆಲಸದ ಅಲಂಕಾರದ ಜೊತೆಗೆ ಅದರ ಅಂಚಿನಲ್ಲಿ ಚಿಕ್ಕ ಚಿಕ್ಕ ಗೆಜ್ಜೆಸರಗಳನ್ನು ಜೋಡಿಸುತ್ತಾರೆ. ಕುಪ್ಪಸಕ್ಕೆ ವೇಲೆ, ರೇಲೊ, ಕಡಪ, ಕಲ್ಹಣಿ, ಪೋಟೆ, ಟೇಕಾ, ಕಟ್ಟಾ, ಮಾಕಿ. ಮಾಕಿ ಎಂದರೆ ಲಂಬಾಣಿಗರ ಗೋರ್‌ಬೋಲಿ ಭಾಷೆಯಲ್ಲಿ ನೊಣ ಎಂದರ್ಥ. ನೊಣದ ರೀತಿಯ ಕಸೂತಿ ವಿನ್ಯಾಸಕ್ಕೆ ಮಾಕಿ ಎನ್ನುತ್ತಾರೆ. ಹೀಗೆ ಈ ಕುಪ್ಪಸದ ಮೇಲೆ ವಿವಿಧ ಬಣ್ಣದ ದಾರಗಳಿಂದ ನಕರಾ, ಕಟ್ಟಾ ಮೊಡೆರೊ ಮುಂತಾದ ವಿವಿಧ ಬಗೆಯ ವಿನ್ಯಾಸಗಳಿಂದ ಕಸೂತಿ ಹಾಕುವರು. ಇವುಗಳಿಂದ ಕುಪ್ಪಸಕ್ಕೆ ಹೊಸ ರೀತಿಯ ನಾವೀನ್ಯತೆಯು ಕೊಡುತ್ತದೆ. ಇದೊಂದು ಅಪೂರ್ಣ

ರೀತಿಯ ಉಡುಗೆಯಾದರೂ ಅತ್ಯಂತ ಸುಂದರವಾಗಿ ಇದನ್ನು ರಚಿಸುವರು.

"ಕುಂವಾರಿ ಭೋರಿರಿ ಕಾಚೇರಿ ಕಾಚಳಿರ
ಕಾಚೇರಿ ಕಾಚಳಿರ ಉಪ್ಪರ
ಭಡತ ಮಾಛಳಿರ ಅಂಬಾಲಳಕೇ ಜಾವ
ಕಾಯಿ ಚುಂಚಿಚಾಂಚಿರ ಗೋಟಲಿರ
ಅಂಬಾಲಳ ಕೇಜಾವ"[೧೫]

"ಯುವತಿಯ ಕಾಜಿನ ಬಿಲ್ಲೆಗಳಿಂದ ಕೂಡಿರುವ ಕುಪ್ಪಸ
ಕುಪ್ಪಸದ ಮೇಲೆ ಮಿಂಚುತ್ತಿರುವ ಕಾಜಿನ ಬಿಲ್ಲೆಗಳು
ಮೀನಿನಂತೆ ಹೊಳೆಯುತ್ತಿವೆ.
ಅವಳ ಮೊಲೆ ಮಾವಿನ ಹಣ್ಣಿನಂತಿವೆ
ಸೀಪಿ ಒಗೆದ ಮಾವಿನ ಗೊರಟೆಯಂತಿವೆ"

ಹೀಗೆ ಕುಪ್ಪಸದ ಕುರಿತಾಗಿ ಈ ಮೇಲಿನಂತೆ ಹೋಳಿ ಹಾಡನ್ನು ಹಾಡುವರು.

ಇವರ ಕುಪ್ಪಸವು ಸಂಪೂರ್ಣವಾಗಿ ಮೈಮುಚ್ಚುವಂತಿಲ್ಲ. ಬೆನ್ನಿನ ಭಾಗವು ಅಪೂರ್ಣವಾಗಿರುತ್ತದೆ. ಇಲ್ಲಿ ಕೇವಲ ಲಾಡಿಗಳಿಂದ ಎರಡು ಅಂಚನ್ನು ಕಟ್ಟುವರು. "ಸಾಮಾನ್ಯವಾಗಿ ಬುಡಕಟ್ಟು ಮಹಿಳೆಯರು ಕುಪ್ಪಸಗಳನ್ನು ಧರಿಸುವುದು ತುಂಬಾ ವಿರಳ. ದೈಹಿಕವಾಗಿ ಶ್ರಮಪಡುವ ಈ ಜನರು ಬಿಗಿಯಾದ ಕುಪ್ಪಸ ಧರಿಸಿ ಶ್ರಮದ ಕೆಲಸ ಮಾಡಲು ಕಷ್ಟವಾಗುತ್ತದೆಂದು ಭಾವಿಸಿದ್ದಾರೆ. ಅಂತೆಯೇ ಬಿಸಿಲಿನ ತಾಪ ಹೆಚ್ಚಿರುವ ತಮಿಳುನಾಡಿನಲ್ಲಿ ವೃದ್ಧೆಯರು ಸೆಕೆಯಿಂದ ಪಾರಾಗಲು ಕುಪ್ಪಸಗಳನ್ನು ಧರಿಸುವುದಿಲ್ಲ ಎನ್ನುವುದನ್ನು ಇಲ್ಲಿ ಸ್ಮರಿಸಬಹುದು. ಲಂಬಾಣಿಗಳೂ ಸಹ ಇದರಿಂದ ಹೊರತಾಗಿಲ್ಲ. ಕೆಂಪು ಕಾಂಚಳಿ(ಕುಪ್ಪಸ)ಯು ಸುಂದರವಾಗಿ ಕಾಣಲೆಂದು ಅದರ ಮೇಲೆ ಸಿಲ್ಕ್ ಬಟ್ಟೆ ಜೋಡಿಸುವರು. ಅವುಗಳ ಮೇಲೆ ಪತಡಿ, ರಾಂಗ್‌ಪಾರಿ ಸೀಸದ ಆಭರಣಗಳನ್ನು ಹಚ್ಚುವರು, ಕುಪ್ಪಸದ ಎಡ-ಬಲ ದಂಡೆಯ ಕಡೆಗೆ ಚೌವ್ಲ ಪಾವ್ಲಿ ರೇಲೊ, ವೇಲೆ, ಮಾಕಿ, ಕಟ್ಟಾಮೊಡೆರೊ ಹೀಗೆ ವಿವಿಧ ರೀತಿಯ ವಿನ್ಯಾಸಗಳನ್ನು ದಾರದ ಮೂಲಕ ಕುಪ್ಪಸ(ಕಾಂಚಳಿ)ವನ್ನು ತಯಾರಿಸುವರು.

**ಘೇಟಿಯಾ(ಲಂಗ)**

ಲಂಬಾಣಿ ಮಹಿಳೆಯರ ನಡುವಿನ ಕೆಳಗಿರುವ ವಿನ್ಯಾಸದ ಉಡುಗೆಯನ್ನು

---

೧೫. ಡಾ. ಹರಿಲಾಲ ಪವಾರ, ೨೦೦೭, **ಬದುಕ್ಕೊಂದು ಚಿತ್ತಾರ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಪು.ಸಂ. ೮೧.

'ಫೇಟಿಯಾ'(ಲಂಗ) ಎಂದು ಕರೆಯುವರು. ಈ ಲಂಗವನ್ನು ತಯಾರಿಸಲು ಮಹಿಳೆಯರು ತುಂಬಾ ಶ್ರಮ ಪಡುವರು. ಸಾಮಾನ್ಯವಾಗಿ ಈ ಲಂಗದಲ್ಲಿ ಈ ಕೆಳಗಿನಂತೆ ಭಾಗಗಳಾಗಿ ವಿಂಗಡಿಸಬಹುದು.

೧. ಲೇಪೊ(ಸೊಂಟದ ಪಟ್ಟಿ) ೨. ಕಾಳೋಫೇರೊ(ಕರಿಬಟ್ಟೆ)

೩. ರಾತಡೊಫೇರೊ(ಕೆಂಪು ಬಟ್ಟೆ) ೪. ಪಿತಾಂಬರ ಜರಸಿ

೫. ಲಾವಣಿ(ಉದ್ದಪಟ್ಟಿ)

ಇವುಗಳಲ್ಲದೆ ಈ ಲಂಗವನ್ನು ತಯಾರಿಸಲು ಇತರೆ ಬಣ್ಣದ ಬಟ್ಟೆಗಳೂ ಸಹ ಬೇಕು. ಪಟ್ಟಣದ ಸಿಂಪಿಗನು ತನಗೆ ಬೇಡವಾಗಿ ಕತ್ತರಿಸಿದ ವಿವಿಧ ಬಣ್ಣದ ಬಟ್ಟೆಯ ತುಂಡುಗಳನ್ನು ಆಯ್ದುಕೊಂಡು ಈ ಮಹಿಳೆಯರು ತಮ್ಮ ಲಂಗದ ಮೇಲೆ ತ್ರಿಕೋನಾಕಾರದ ಆಕೃತಿಗಳನ್ನು ಅಲ್ಲಲ್ಲಿ ಹಚ್ಚುವರು. ಅಲ್ಲದೆ ಈ ಲಂಗದ ನಡುವಿನ ಭಾಗದ ಮೇಲೆ ವಿವಿಧ ಬಣ್ಣದ ಸಿಲ್ಕಿನ್ ಬಟ್ಟೆಯನ್ನು ಜೋಡಿಸುವರು. ಅವುಗಳ ಮೇಲೆ ಪತಡಿ(ತಗಡಿನ ಬಿಲ್ಲೆಗಳು) ಖಾಂಪಲಿ, ಪುಂದಾ ಹಾಗೂ ವಿವಿಧ ಬಣ್ಣದ ತ್ರಿಕೋನಾಕಾರದ ಪಟ್ಟಿಗಳನ್ನು ಹಚ್ಚುವರು. ಪ್ರತಿಯೊಂದು ಬಟ್ಟೆಯನ್ನು ಕತ್ತರಿಸಲು ಕುಡುಗೋಲನ್ನೇ ತಮ್ಮ ಕೈಕತ್ತರಿಯನ್ನಾಗಿಸಿದ ಮಹಿಳೆಯರು ವಿವಿಧ ಆಕಾರದಲ್ಲಿ ಕತ್ತರಿಸಿ ಸುಂದರವಾಗಿ ಕಸೂತಿಯನ್ನು ಹಾಕುವರು. ಈ ಲಂಗದ ಮೇಲೆ ಕವಡೆ, ಗಾಜಿನ ಬಿಲ್ಲೆ, ತಗಡಿನ ಗುಂಡಿ, ಸತು, ಹಿತ್ತಾಳೆ ಲೋಹಗಳನ್ನೆಲ್ಲಾ ಸೇರಿಸಿ ಸಾದಾಗಾಡ್ರೆ, ಬಾಳೆಗಾಡ್ರೆ, ರೇಲೋ, ವೆಲೆ, ಮಾಕಿ, ಕಟ್ಟಾಮೋಡೆರೊ, ಡೋರ, ಕಲಣಿ, ಟೇಕಾ, ಗೋಟೆ, ಖಾಂಪಲಿ, ಮೋಟೆ ಹೀಗೆ ವಿವಿಧ ರೀತಿಯ ಕಸೂತಿಯನ್ನು ಹಾಕುವರು. ಮುಂದೆ ಲಂಗದ ಒಳಪದರಿಗೆ ಸಾಡಿ ಬಟ್ಟೆ ಸೇರಿಸಿ ಹೊಲಿಯುವರು. ಅಲ್ಲದೆ ಲಂಗದ ಎಡಭಾಗಕ್ಕೆ ಸ್ವಲ್ಪ ಖಾಲಿ ಜಾಗ ಬಿಡುವರು. ಇದಕ್ಕೆ 'ಡುಂಗೋ' ಎನ್ನುವರು. ಈ ಲಂಗವನ್ನು ಬಿಗಿಯಾಗಿ ಕಟ್ಟಲು ಎರಡು ಲಾಡಿಗಳನ್ನು ಹಾಕಿರುವರು. ಅವುಗಳ ತುದಿಗಳ ಮೇಲೆ ಸ್ವಲ್ಪ ಕವಡೆಯನ್ನು ಹಚ್ಚಿರುವರು. ಈ ಲಂಗವನ್ನು ತಯಾರಿಸಲು ಎರಡರಿಂದ ಮೂರು ತಿಂಗಳು ಬೇಕಾಗುತ್ತದೆ. ಕಾಂಚಳಿ(ಕುಪ್ಪಸ), ಫೇಟಿಯಾ(ಲಂಗ) ಈ ಎರಡು ಅಪೂರ್ಣವಾದ ಉಡುಗೆಗಳಾಗಿ ಗೋಚರಿಸುತ್ತವೆ. ಇವುಗಳ ಕುರಿತಾಗಿ ಪಾರಂಪರಿಕವಾಗಿ ಬಂದಿರುವ ಕೆಲವೊಂದು ಐತಿಹ್ಯಗಳೂ ಸಹ ಸಿಗುತ್ತವೆ. ಈ ಲಂಗದ ಐದು ಭಾಗಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೧. ಲೇಪೊ(ಸೊಂಟದ ಪಟ್ಟಿ)**

ಲಂಗದ ಮೇಲುಗಡೆ ಸೊಂಟಕ್ಕೆ ಪಟ್ಟಿಯಾಕಾರದಲ್ಲಿ ಇರುವುದೇ ಲೇಪೊ ಆಗಿದೆ. ಇದನ್ನು ತಯಾರಿಸಲು ತುಂಬಾ ದಿನಗಳು ಬೇಕಾಗುತ್ತದೆ. ಇದರ ಉದ್ದ ಎರಡು



ಲೇಪೋ (ಸೋಂಟದ ಪಟ್ಟ)ದ ವಿವಿಧ ವಿನ್ಯಾಸಗಳು











ಲೇಪೋ (ಸೋಂಟದ ಪಟ್ಟ)ದ ವಿವಿಧ ವಿನ್ಯಾಸಗಳು





ಲೇಪೋ (ಸೋಂಟದ ಪಟ್ಟಿ)ದ ವಿವಿಧ ವಿನ್ಯಾಸಗಳು









ಲೇಪೋ (ಸೋಂಟದ ಪಟ್ಟಿ)ದ ವಿವಿಧ ವಿನ್ಯಾಸಗಳು

ಮೊಳ, ಅಗಲ ಒಂದು ಚೋಟು ಇರುತ್ತದೆ. ಈ ಲೇಪೊವಿನ ಒಳಗಡೆ ವಿವಿಧ ದಾರಗಳಿಂದ ಸಾದಾಗಾಡ್ರೆ, ಬಾಳೆಗಾಡ್ರೆಗಳನ್ನು ಕಟೇರಿಯಾ ಹಾಕಿರುವರು. ಅವುಗಳ ಮೇಲೆ ರೇಲೊ, ಝುಂಡಿ, ಗೇರೊ, ಕಲಣಿ, ಕಟ್ಟಾ, ಟೇಕಾ, ವೆಲೆ, ಖಿಲಣ, ಚೆಣಗಿ ಹೀಗೆ ವಿವಿಧ ಬಗೆಯ ಕಸೂತಿ ಕೆಲಸವನ್ನು ಮಾಡುವರು. ಈ ಲೇಪೊವಿನ ಮಧ್ಯದಲ್ಲಿ ಗಾಜಿನ ಬಿಲ್ಲೆಗಳನ್ನು ಜೋಡಿಸಿ ಅವುಗಳ ಮೇಲೆ ದಾರಗಳಿಂದ ವಿವಿಧ ವಿನ್ಯಾಸದ ಕಸೂತಿಯನ್ನು ಹಾಕಿರುವರು.

**೨. ಕಾಳೊಫೇರೊ(ಕರಿಪಟ್ಟೆ)**

ಒಂದು ಚೋಟು ಅಗಲವಾದ ಕರಿಪಟ್ಟೆ, ಏಳು ಮೊಳ ಉದ್ದದ ಕಪ್ಪು ಬಟ್ಟೆ ಇದಾಗಿದೆ. ಇದನ್ನು ಲಾವಣವೆಂದು ಸಹ ಕರೆಯುವರು. ಇದರ ಮಧ್ಯದಲ್ಲಿ ಟೇಕಾ, ಖಿಲಣ, ಕಟ್ಟಾ ಹೀಗೆ ವಿವಿಧ ಬಗೆಯ ಕಸೂತಿಯನ್ನು ರಚಿಸುವರು.

**೩. ರಾತಡೊ ಫೇರೊ(ಕೆಂಪು ಪಟ್ಟೆ)**

ಒಂದು ಗೇಣು ಅಗಲ ಹಾಗೂ ಏಳು ಮೊಳ ಉದ್ದದ ಕೆಂಪು ಬಟ್ಟೆ ಇದಾಗಿದೆ. ಮೇಲೆ ಹೇಳಿದ ಕಾಳೊಫೇರೊವಿನಂತೆ ಇಲ್ಲಿಯೂ ಸಹ ಟೇಕಾ, ಕಟ್ಟಾ, ಖಿಲಣ ಹೀಗೆ ವಿವಿಧ ಬಗೆಯ ಕಸೂತಿಯನ್ನು ಹಾಕಿರುತ್ತಾರೆ.

**೪. ಪಾಟಾ ಪಿತಾಂಬರ(ಸಿಲ್ಕ್‌ನ ಹಳದಿ ಪಟ್ಟೆ)**

ಎರಡು ಗೇಣು ಅಗಲ ಹಾಗೂ ಏಳು ಮೊಳ ಉದ್ದದ ಕೆಂಪು ಬಟ್ಟೆ ಇದಾಗಿದೆ. ಮೇಲೆ ಹೇಳಿದ ಕಾಳೊಫೇರೊವಿನಂತೆ ಇಲ್ಲಿಯೂ ಸಹ ಟೇಕಾ, ಕಟ್ಟಾ, ಖಿಲಣ ಹೀಗೆ ವಿವಿಧ ಬಗೆಯ ಕಸೂತಿಯನ್ನು ಹಾಕಿರುತ್ತಾರೆ. ಅಲ್ಲದೆ ತ್ರಿಕೋನ ಆಕಾರದ 'ಖಾಪಲಿ' ಅಲ್ಲಲ್ಲಿ ಜೋಡಿಸಿರುವರು ಹಾಗೂ ಉಣ್ಣೆಯ ದಾರದಿಂದ ಕೆಲವೊಂದು ಗುಂಚನ್ನು(ಮಂದ) ಅಲ್ಲಲ್ಲಿ ಹಾಕಿರುವರು. ನೋಡುಗರಿಗೆ ತುಂಬ ಸುಂದರವಾಗಿ ಕಾಣುವುದು.

**೫. ಲಾವಣ(ಉದ್ದಪಟ್ಟೆ)**

ಕೆಂಪು ಮತ್ತು ಕರಿ ಬಟ್ಟೆಯ ಏಳು ಮೊಳದ ಪಟ್ಟಿ ಇದಾಗಿದೆ. ಕೆಂಪು ಬಟ್ಟೆಯ ಮೇಲೆ ಅಲ್ಲಲ್ಲಿ ಗಾಜಿನ ಬಿಲ್ಲೆಗಳನ್ನು ಹಚ್ಚಿ ಕಸೂತಿಯ ಪೋಟೆ, ಎರಡು ಬದಿಗೆ ಬಿಳಿ ಬಟ್ಟೆಯ ಗೋಟೆ ಹಚ್ಚಿ, ಹಳದಿ ಮತ್ತು ಕರಿ ದಾರಗಳಿಂದ ಖಿಲಣ ಕಸೂತಿ ಹಾಕಿರುತ್ತಾರೆ. ಇದಕ್ಕೆ ಗಾಜಿನ ಬಿಲ್ಲೆಗಳನ್ನು ಅಲ್ಲಲ್ಲಿ ಸೇರಿಸಿ ಅನೇಕ ಬಗೆಯ ಕಸೂತಿಗಳನ್ನು ಹಾಕುವರು. ಇವುಗಳ ಮೇಲೆ ಚಿಕ್ಕ ಚಿಕ್ಕ ಗಾಜಿನ ಕನ್ನಡಿಯನ್ನು ಹಚ್ಚುವರು. ಅವುಗಳ ಮೇಲೆ ರೇಲೊ, ವೇಲೆ, ಮಾಕಿ, ಕಟ್ಟಾ, ಡೋರ, ಖಿಲಣಿ ಹೀಗೆ ವಿವಿಧ ಬಗೆಯ ಕಸೂತಿಗಳನ್ನು ಲಾವಣದ ಮೇಲೆ ಹಾಕುವರು.



# ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು

## ಫೇಟಿಯಾ (ಲಂಗ)ದ ವಿವಿಧ ಭಾಗಗಳು



ಲೇಪೊ(ಸೊಂಟದ ಪಟ್ಟಿ)



ಕಾಳೋ ಫೇರೋ (ಕರಿಪಟ್ಟಿ)



ರಾತಡೋ ಫೇರೋ (ಕೆಂಪು ಪಟ್ಟಿ)



ಸಿಲ್ಕಿನ ಬಟ್ಟೆ



ಲಾವಣ್

ಲಾವಣಿಯನ್ನು ತಯಾರಿಸುವ ಎರಡು ರೀತಿಯ ಬಟ್ಟೆಗಳನ್ನು ಬೇಕಾಗುತ್ತದೆ. ಕಪ್ಪು ಮತ್ತು ಕೆಂಪು ಬಣ್ಣದ ಪಟ್ಟಿಯನ್ನು ಜೋಡಿಸಿ ಹೊಲಿಯುವರು. ಇವುಗಳ ಮೇಲೆ ಬಿಳಿ ಬಣ್ಣದ ದಾರದಿಂದ ಮೇಲೆ ಹಾಕುವರು. ಅಲ್ಲದೆ ತ್ರಿಕೋನ ಆಕಾರದ ಬಿಳಿಬಟ್ಟೆಯ ಖಾಪಲಿಯನ್ನು ಜೋಡಿಸುವರು.

**ಸಾಡಿರೊ ಫೇಟಿಯಾ**

ಮದುವೆಯಾದ ಮೇಲೆ ಒಂದು ವಾರದವರೆಗೆ ಉಡುವ ಲಂಗವನ್ನೇ ಸಾಡಿರ ಫೇಟಿಯಾ ಅಥವಾ ಬಾಂಡೊ ಫೇಟಿಯಾ ಎಂದು ಕರೆಯುವರು. ಯಾವುದೇ ರೀತಿಯ ಕಸೂತಿ ಇಲ್ಲದೆ ಖಾಲಿ ಬಟ್ಟೆಯನ್ನು ಬಾಂಡು ಫೇಟಿಯಾ ಎನ್ನುವರು. ಇದು ಗಂಡನ ಮನೆಯವರು ಮದುವೆ ಸಂದರ್ಭದಲ್ಲಿ ಕೊಡುವ ಬಟ್ಟೆಯಾಗಿದೆ. ಇದಕ್ಕೆ ಚೇಣ್‌ಕಟ್ಟಿಸಿ ಉಡುವರು. ಇದರಂತೆ ಸಾಡಿರ ಕಾಂಚಳಿ(ಕುಪ್ಪಸ) ಸಹ ಇರುತ್ತದೆ. ಇವುಗಳನ್ನು ಮದುವೆಯಾದ ಮೊದಲಲ್ಲಿ ಕೆಲವೇ ದಿನಗಳವರೆಗೆ ಈ ಬಟ್ಟೆಯನ್ನು ಧರಿಸುವರು.

**ಗಣ್ಣೊ ಪುಲ್ಯಾ(ಸಿಂಬಿ ಮಾದರಿಯ ಪರಿಕರ)**

ಇದು ಹಬ್ಬಹರಿದಿನಗಳಲ್ಲಿ ಲಂಬಾಣಿ ಮಹಿಳೆಯರು ತಲೆಯ ಮೇಲೆ ಬುಟ್ಟಿ ಅಥವಾ ಬಿಂದಿಗೆ ಹೊರಲು ಬಳಸುವ ಸಿಂಬೆಯಾಗಿದೆ. ಇದು ಒಂದು ಗೇಣು ಉದ್ದ, ಎರಡು ಗೇಣು ಅಗಲವಾಗಿರುತ್ತದೆ. ಸಿಂಬೆಯೊಂದಿಗೆ ಜೋಡಿಸಿ ತಲೆಯ ಹಿಂದೆ ಇಳೆ ಬಿಡುವರು. ಇದಕ್ಕೆ ಥಿಕಳಿ(ತುಂಡುಬಟ್ಟೆ) ಹಾಕಿ ಹೊಲಿಯುವರು. ಅಲ್ಲದೆ ಗಾಜಿನ ಕನ್ನಡಿ, ವಿವಿಧ ಬಣ್ಣದ ದಾರ ಹಾಕಿ ವಿಶಿಷ್ಟ ಮಾದರಿಯಲ್ಲಿ ತಯಾರಿಸುವರು. ತಾಂಡಗಳಲ್ಲಿ ತೀಜಿನ್ ಹಬ್ಬವಾದರೆ ಬುಟ್ಟಿಯನ್ನು ಹೊರಲು ಬಳಸುವರು. ಈ ಗಣ್ಣೊ ಪುಲ್ಯದ ಮೂರು ಕಡೆ(ಎರಡು ಕೊನೆ ಮತ್ತು ಮಧ್ಯ) ಕವಡೆಯನ್ನು ಇಳೆ ಬಿಡುವರು. ಲಂಬಾಣಿಗರಲ್ಲಿ ಇದು ಮಹತ್ವದ ಉಡುಗೆಯಾಗಿ ಕಂಡುಬರುತ್ತದೆ.

**ಝೋಲಣಾ (ಚೀಲ)**

ಭಾರತದ ಮದುವೆಗಳೆಂದರೆ ತನ್ನ ಕರಕುಶಲಕಲೆ ಮತ್ತು ಸೃಜನಶೀಲತೆಯನ್ನು ಅರ್ಥಪೂರ್ಣವಾಗಿ ಬಿಂಬಿಸಲು ಅತ್ಯುತ್ತಮ ಅವಕಾಶಗಳು, ಲಂಬಾಣಿಗರ ಮದುವೆಯಲ್ಲಿ ತಾಯಿ ತನ್ನೆಲ್ಲ ತಾಳ್ಮೆ, ಪ್ರೀತಿ, ಕಲೆಯನ್ನು ಧಾರೆ ಎರೆದು ವಧೂವರರಿಗೆ ನೀಡುವ ಚಿಕ್ಕ ಚೀಲದ ಗಾಢವರ್ಣ, ಆಳವಾದ ಪ್ರೀತಿ ಮತ್ತು ಅರ್ಥವಂತಿಕೆಯನ್ನು ಪ್ರತಿನಿಧಿಸುತ್ತದೆ.

ವಧುವಿನ ಕಸೂತಿಯಿಂದ ತಯಾರಾದ ಚೀಲದಲ್ಲಿ ದೊಡ್ಡ ಕನ್ನಡಿ ಇದ್ದು ಅದು ಸೂರ್ಯನನ್ನು ಪ್ರತಿನಿಧಿಸಿದರೆ ಅದರ ಸುತ್ತಲಿನ ಹಳದಿ ಬಣ್ಣದ ಕಸೂತಿ ಸೂರ್ಯ ಕಿರಣಗಳನ್ನು ಪ್ರತಿನಿಧಿಸುತ್ತವೆ. ನಾಲ್ಕು ಬೇರೆ ಬೇರೆ ಬಣ್ಣದ ಪಟ್ಟಿಗಳು ಸೂರ್ಯ.





ಗಾಲಾ (ಸಿಂಬಿ)



ಪುಲ್ಯಾ (ಹೂವಿನ ಮಾದರಿ)



ಪುಲ್ಯಾ (ಹೂವಿನ ಮಾದರಿ)











ಗಣ್ಣೊ ಮಲ್ಯಾ ಧರಿಸಿದ ಲಂಬಾಣಿ ಮಹಿಳೆಯರು

ಭೂದೇವಿಗೆ ನೀಡಿದ ಬಣ್ಣದ ಕೊಡುಗೆಯಾದ ಕಾಮನಬಿಲ್ಲನ್ನು ಸೂಚಿಸುತ್ತದೆ. ಅದರ ಸುತ್ತಲಿನ ಚಿತ್ತಾರ ಮತ್ತು ಸಣ್ಣ ಸಣ್ಣ ಕನ್ನಡಿಗಳು ಚಂದ್ರ, ನಕ್ಷತ್ರಗಳಂತೆ ಹೊಳೆಯುತ್ತವೆ.

ವರನಿಗೆ ಅವನ ತಾಯಿ ಚೌಕಾಕಾರದ ಬಟ್ಟೆಯಲ್ಲಿ ಕಸೂತಿ ಮತ್ತು ಪ್ರೀತಿಯಿಂದ ತುಂಬಿಸಿ ಅದರ ಮೂರು ಅಂಚುಗಳನ್ನು ಹೊಲೆದು ಒಂದನ್ನು ಹಾಗೇ ಬಿಟ್ಟಿರುತ್ತಾರೆ. ಇದರಲ್ಲಿ ಹಣ, ಉಡುಗೊರೆ ಮತ್ತು ಸುಂಗದದ ವಸ್ತುಗಳನ್ನು ಇಟ್ಟುಕೊಳ್ಳಲು ಅನುಕೂಲವಾಗಿರುತ್ತದೆ.

**ಕೋತಳಿ**

ಇದು ವಿಶೇಷವಾಗಿ ಮದುವೆ ಸಂದರ್ಭದಲ್ಲಿ ಬಳಸುವ ಒಂದು ಬಗೆಯ ಚೀಲವಾಗಿದೆ. ಇದನ್ನು ಮದುಮಗ ಹಾಗೂ ಅವನ ಸಹಾಯಕ(ಲೇರಿಯಾ) ಇಬ್ಬರೂ ಬಳಸುವರು. ಇದರ ಒಳಗಡೆ ಎಲೆ, ಅಡಿಕೆ, ಸುಣ್ಣ, ಬೀಡಿ ಮುಂತಾದ ವಸ್ತುಗಳನ್ನು ಹಾಕಿರುವರು. ಇದನ್ನು ತಯಾರಿಸಲು ಒಂದು ಗೇಣಿಗೆ ಐದು ಪಟ್ಟಿಯಿಂದ ಈ ಚೀಲವನ್ನು ತಯಾರಿಸುವರು. ಎರಡು ಮೊಳ ಉದ್ದದ ಬಗಲಲ್ಲಿ ಹಾಕಲು ಲಾಡಿಗಳಿರುತ್ತವೆ. ಈ ಲಾಡಿಗಳು ವಿಶಿಷ್ಟ ರೀತಿಯಲ್ಲಿ ಕಸೂತಿಯಿಂದ ಕೂಡಿರುತ್ತವೆ. ಇವುಗಳ ಮೇಲೆ ಕನ್ನಡಿ, ಕವಡೆ ವಿವಿಧ ಧಾರಗಳಿಂದ ಕೂಡಿದ ಪುಂದಾ(ದಾರದ ಗುಚ್ಚ) ಕೋಡಿಜುಂಡಿ ಫಳಿಗಳನ್ನು ಜೋಡಿಸಿರುತ್ತಾರೆ. ವಿವಿಧ ರೀತಿಯ ಖಿಲಣಿ, ಗಾಡ್ರೆಗಳಿಂದ ಕಸೂತಿ (ತೂನೇರೊ) ಹಾಕಿರುತ್ತಾರೆ.

**ಚಾಂದ್ಯಾ**

ಮೂಲತಃ ದನಗಾಹಿ ಸಂಸ್ಕೃತಿಯಿಂದ ಬಂದಿರುವ ಲಂಬಾಣಿಗರು ಪಶುಗಳಿಗೂ ಸಹ ಕೆಲವೊಂದು ಉಡುಗೆಯನ್ನು ತೊಡಿಸುವ ಸಂಪ್ರದಾಯವನ್ನು ಇಟ್ಟುಕೊಂಡಿದ್ದಾರೆ. ಆಕಳು, ಎತ್ತುಗಳ ಹಣೆಯ ಮೇಲೆ ಇದನ್ನು ಕಟ್ಟುವರು. ಅವುಗಳಿಗೆ ಚಾಂದ್ಯಾ ಎನ್ನುವರು. ಈ ಚಾಂದ್ಯಾವು ಒಂದು ಗೇಣು ಇರುತ್ತದೆ. ಇದರ ಮೇಲೆ ದೊಡ್ಡದಾದ ಐದು ಕನ್ನಡಿಗಳಿರುತ್ತವೆ. ಇವುಗಳಿಗೆ ಖಿಲಣ ಹಾಕಿರುತ್ತಾರೆ. ಅಲ್ಲದೆ ದನಗಳ ಹಣೆಗಳ ಮೇಲೆ ಕಟ್ಟಲು ಎರಡು ಲಾಡಿಗಳನ್ನು ಅವುಗಳ ಮೇಲೆ ಜೋಡಿಸಿರುತ್ತಾರೆ. ಇದನ್ನು ಆಕಳು ಮತ್ತು ಎತ್ತುಗಳ ಮೇಲೆ ಹಬ್ಬ ಹಾಗೂ ಮದುವೆಯಂತಹ ವಿಶೇಷ ಸಂದರ್ಭಗಳಲ್ಲಿ ಹಾಕಿರುವರು.

**ಉಡುಗೆಯ ಮೇಲೆ ಹಾಕುವ ಕಸೂತಿಯ ಪಾರಿಭಾಷಿಕ ಪದಗಳು**

೧. **ಬಕಿಯ:** ಕಪ್ಪು ದಾರದ ಹೊಲಿಗೆಯನ್ನು ಬಕಿಯ ಎನ್ನುತ್ತಾರೆ.



**ಚೆಟ್ಟಿಯಾರ ಕೊತಳಿ (ಮಂಗಳ ಕಾರ್ಯಕ್ಕೆ ಬಳಸುವ ಚೀಲ)**







ಚಂಚಿ (ಮದುವೆಯಲ್ಲಿ ಲೆರಿಯಾ ಧರಿಸುವುದು)









೨. **ವೇಲೆ:** ಕೊಂಡಿಯ ಆಕಾರದಲ್ಲಿರುವ ಈ ಹೊಲಿಗೆಯನ್ನು ರಜಾಯಿ ಮತ್ತು ಚೀಲಗಳನ್ನು ಹೊಲಿಯುವಾಗ ಬಳಸುತ್ತಾರೆ. ಬಟ್ಟೆಗಳ ಮೇಲೆ ನೇರವಾಗಿ ಕೆಲವೊಮ್ಮೆ ಅಡ್ಡದಿಡ್ಡ ದಾರದಿಂದ ಹಾಕುವ ಕಸೂತಿ ಕಲೆಗೆ ವೇಲೆ ಎನ್ನುವರು.

೩. **ತೀನ್ ಸುಯಿ ಮಾಕಿ:** ಉದ್ದವಾದ ಕುಣಿಕೆಯಂತೆ ಕಾಣುವ ಒಂದೇ ದಾರದಿಂದ ಹೊಲಿದಂತೆ ಕಾಣುವ ಹೊಲಿಗೆ.

೪. **ಮಾಕಿ:** ತ್ರಿಭುಜಾಕಾರದ ಹೊಲಿಗೆಯಿದ್ದು, ಇದರ ಮೇಲ್ತುದಿಯಲ್ಲಿ ಚಿಕ್ಕ ಕುಣಿಕೆಯಿರುತ್ತದೆ. ಮಾಕಿ ಅಂದರೆ ಲಂಬಾಣಿ ಭಾಷೆಯಲ್ಲಿ ನೊಣ. ನೊಣದ ಆಕಾರದ ಕಸೂತಿಗೆ ಈ ಹೆಸರು ಬಂದಿದೆ. ಹಳದಿ ಬಣ್ಣದ ದಾರದಿಂದ ಈ ಮಾಕಿ ಎಂಬ ಕಸೂತಿ ಹಾಕುವರು.

೫. **ಸೂರ್ಯಕಾಂತಿ ಮಾಕಿ:** ತೀನ್ ಸುಯಿ ಮಾಕಿಯನ್ನು ಹೋಲುವ ಈ ಹೊಲಿಗೆಯನ್ನು ಅಡ್ಡವಾಗಿ ಹೊಲಿಯುತ್ತಾರೆ. ಇದನ್ನು ಹೊದಿಕೆಗಳಲ್ಲಿ ಬಳಸುತ್ತಾರೆ.

೬. **ಉಲ್ಟಾ ದೋರ:** ಹೆಸರೇ ಸೂಚಿಸುವಂತೆ, ಇದು ಉಲ್ಟಾ ಹೊಲಿಗೆಯಾಗಿದೆ. ಹೊಲಿಗೆಯ ಮಧ್ಯೆ ಜಾಸ್ತಿ ಅಂತರವಿರುವುದಿಲ್ಲ.

೭. **ದೋರನಾಕಿ:** ಇದು ಉದ್ದ ಹೊಲಿಗೆಯಾಗಿದ್ದು ನಡುವೆ ಅಂತರಗಳಿಲ್ಲದೇ ನೇರವಾಗಿರುತ್ತದೆ.

೮. **ಪೋಟೆ:** ಒಂದಕ್ಕೊಂದು ಅಂಟಿಕೊಂಡಂತೆ ಕಾಣಿಸುವ ಎರಡು ಹೊಲಿಗೆಗಳು ಸೇರುವ ಮಧ್ಯಭಾಗವನ್ನು ಬಣ್ಣದ ದಾರದಿಂದ ಹೊಲಿಯಲಾಗಿರುತ್ತದೆ.

೯. **ಚೀಣ್:** ಝಿಗ್ ಝಾಗ್ ಮಾದರಿಯಲ್ಲಿರುವ ಈ ಹೊಲಿಗೆಯು ಎರಡು ಬಣ್ಣಗಳ ದಾರಗಳಿಂದ ಕೂಡಿರುತ್ತದೆ. ಹೊಲಿಗೆಯ ಮೇಲ್ಭಾಗ ಮತ್ತು ಅಂಚಿನಲ್ಲಿ ಚಿಕ್ಕ ಕುಣಿಕೆಯಿರುತ್ತದೆ. ಸೊಂಟದ ಪಟ್ಟಿಗೆ ಲಂಗದ ಬಟ್ಟೆಯನ್ನು ಸೀರಿಯ ನೀರಿಗೆಯ ಮಾದರಿಯಲ್ಲಿ ಜೋಡಿಸಿರುವರು.

೧೦. **ಭೂರಿಯ:** ಲಂಬಾಣಿ ಮಹಿಳೆಯರು ಮೂಗಿದೆ ಧರಿಸುವ ರಿಂಗಿನ ಆಕಾರದ ಒಡವೆಯನ್ನು ಭೂರಿಯ ಎಂದು ಕರೆಯಲಾಗುತ್ತದೆ. ಈ ಭೂರಿಯಾ ಕಸೂತಿಯು ದುಂಡಾಕಾರವಾಗಿರುವ ಹೊಲಿಗೆಯಾಗಿದೆ. ಇದು ಚಕ್ರವನ್ನು ಹೋಲುತ್ತದೆ.

೧೧. **ಭೂರಿಯ ಬಕಿಯ:** ದುಂಡಾಕಾರವಾಗಿ ಹೊಲಿಯಲಾಗುವ ಈ ಹೊಲಿಗೆಯನ್ನು ಮತ್ತೆ ಹಿಂದಿನಿಂದ ಹೊಲಿದು ಜೋಡಿಸಲಾಗುತ್ತದೆ.

೧೨. **ಚೂಡ್ ಭೂರಿಯ:** ಇದು ಚಿಕ್ಕದಾಗಿ ಹೊಲಿಯಲಾಗುವ ದುಂಡಾಕಾರದ ಹೊಲಿಗೆ ಮತ್ತು ಇದು ಕೊನೆಯಲ್ಲಿ ತೆರೆದಿರುತ್ತದೆ.

೧೩. **ಕಟ್ವಾ ನಕ್ರ:** ಬಟ್ಟೆಯನ್ನು ತ್ರಿಭುಜಾಕಾರದಲ್ಲಿ ಮಡಚಿ, ಅದರ ತುದಿಯ ಮೇಲ್ಭಾಗದಲ್ಲಿ ಸೂಕ್ಷ್ಮವಾಗಿ ಸುತ್ತಲು ಕಸೂತಿ ಹಾಕುವರು. ಈ ರೀತಿಯಲ್ಲಿ ಮಾಡುವ ಕಸೂತಿಯನ್ನು 'ಕಟ್ವಾ ನಕ್ರ' ಎನ್ನುತ್ತಾರೆ.

೧೪. **ನಕ್ರಾ:** ವಜ್ರದ ಆಕೃತಿಯನ್ನು ನಾಲ್ಕು ದಾರಗಳಿಂದ ಹೊಲಿಯುವ ಕಸೂತಿಯನ್ನು ಕಾಂಟಾ ಎನ್ನುತ್ತಾರೆ. ಇದರಲ್ಲಿ ನಾಲ್ಕು ರೀತಿಯ ಬಣ್ಣದ ದಾರಗಳಿರುತ್ತವೆ.

೧೫. **ನಕ್ರ ಬಕಿಯ:** ನಕ್ರಾ ಕಸೂತಿಯನ್ನು ಮಾಡಿದ ಬಟ್ಟೆಯನ್ನು ಬಕಿಯ ಹೊಲಿಗೆಯಿಂದ ಹೊಲಿದಿರಲಾಗುತ್ತದೆ.

೧೬. **ನಕ್ರ ಪೋಟೆ:** ನಕ್ರ ಮತ್ತು ಪೋಟೆ ಹೊಲಿಗೆಗಳನ್ನು ಒಂದರ ನಂತರ ಒಂದರಂತೆ ಮಾಡಿದ ಹೊಲಿಗೆ.

೧೭. **ಆದ್ ಕಲ್ಯಾಣಿ:** ಇದನ್ನು ಚೇಣ್ ಮಾದರಿಯಲ್ಲಿ ಹೊಲಿಯಲಾಗುತ್ತದೆ.

೧೮. **ಸೋನಿಯಾ ಟಾಂಗ್:** ಏಕ ಮತ್ತು ಬಹು ವಿಧದ ದಾರಗಳಿಂದ ಮಾಡಲ್ಪಡುವ ಹೊಲಿಗೆ.

೧೯. **ಕಲ್ಯಾಣಿ:** ಬಟ್ಟೆಯ ಅಂಚುಗಳನ್ನು ಅಡ್ಡವಾಗಿ ಹೊಲಿಯುವ ಮಾದರಿ. ಇದರಲ್ಲಿ ಎರಡು ರೀತಿಯ ದಾರಗಳನ್ನು ಬಳಸಲಾಗುತ್ತದೆ.

೨೦. **ಪೋಟೆ ಮಾಕಿ :** ಎರಡು ಹೊಲಿಗೆಗಳ ಮಧ್ಯೆ ಮಾಡಲಾಗುವ ಈ ಕಸೂತಿಯನ್ನು ಹಲವು ವಿಧದ ಬಣ್ಣದ ದಾರಗಳಿಂದ ಮಾಡಲಾಗುತ್ತದೆ.

೨೧. **ಪೋಟೆ ಧೋರ:** ಪೋಟೆ ಕಸೂತಿಯನ್ನು ಮಾಡಿರುವ ಹೊಲಿಗೆಗಳ ಮಧ್ಯೆ ಮಾಡಲಾಗುವ ಹೊಲಿಗೆಯನ್ನು ಪೋಟೆ ಧೋರ ಎನುತ್ತಾರೆ.

೨೨. **ಅಂಗಲಿ:** ಎಲೆ ಮತ್ತು ಹೂಗಳ ಚಿತ್ರವಿರುವ ಮಧ್ಯಬಾಗವನ್ನು ಬಣ್ಣದ ದಾರಗಳಿಂದ ಹೊಲಿಗೆ ಹಾಕುವ ಕಲೆ.

೨೩. **ಅಂಗಲಿ ವೇಲೆ:** ಸರಪಳಿಯಂತೆ ಕಾಣುವ ಈ ಹೊಲಿಗೆಯು ಬಟ್ಟೆಯ ಅಂಚಿನಲ್ಲಿ ಮಾಡಲಾಗುತ್ತದೆ.

೨೪. **ರೇಲೊ:** ಎರಡು ಉದ್ದದ ಹೊಲಿಗೆಗಳು ಏಕ ಹೊಲಿಗೆಯೆಂದು ಭಾವಿಸುವ ರೀತಿಯಲ್ಲಿ ಹೊಲಿಯುವ ಕಲೆ. ರೈಲು ಹಳಿಯ ಕೆಳಗೆ ಹಾಕಿರುವ ಕಟ್ಟಿಗೆಯಂತೆ ಇವು ನೇರವಾದ ಗೆರೆಗಳಂತಿರುವ ಕಸೂತಿ ಕಲೆಯಾಗಿದೆ.

೨೫. **ಅಲಿ:** ಡೋರನಾಂಕಿ ಹೊಲಿಗೆಯ ಮತ್ತೊಂದು ಮಾದರಿ. ಕುಪ್ಪಸದ ಮೇಲೆ ಹಾಕುವ ಕಸೂತಿ.

೨೬. **ವೆಗ್ರೋ ಅಲಿ:** ಡೋರನಾಂಕಿಯ ಹೊಲಿಗೆಯಲ್ಲಿ ಮಾಡಲಾಗುವ ವಜ್ರದ ಆಕೃತಿಯ ಚಿತ್ರಗಳಿಗೆ ಈ ಹೊಲಿಗೆಯನ್ನು ಮಾಡಲಾಗುತ್ತದೆ.

೨೭. **ಪೋಟೆ ಅಲಿ:** ವಜ್ರದ ಚಿತ್ರವನ್ನು ಅಲ್ಲಿ ಎಂದು ಕರೆಯುತ್ತಾರೆ ಮತ್ತು ವಜ್ರದ ಚಿತ್ರದ ಒಳಭಾಗದಲ್ಲಿ ಬಿಡಿಸುವ ಅಂದದ ಹೊಲಿಗೆಯನ್ನು ಪೋಟೆ ಅಲಿ ಎನ್ನುತ್ತಾರೆ.

೨೮. **ಅಲಿ:** ಸರಪಳಿ ಹೊಲಿಗೆಯನ್ನು ವಜ್ರದ ಆಕೃತಿಯ ಸುತ್ತಲೂ ಮಾಡುವ ಹೊಲಿಗೆಯಾಗಿದೆ.

೨೯. **ಜಾಲಿಯ:** ಬಲೆಯನ್ನು ಹೋಲುವಂತೆ ಮಾಡುವ ಹೊಲಿಗೆ.

೩೦. **ಚೂಪ್ ಜಾಲಿಯ:** ಬಲೆಯನ್ನು ಹೋಲುವ ಈ ಹೊಲಿಗೆಯನ್ನು ತ್ರಿಭುಜಾಕಾರಗಳನ್ನು ಮಾಡಲು ಬಳಸುತ್ತಾರೆ.

೩೧. **ಗದ್ರಿ:** ಆಯತಾಕಾರದ ಸ್ಯಾಟಿನ್ ಬಟ್ಟೆಯನ್ನು ಒಂದು ಅಥವಾ ಮೂರು ಬಣ್ಣದ ದಾರಗಳಿಂದ ಅಂಚನ್ನು ಹೊಲಿಯಲಾಗುವ ಕಲೆ.

೩೨. **ತೀನ್ ಧೋರ ವೇಗ್ರೋ:** ಡೋರಾನಾಂಕಿಯ ಹೊಲಿಗೆಯಲ್ಲಿ ಮಾಡಲಾಗುವ ಮಾದರಿಗಳನ್ನು ವೇಗ್ರೋ ಎನ್ನಲಾಗುತ್ತದೆ. ಹೊಲಿಗೆಯ ಮೇಲೆ ಹಾಕುವ ಹೊಲಿಗೆಯನ್ನು ಹಾಕಿ ಅದನ್ನು ಮೂರು ಬಣ್ಣದ ದಾರಗಳಿಂದ ಮತ್ತೊಮ್ಮೆ ಹೊಲಿಯುವುದನ್ನು ತೀನ್ ಧೋರ ವೇಗ್ರೋ ಎನ್ನುತ್ತಾರೆ.

೩೩. **ಸಾತ್ ಧೋರ ವೇಗ್ರೋ:** ಒಂದು ಉಡುಪಿನ ತಳಭಗದಲ್ಲಿ ಹಾಕಲಾಗುವ ಏಳು ರೇಖೆಗಳ ಹೊಲಿಗೆ.

೩೪. **ಪಾಂಚ್ ಧೋರ ವೇಗ್ರೋ:** ಐದು ಲಂಬ ರೇಖೆಗಳಿರುವ ಹೊಲಿಗೆ.

೩೫. **ಆಡೋ ದಾರ:** ಎರಡು ಬಣ್ಣಗಳ ದಾರ ಬಳಸಿ ಹಾಕಲಾಗುವ ಅಡ್ಡ ಹೊಲಿಗೆ.

೩೬. **ಸೌದ್:** ಒಂಬತ್ತು ಹೊಲಿಗೆಗಳಿಗೆ ಸೌದ್ ಎನ್ನುತ್ತಾರೆ.

೩೭. **ತೇರೋ ದಾರ:** ವೇಗ್ರೋ ಮಾದರಿಯಲ್ಲಿ ಮಾಡಲಾಗುವ ಈ ಹೊಲಿಗೆಯು ಹದಿನಾರು ರೇಖೆಗಳಿಂದ ಕೂಡಿರುತ್ತದೆ. ಈ ಕಸೂತಿಯು ರಂಗೋಲಿಯನ್ನು ನೆನಪಿಸುತ್ತದೆ.

೩೮. **ಕಾಂಚೆತುನೆರೊ:** ಇದು ಗಾಜಿನ ತುಣುಕುಗಳನ್ನು ಹೊಲಿಯುವ ಕಲೆಯಾಗಿದೆ. ದುಂಡಾಕಾರದ, ವಜ್ರಾಕಾರದ ಮತ್ತು ಚೌಕಾಕಾರದ ಗಾಜಿನ ತುಣುಕುಗಳನ್ನು ಉಡುಪುಗಳಲ್ಲಿ ಹೊಲಿಯಲಾಗುವುದು.

೩೯. **ಖಿಲಾನ್:** ಇದು ಗುಂಡಿಗಳನ್ನು ಹೊಲಿಯುವ ಕಲೆಯಾಗಿದ್ದು ಉಡುಪಿನ ಅಂಚನ್ನು ಸಹ ಈ ಹೊಲಿಗೆಯಲ್ಲಿ ಹೊಲಿಯುತ್ತಾರೆ. ಲೇಪೊ(ಸೊಂಟದ ಪಟ್ಟಿ) ಎಂಬ ಪಟ್ಟಿಯ ಸುತ್ತಲು ಇದನ್ನು ಕಸೂತಿ ಹಾಕುವರು.

೪೦. **ಘೋರಾ ಖಿಲಾನ್:** ಇದು ಸಹ ಗುಂಡಿ ಹೊಲಿಗೆಯಾಗಿದ್ದು ಈ ಹೊಲಿಗೆಯಲ್ಲಿ ಹೆಚ್ಚು ಅಂತರವಿರುತ್ತದೆ.

೪೧. **ಸಂಗಮ್ ಖಿಲಾನ್:** ಇದೂ ಕೂಡ ಗುಂಡಿಗಳನ್ನು ಪೋಣಿಸುವ ಹೊಲಿಗೆಯಾಗಿದ್ದು ಹೊಲಿಗೆಯ ನಡುವೆ ಹೆಚ್ಚು ಅಂತರವಿರಿವುದಿಲ್ಲ.

೪೨. **ತೂನ್:** ಚಿಕ್ಕ ಚಿಕ್ಕ ಕನ್ನಡಿಯನ್ನು ಬಟ್ಟೆಯ ಮೇಲೆ ಜೋಡಿಸಿ ಅದರ ಸುತ್ತ ಹಾಕುವ ಕಲೆಗೆ 'ತೂನ್'(ಕಸೂತಿ) ಎನ್ನುವರು.

೪೩. **ಪೂಲ್:** ಬಟ್ಟೆಯ ಮೇಲೆ ಹೂವಿನ ಕುಸುರಿಗೆ ಪೂಲ್ ಎನ್ನುವರು.

೪೪. **ಖಾಪ್ಲಿ:** ಲಂಗದ ಮೇಲೆ ಚಿಕ್ಕ ತುಣುಕು ಬಿಳಿಯ ಬಟ್ಟೆಯನ್ನು ತ್ರಿಭುಜ ಆಕಾರದ ರೀತಿಯಲ್ಲಿ ಜೋಡಿಸಿರುವರು.

೪೫. **ಕಲ್ಲೇಣಿ:** ವಿವಿಧ ಬಣ್ಣದ ದಾರಗಳಿಂದ ಬಟ್ಟೆಗೆ ಸುಂದರವಾಗಿ ಕಾಣುವಂತೆ ಅಡ್ಡಾದಿಡ್ಡಿ ರೀತಿಯಾಗಿ ಹಾಕಿರುವ ಕುಸುರಿಯಾಗಿದೆ.

೪೬. **ಬಕ್ಯೆ:** ಮೂರು ರೀತಿಯ ದಾರದಿಂದ ಲಂಗದ ಮೇಲೆ ಬಕ್ಯ ಎಂಬ ಕುಸುರಿ ಹಾಕುವರು.

೪೭. **ಗಾಡ್ರೆ:** ಸೊಂಟದ ಪಟ್ಟಿಯ ಮೇಲೆ ಹಾಕುವ ಕಸೂತಿಯಾಗಿದೆ. ಈ ಮಾದರಿಯ ಕಸೂತಿಯನ್ನು ಹಳದಿ, ಹಸಿರು, ಕೆಂಪು, ಕಪ್ಪು, ಬಿಳಿ ಐದು ವಿಧದ ದಾರದಿಂದ ಕಸೂತಿ ಹಾಕುವರು.

೪೮. **ಪೊಟೆ:** ಕುಪ್ಪಸ ಹಾಗೂ ಲಂಗದ ಮೇಲೆ ಹಾಕುವ ಒಂದು ಕುಸುರಿಯಾಗಿದೆ. ಇದನ್ನು ಕಾಟ್ಲೆ ಎನ್ನುವರು.

೪೯. **ಜೀವಲ್ಯಾ:** ಖವ್ಯಾ ಮತ್ತು ಚೋಟಿಯಾದ ಮೇಲೆ ಅಂದವಾಗಿ ತೆಗೆದಿರುವ ಒಂದು ಪ್ರಕಾರದ ಕಸೂತಿ.

೫೦. **ಧೋಳಮಾಕಿ:** ಸಣ್ಣ ಸಣ್ಣ ನೋಣಗಳ ಹಾಗೆ ಬಿಳಿ ದಾರದಿಂದ ಇರುವ ಕಸೂತಿ.

೫೧. **ಬಾಳಿಗಾಡ್ರೆ:** ಪೇಟಿಯಾ(ಲಂಗ)ದ ಪಟ್ಟಿ, ಲೇಪೊ(ಸೊಂಟದಪಟ್ಟಿ)ದ ಮೇಲೆ ತೆಗೆದಿರುವ ಕಸೂತಿಯ ಹೆಸರು. ಇದನ್ನು ಬೇರೆ ಬೇರೆ ಬಣ್ಣದ ದಾರದಿಂದ ತೆಗೆದಿರುತ್ತಾರೆ.

೫೨. **ದೋಳಏಲ:** ಛಾಂಟಿಯಾದ ಘುಂಗಟೋದ ಮುಂಭಾಗದಲ್ಲಿ ಬಿಳಿದಾರದಿಂದ ಸಣ್ಣನೆಯ ಕಸೂತಿ, ಖವ್ಯಾ ಮತ್ತು ಚೋಟಿಯಾ ಮೇಲೆಯೂ ಈ ಕಸೂತಿ ತೆಗೆದಿರುತ್ತಾರೆ.

೫೩. **ರೇಲಾ ಮಾಕಿ:** ಛಾಂಟಿಯಾದ ಮೇಲೆ ಸಾಲು ಸಾಲಾಗಿ ನೋಣಗಳ ಹಾಗೆ ತೆಗೆದಿರುವ ಕಸೂತಿಗೆ 'ರೇಲಾ ಮಾಕಿ' ಎಂದು ಹೆಸರು.

೫೪. **ವಾಗೇರ ಘರ:** ಹುಲಿ ಮನೆ ಎನ್ನುವ ಒಂದು ಬಗೆಯ ಕಸೂತಿ.

**೩.೩. ಲೋಹ ಮಾಧ್ಯಮದ ಕರಕುಶಲ ಕಲೆ**

ಲೋಹ ಮಾಧ್ಯಮದ ಬಳಕೆಯ ಬಗೆಗೆ ಒಂದು ಇತಿಹಾಸವೇ ಇದೆ. ಅಲಂಕರಿಸಿ ಕೊಂಡು ಪರಜನರನ್ನು ಆಕರ್ಷಿಸಿ ಮೆಚ್ಚುಗೆ ಪಡೆಯಬೇಕೆನ್ನುವ ಮೂಲೋದ್ದೇಶದಿಂದಲೆ ಅಧಿಕಾರ ಚಿಹ್ನೆ, ಲಾಂಛನಗಳನ್ನು ಆಭರಣಗಳಂತೆ ಆಕರ್ಷಕ ವಸ್ತುಗಳಿಂದಲೇ ತಯಾರಿಸತೊಡಗಿದರು. ಆದಿಮಾನವನು ಮೊದಮೊದಲು ತನ್ನ ಸುತ್ತಲಿರುವ ಅನಾಯಾಸ ವಾಗಿ ದೊರಕುವ ಒಣಗಿದ ಹುಲ್ಲು, ಬಳ್ಳಿ, ಹಣ್ಣು, ಬೀಜ, ಎಲುವಿನ ತುಣುಕು, ಹಸ್ತಿ ಹುಲ್ಲು, ಬಳ್ಳಿ, ಹಣ್ಣು, ಬೀಜ, ಎಲುವಿನ ತುಣುಕು, ಹಸ್ತಿದಂತ, ಗಾಜಿನ ಮಣಿ, ಸಿಂಪು, ಕವಡೆ ಮೊದಲಾದವುಗಳಿಂದ ತನ್ನ ದೇಹವನ್ನು ಅಲಂಕರಿಸಿಕೊಂಡರೂ ಕ್ರಮೇಣ ಬೆಲೆಯುಳ್ಳ ಹರಳು, ಹವಳ, ಮರ, ಲೋಹಗಳಿಂದ ರಚಿಸಿದ ಸೃಷ್ಟಿಯ ಪ್ರತಿಕೃತಿಯಂತಿದ್ದ ಆಭರಣಗಳನ್ನು ಧರಿಸಹತ್ತಿದನು. ತಾಮ್ರ, ಹಿತ್ತಾಳೆ, ಸತುವಗ, ಕಬ್ಬಿಣ, ಬೆಳ್ಳಿ, ಬಂಗಾರಗಳಿಂದ ಹೂ, ಹಣ್ಣು, ಬೀಜ, ಬಳ್ಳಿಗಳನ್ನು ನಿರ್ಮಿಸಿ ಆಭರಣಗಳನ್ನು ಮಾಡಿ ಧರಿಸಿಕೊಳ್ಳ ತೊಡಗಿದನು. ಹೂವಿನಿಂದ ಮಾಡಿದ ಆಭರಣಗಳು ಕ್ರಮೇಣ ಕಡಿಮೆಯಾಗಿ ವಿವಿಧ ಲೋಹಗಳಿಂದ ಮಾಡಿದ ಆಭರಣಗಳು ಪ್ರಚಾರದಲ್ಲಿ ಬಂದವಾದರೂ ಇಂಥ ಒಡವೆಗಳು ಸೃಷ್ಟಿಯ ವಸ್ತುಗಳಾದ ಕುಸುಮ, ನಕ್ಷತ್ರ, ಬಿದಿಗೆಯ ಚಂದ್ರ, ಬಿದಿರಿನ ಶಾಖೆ, ಜೆನ್ನೋಣ, ಪತಂಗ, ಮೀನು, ಹಾವು, ಹುಲಿ ಮುಖಗಳನ್ನೇ ಹೋಲುತ್ತಿದ್ದವು.

ಲಂಬಾಣಿ ಸಮುದಾಯದ ಮೌಖಿಕ ಸಾಹಿತ್ಯದಲ್ಲಿ ಅದರಲ್ಲೂ ಜನಪದ ಗೀತೆಯಲ್ಲಿ ಮಹಿಳೆಯರ ಆಭರಣಪ್ರಿಯತೆ, ಲೋಹಗಳ ಬಳಕೆಯ ವಿವಿಧ ನೆಲೆಗಳು, ಆಭರಣ ಧರಿಸಿ ಕುಣಿತ ಮಾಡುವ ಹಿನ್ನೆಲೆಗಳು ವ್ಯಕ್ತವಾಗುವುದನ್ನು ನೋಡಬಹುದು. ಈ ಕೆಳಗಿನ ಒಂದು ಗೀತೆ ಹೀಗಿದೆ:

ಹಾಂಸಲೋ ದೇಯಾ ನಾಚೇನ ಜಾಂವುಚು
ಹಾಂಸಲೇರಿ ತಿತರಿ ಝೂಡಿಯಾಂವುಚು
ಮ ಡಿಗರಿಯಾಂವುಚು
ಭೂರಿಯಾ ದೇಯಾ ನಾಚೇನ ಜಾಂವುಚೂ
ಭೂರಿಯಾರಿ ರಮಣಾ ಝೂಡಿಯಾಂವುಚೂ
ಮ ಡಿಗರಿಯಾಂವುಚು
ಮಾಟಲಿ ದೇಯಾ ನಾಚೇನ ಜಾಂವುಚು
ಮಾಟಲಿರ ಘುಗರಾ ಝೂಡಿಯಾಂವುಚು
ಮ ಡಿಗರಿಯಾಂವುಚು[೧೬]

ಹಾಂಸಲಿ(ಕೊರಳಹಾರ) ಕೊಡು ತಾಯಿ ಕುಣಿತಕ್ಕೆ ಹೋಗುವೆ, ಹಾಂಸಲಿಯ ಗೆಜ್ಜೆಗಳು ಬೀಳುವಂತೆ ಕುಣಿದು ಬರುವೆ. ಭೂರಿಯಾ(ನತ್ತು) ಕೊಡು ತಾಯಿ ಕುಣಿತಕ್ಕೆ ಹೋಗುವೆ. ಭೂರಿಯಾದ ಗುಂಡುಗಳು ಬೀಳುವಂತೆ ಕುಣಿದು ಬರುವೆ. ಮಾಟಲಿ (ನಾಣ್ಯಗಳಿಂದ ಮಾಡಿದ ಒಡವೆ) ಕೊಡು ತಾಯಿ ಕುಣಿತಕ್ಕೆ ಹೋಗುವೆ. ಮಾಟಲಿಯ ಗೆಜ್ಜೆಗಳು ಬೀಳುವಂತೆ ಕುಣಿದು ಬರುವೆ.

ಮೇಲಿನ ಗೀತೆಯಲ್ಲಿ ಯುವತಿ, ತನ್ನ ತಾಯಿಯ ಬಳಿಯಿಂದ ಬೇರೆ ಬೇರೆ ವಸ್ತು ಒಡವೆಗಳನ್ನು ಬೇಡುತ್ತಾಳೆ. ಅವುಗಳನ್ನು ಮೈಮೇಲೆ ಹಾಕಿಕೊಂಡು ಕುಣಿತದಲ್ಲಿ ಪಾಲ್ಗೊಂಡು, ತಂಡದ ಇತರ ಹೆಣ್ಣು ಮಕ್ಕಳಿಗಿಂತ ಭೇಷ್ ಅನ್ನುವ ಹಾಗೆ ಕುಣಿದು ಬರುವೆ ಎಂದು ತನ್ನ ತಾಯಿಗೆ ಹೇಳುತ್ತಾಳೆ.

ಹೀಗೆ ಮಗಳು ತಾಯಿಯನ್ನು ಕುಣಿತಕ್ಕೆ ಹೋಗಲು ಆಭರಣವನ್ನು ಕೇಳುವುದು ಲಂಬಾಣಿಗರಲ್ಲಿರುವ ಸ್ತ್ರೀಸ್ವಾತಂತ್ರ್ಯದ ನೆಲೆಯನ್ನೂ, ಆಭರಣಪ್ರಿಯತೆಯನ್ನೂ ಬಿಂಬಿಸುತ್ತದೆ.

ಪ್ರಾಚೀನ ಕಾಲದಿಂದಲೂ ಈ ಸಮುದಾಯದ ಮಹಿಳೆಯರು ಆಭರಣಪ್ರಿಯರು. ಕಡುಬಡತನದಲ್ಲಿ ಬದುಕುತ್ತಿರುವ ಈ ಸಮುದಾಯಕ್ಕೆ ಜರ್ಮನ್ ಸಿಲ್ವರ್ ಲೋಹವೇ ಬೆಳ್ಳಿ ಮತ್ತು ಬಂಗಾರವಾಗಿದೆ. ಆರ್ಥಿಕವಾಗಿ ತುಂಬಾ ಅಸಮರ್ಥರಾದ ಇವರು ತಮ್ಮ ಪ್ರತಿಯೊಂದು ತೊಡುಗೆಯ ಆಭರಣಗಳನ್ನು ಜರ್ಮನ್ ಸಿಲ್ವರ್‌ನಿಂದ ವಿವಿಧ ವಿನ್ಯಾಸಗಳಲ್ಲಿ ತಯಾರಿಸಿ ಹಾಕಿಕೊಳ್ಳುವರು.

ನಾಡಿನ ಸಂಸ್ಕೃತಿಯ ಬಳಕೆಯನ್ನು ಮತ್ತು ಆ ನಾಡಜನರ ಬದುಕಿನ ಸಂಕೀರ್ಣತೆಯನ್ನು ವ್ಯಕ್ತಪಡಿಸುವಲ್ಲಿ ಆಭರಣಗಳು ಬಹುಮುಖ್ಯ ಪಾತ್ರ ವಹಿಸುತ್ತವೆ.

---

೧೬. ಡಾ. ಹರಿಲಾಲ ಪವಾರ, ೨೦೦೭, **ಬದುಕ್ಕೊಂದು ಚಿತ್ತಾರ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಪು.ಸಂ. ೮೧.

ಮಾನವನ ಬುದ್ಧಿ ತಿಳಿಯಾದಂತೆಲ್ಲಾ ತನ್ನ ಸುತ್ತಲೂ ಹರಡಿಕೊಂಡಿದ್ದ ನಿಸರ್ಗದ ಸೊಬಗು, ಅದರಲ್ಲಿ ಅರಳಿ ನಿಂತ ಚೆಲುವನ್ನು ಕಂಡು ಮೂಕವಿಸ್ಮಿತನಾದನು. ಹೀಗೆ ಪ್ರಕೃತಿಯ ಬೆಡಗಿಗೆ ಮಾರುಹೋದ ಆತ, ಅದರಲ್ಲಿ ದೊರೆಯುವ ಹೂವು ಎಲೆಗಳಿಂದಲೇ ತನ್ನನ್ನು ತಾನು ಅಲಂಕರಿಸಿಕೊಂಡನು. ಮಾನವನಲ್ಲಿ ಅಂತರ್ಗತವಾದ ಸೌಂದರ್ಯಪ್ರಜ್ಞೆಯ ಬೆಳವಣಿಗೆಗೆ ನಿಸರ್ಗದ ಪ್ರಭಾವವಷ್ಟೇ ಕಾರಣವಲ್ಲ. ಕಾಲಕ್ರಮೇಣ ಹೆಣ್ಣುಗಂಡುಗಳಲ್ಲಿ ಉಂಟಾದ ಪರಸ್ಪರ ಆಕರ್ಷಕ ಮನೋಭಾವವೂ ಕಾರಣವಾಗಿದೆ. ಆದಿಮಾನವ, ಆಭರಣಗಳ ವಿಕಾಸಘಟ್ಟದ ಅಂಗಳದಲ್ಲಿ ಕಾಲಿಡುವ ಮುನ್ನ ಆಭರಣಗಳ ಚಿತ್ತಾರವನ್ನೆಲ್ಲ ಹಚ್ಚೆಯಲ್ಲೇ ಕಾಣಿಸುತ್ತಿದ್ದನಂತೆ. ಮಾನವ ಶೃಂಗಾರ ಪ್ರಜ್ಞೆಯಿಂದಲೇ ಬಟ್ಟೆ ಧರಿಸುವುದನ್ನು ಕಲಿತ ಎಂಬುದು ಒಂದು ವಾದವಾದರೆ, ಬೆತ್ತಲೆ ಮೈಯನ್ನು ಮುಚ್ಚಿಕೊಳ್ಳಲು ಪ್ರಕೃತಿಗೆ ಶರಣಾಗಿದ್ದರಿಂದಲೇ ಸೌಂದರ್ಯಪ್ರಜ್ಞೆ ಹುಟ್ಟಿ ಆಭರಣಗಳ ಸೃಷ್ಟಿಯಾದವು ಎನ್ನುವುದು ಮತ್ತೊಂದು ವಾದ. ಈ ವಾದ ವಿವಾದಗಳೇನೇ ಇದ್ದರೂ ಮೈ ಮುಚ್ಚಿಕೊಳ್ಳುವ ಪ್ರಜ್ಞೆ ಎಚ್ಚರವಾಗುವ ಮುನ್ನವೇ ಸೌಂದರ್ಯಪ್ರಜ್ಞೆ ಜಾಗೃತವಾಗಿದೆ. ಇದಕ್ಕೆ ನಿದರ್ಶನವಾಗಿ ನಾಗರಿಕತೆಗೆ ಹೊರತಾಗಿ ಬದುಕುತ್ತಿರುವ ಇಂದಿನ ಆದಿವಾಸಿಗಳು ಆಭರಣಗಳನ್ನು ಹಾಕಿಕೊಂಡರೂ ಬಟ್ಟೆಯನ್ನು ಧರಿಸದೇ ಇರುವುದು ಆದಿಮಾನವನ ಸೌಂದರ್ಯಪ್ರಜ್ಞೆಯ ಪಳೆಯುಳಿಕೆಯಾಗಿದೆ.

ಮೊದಮೊದಲು ಗುಲಗಂಜಿ, ಮರದ ಬೀಜಗಳು, ಕವಡೆ, ದಂತ ಮುಂತಾದವುಗಳಿಂದಲೇ ಆಭರಣಗಳನ್ನು ತಯಾರಿಸಿ ಧರಿಸುತ್ತಿದ್ದರು. ಆಭರಣಗಳ ಪರಿಕಲ್ಪನೆಗೆ ಧಾರ್ಮಿಕ ತಳಹದಿ ದೊರೆತದ್ದು ಅವುಗಳ ಭದ್ರತೆ ಮತ್ತು ಬೆಳವಣಿಗೆಗೆ ಸಹಾಯಕಾರಿಯಾಗಿದೆ. ಚಿಕ್ಕ ಮಗುವಿರುವಾಗಲೇ ಕಿವಿ ಚುಚ್ಚಿ ತಾಳೆಗರಿಯನ್ನು ಇಡುವುದು ಮೂಗು ಚುಚ್ಚಿ ಮೂಳೆಯನ್ನಿಟ್ಟುಕೊಳ್ಳುವುದು ಆಗಿನ ಜನ ಸೌಂದರ್ಯವೆಂದು ನಂಬಿದ್ದರು.

ಹಳೆಯ ಮತ್ತು ನೂತನ ಶಿಲಾಯುಗಗಳ ಅವಧಿಯಲ್ಲಿ ದೊರೆತಿರುವ ಆಭರಣಗಳು ಎಂದು ಹೇಳುವ ವಸ್ತುಗಳು ಆಭರಣಗಳಲ್ಲ. ಕಾರಣ ಅವುಗಳನ್ನು ಬಳಸುತ್ತಿದ್ದ ಸಂದರ್ಭದಲ್ಲಿ ಅವು ಆಲಂಕಾರಿಕ ಇಲ್ಲವೇ ಸೌಂದರ್ಯವರ್ಧಕ ಎನ್ನುವ ಕಲ್ಪನೆಯೇ ಇರಲಿಲ್ಲವೆಂಬುದು ವಿದ್ವಾಂಸರ ಅಭಿಮತ. ಏನೇ ಇದ್ದರೂ ಮಾಂತ್ರಿಕ ಶಕ್ತಿಯುಳ್ಳ ವಸ್ತುಗಳಲ್ಲೇ ಆಭರಣಗಳ ಮೂಲೋತ್ಪತ್ತಿಯನ್ನು ಗುರುತಿಸಿಕೊಳ್ಳಬಹುದು. ಮನುಷ್ಯನು ಇಂದಿಗೂ ತಾನು ಧರಿಸುವ ಹಲವಾರು ಆಭರಣಗಳಲ್ಲಿ ಮಾಂತ್ರಿಕ ಶಕ್ತಿಯಿದೆಯೆಂದು ನಂಬುವುದು ಆಭರಣಗಳ ಉಗಮ ಮತ್ತು ಅದರ ವಿಕಾಸಘಟ್ಟದಲ್ಲಿ ಮಾಂತ್ರಿಕ ಭಾವನೆಯ ಪ್ರಭಾವ ಪ್ರಬಲವಾಗಿ ಕೆಲಸ ಮಾಡಿದೆ ಎಂಬುದನ್ನು ಸೂಚಿಸುತ್ತದೆ. ಆಭರಣಗಳ ಹುಟ್ಟಿಗೆ ತಾಂತ್ರಿಕ ಭಾವನೆಯೇ ಮೂಲ ಕಾರಣವಾಗಿದ್ದರೂ ಅವುಗಳ ಆಂತರ್ಯದಲ್ಲಿ

ಸಾಹಸ ಪ್ರದರ್ಶನದ ಝಲಕನ್ನು ಗುರುತಿಸಬಹುದು. ಹುಲಿ ಕೊಂದ ಶೌರ್ಯವನ್ನು ತೋರಿಸಲು ಹುಲಿಯುಗುರನ್ನು ಧರಿಸುತ್ತಿದ್ದರು. ಆನೆಯನ್ನು ಕೊಂದ ಹಿರಿಮೆಯನ್ನು ತೋರಲು ಆನೆದಂತದ ಚೂರುಗಳನ್ನು ಹಾಕಿಕೊಳ್ಳುತ್ತಿದ್ದರು. ಮಾಂತ್ರಿಕ ಪ್ರಭಾವ ಮತ್ತು ಸಾಹಸಗಳ ಪ್ರದರ್ಶನದ ನೆಲೆಗಟ್ಟಿನಲ್ಲಿ ಆಭರಣಗಳ ಉಗಮವಾಗಿತ್ತು.

ಪ್ರಾಚೀನವಾದ ತಮ್ಮ ಸಂಸ್ಕೃತಿಯ ಚಹರೆಗಳನ್ನು ಉಳಿಸಿಕೊಂಡು ಬಂದಿರುವ ಲಂಬಾಣಿ ಸಮುದಾಯದ ಮಹಿಳೆಯರು ಉಡುಪಿನಂತೆಯೇ ತಮ್ಮ ಮೈ ಮೇಲೆ ಹಾಕಿಕೊಳ್ಳುವ ತೊಡುಗೆಯಲ್ಲಿ ವೈಶಿಷ್ಟ್ಯ ಮೆರೆದಿದ್ದಾರೆ. ಪುರುಷರಿಗಿಂತ ಮಹಿಳೆಯರಿಂದಲೇ ಈ ಸಮುದಾಯವು ನಿಜವಾದ ಬುಡಕಟ್ಟೆಂದು ತಿಳಿದುಬರುತ್ತದೆ. ಏಕೆಂದರೆ ಧರಿಸುವ ಬಟ್ಟೆ ಹಾಗೂ ಮೈ ಮೇಲೆ ಹಾಕಿಕೊಳ್ಳುವ ಆಭರಣಗಳನ್ನು ನೋಡಿದರೆ ಬೇರೆ ಯಾವ ಸಮುದಾಯದಲ್ಲೂ ಈ ರೀತಿಯ ಆಭರಣಗಳನ್ನು ಕಾಣಲು ಸಾಧ್ಯವಿಲ್ಲ. ಸರಿಸುಮಾರಾಗಿ ಮಹಿಳೆಯರು ಹತ್ತರಿಂದ ಹನ್ನೆರಡು ಕೆ.ಜಿ. ತೂಕದ ಆಭರಣಗಳನ್ನು ಧರಿಸುವರೆಂದು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದುಬಂದಿದೆ.

ಮೈತುಂಬ ವಿವಿಧ ಮಾದರಿಯ ಆಭರಣಗಳನ್ನು ಧರಿಸುತ್ತಾರೆ. ತಲೆ ಕೂದಲಿನಿಂದ ಹಿಡಿದು ಕೆಳಗೆ ಕಾಲಿನವರೆಗೆ ವಿವಿಧ ಆಕಾರದ ವಸ್ತುಗಳನ್ನು ಹಾಕಿಕೊಳ್ಳುವರು. ಆಭರಣ ಪ್ರಿಯರಾದ ಲಂಬಾಣಿ ಮಹಿಳೆಗೆ ಜರ್ಮನ್ ಸಿಲ್ವರ್ ಬೆಳ್ಳಿ ಮತ್ತು ಬಂಗಾರವಾಗಿದ್ದವು. ಪ್ರತಿಯೊಂದು ಆಭರಣವನ್ನು ಈ ಲೋಹದಿಂದಲೇ ತಯಾರಿಸುವರು. ಕೆಲವೊಮ್ಮೆ ತಾಮ್ರ, ಹಿತ್ತಾಳೆ ಹಾಗೂ ಬೆಳ್ಳಿಯ ಆಭರಣಗಳನ್ನು ಉಪಯೋಗಿಸುವರು.

ಲಂಬಾಣಿಗರಲ್ಲಿ ಆಭರಣಗಳನ್ನು ಮಾಡುವ ಒಂದು ಉಪಪಂಗಡವಿದೆ. ಇವರನ್ನು 'ಸನಾರ್'(ಅಕ್ಕಸಾಲಿ, ಪತ್ತಾರ) ಎಂದು ಕರೆಯುವರು. ಇವರು ಮಹಿಳೆಯರಿಗೆ ಹಾಗೂ ಪುರುಷರಿಗೆ ಬೇಕಾಗುವ ಎಲ್ಲಾ ರೀತಿಯ ಆಭರಣಗಳನ್ನು ತಯಾರಿಸಿಕೊಡುವರು. ಕರ್ನಾಟಕದಲ್ಲಿ ಕೆಲವು ತಾಂಡಗಳಲ್ಲಿ ಒಂದೋ ಎರಡೋ ಸನಾರ(ಅಕ್ಕಸಾಲಿ) ಮನೆತನ ಕಂಡುಬಂದರೆ ಮತ್ತೆ ಕೆಲವು ತಾಂಡಾಗಳಲ್ಲಿ ಕಂಡುಬರಲಾರವು. ಬಿಜಾಪುರದಿಂದ ಹತ್ತು ಕಿ.ಮೀ. ದೂರದಲ್ಲಿ ಅಕ್ಕಸಾಲಿಗರದೇ ಒಂದು 'ಸನಾರ್' ಎಂಬ ತಾಂಡಾವಿದೆ. ಈ ತಾಂಡಾದಲ್ಲಿ ಲಂಬಾಣಿಗರಿಗೆ ಬೇಕಾಗುವ ಎಲ್ಲಾ ಆಭರಣಗಳನ್ನು ತಯಾರಿಸುವರು. ಹಾವೇರಿ ಜಿಲ್ಲೆಯ ಶಿಗ್ಗಾಂವ ತಾಲೂಕಿನ ಚಂದಾಪುರ, ಗದಗ ಜಿಲ್ಲೆಯ ಅಡವಿ ಸೋಮಪುರ, ನಾಗಾವಿತಾಂಡ, ಸಿಂಧನೂರು ತಾಲೂಕಿನ ಇಂದ್ರಪುರ, ತಾಳಿಕೋಟೆ ಹತ್ತಿರದ ಮಾರನಾಳ ತಾಂಡ ಮುದ್ದೇಬಿಹಾಳದ ತೋಣಸಿಹಾಳ, ರಾಜ್ಯದ ಹಲವು ಭಾಗಗಳಲ್ಲಿ ಲಂಬಾಣಿಗರ ತೊಡುಗೆಯನ್ನು ಮಾಡುವ 'ಸನಾರ್'(ಅಕ್ಕಸಾಲಿಗ) ಎಂಬ ಕುಟುಂಬಗಳಿವೆ. ಆದರೆ ಈಗ ಇವರ ಉದ್ಯೋಗಕ್ಕೆ ಕೊಡಲಿ ಪೆಟ್ಟು ಬಿದ್ದಂತೆ ಆಗಿದೆ.

ಕಾರಣ ಲಂಬಾಣಿ ಮಹಿಳೆಯರು ತಮ್ಮ ವೇಷಭೂಷಣ, ಉಡುಗೆತೊಡುಗೆಯ ಕಡೆ ಆಸಕ್ತಿ ಇಲ್ಲದೆ ಸೀರೆಯ ಸೆರಗಿನ ಕಡೆ ವಾಲಿರುವರು. ಇದರಿಂದ ಪಾರಂಪರಿಕವಾಗಿ ಬಂದಿರುವ ಈ ಉದ್ಯೋಗಕ್ಕೆ ಇಂದು ಬೆಲೆ ಇಲ್ಲದಂತಾಗಿದೆ. ಹಲವು ಮಂದಿ ಸನಾರ್(ಪತ್ತಾರ)ರು ತಮ್ಮ ಉದ್ಯೋಗ ತೊರೆದು ಬೇರೊಂದು ಉದ್ಯೋಗದಲ್ಲಿ ತೊಡಗಿದ್ದಾರೆ. ತಂದೆಯಿಂದ ಬಳುವಳಿಯಾಗಿ ಬಂದ ಕೆಲವು ಹಿರಿತಲೆಮಾರುಗಳೇ ಈ ಉದ್ಯೋಗದಲ್ಲಿ ತೊಡಗಿರುವರು. ಆದರೆ ಇವರ ಮಕ್ಕಳು ಬಹಳಷ್ಟು ಸನಾರ್(ಅಕ್ಕಸಾಲಿ) ಕೆಲಸದ ಕಡೆಗೆ ಆಸಕ್ತಿ ವಹಿಸುತ್ತಿಲ್ಲ.

ಚಿನ್ನ, ಬೆಳ್ಳಿ, ಕೆಲಸ ಮಾಡುವ ಅಕ್ಕಸಾಲಿಗರ ವೃತ್ತಿ ಇದಾಗಿದ್ದು, ಸಂಸ್ಕೃತದ 'ಸುವರ್ಣಕರ್'ನಿಂದ ಸುನಾರ್ ಉತ್ಪತ್ತಿಯಾಗಿದೆ. ಸುನಾರ್‌ಗಳು ಮೂಲತಃ ರಜಪೂತರ ವಂಶಸ್ಥರಾಗಿದ್ದು, ಒಂದು ಐತಿಹ್ಯದ ಪ್ರಕಾರ ಪರಶುರಾಮ ಕ್ಷತ್ರಿಯ ವಂಶದ ನಾಶಕ್ಕಾಗಿ ೨೧ ಬಾರಿ ಭೂಮಂಡಲವನ್ನು ಸುತ್ತುತ್ತಿರುವಾಗ ಸರಸ್ವತ ಬ್ರಾಹ್ಮಣನೊಬ್ಬ ಇಬ್ಬರು ರಜಪೂತ ಸಹೋದರರನ್ನು ರಕ್ಷಿಸಿದನೆಂದೂ, ಅವರಲ್ಲೊಬ್ಬ ಸುನಾರ್‌ಗಳ ಪೂರ್ವಜನೆಂದೂ, ಇನ್ನೊಬ್ಬ ಸಹೋದರನ ವಂಶಜರೇ ಕ್ಷತ್ರಿಯರೆಂದೂ ಹೇಳಲಾಗುತ್ತಿದೆ. ಕ್ಷತ್ರಿಯರ ಬಗ್ಗೆಯೂ ಇದೇ ರೀತಿಯ ಐತಿಹ್ಯವಿದ್ದರೂ ಅವರು ತಾವು ಸುನಾರ್‌ಗಳ ಸಹೋದರರೆಂದು ಹೇಳಿಕೊಳ್ಳುವುದಿಲ್ಲ. ಅಲ್ಲದೆ ಸರಸ್ವತ ಬ್ರಾಹ್ಮಣರು ಕ್ಷತ್ರಿಯರ ಜೊತೆಗೆ ಸಹಭೋಜನ ಮಾಡಿದಂತೆ ಸುನಾರ್‌ಗಳ ಜೊತೆ ಸಹಭೋಜನ ಮಾಡುವುದಿಲ್ಲವೆಂಬುದೂ ಸತ್ಯ.[೧೭]

ಕರ್ನಾಟಕದ ಅಥವಾ ದೇಶದ ಯಾವ ಬುಡಕಟ್ಟುಗಳು ಅಷ್ಟೊಂದು ಭಾರವಾದ ಆಭರಣಗಳು ಧರಿಸುತ್ತಿಲ್ಲವೆನಿಸುತ್ತದೆ. ವಿವಿಧ ವಿನ್ಯಾಸಗಳಿಂದ ಕೂಡಿದ ಇವರ ಆಭರಣಗಳು ನೋಡುಗರಿಗೆ ಆಶ್ಚರ್ಯವನ್ನುಂಟು ಮಾಡುತ್ತವೆ. ಯಾವುದೇ ರೀತಿಯ ಯಂತ್ರಗಳ ನೆರವಿಲ್ಲದೆ ಕೇವಲ ಕೈಯಿಂದಲೇ ಅಕ್ಕಸಾಲಿಗರು ಅಚ್ಚುಕಟ್ಟಾಗಿ ತಯಾರಿಸುವರು. ಈ ವಸ್ತುಗಳು ಯಂತ್ರಗಳೇ ನಾಚುವಂತೆ ವಿಶಿಷ್ಟ ಮಾದರಿಯಲ್ಲಿ ರಚನೆಯಾಗಿರುತ್ತದೆ. ಇತ್ತೀಚೆಗೆ ಲಂಬಾಣಿಗರಿಗಿಂತ ವಿದೇಶಿಯರಿಗೆ ಈ ವಸ್ತುಗಳು ಹೆಚ್ಚು ಆಕರ್ಷಿತವಾಗುತ್ತಿವೆ. ಪ್ರವಾಸಿ ತಾಣಗಳಲ್ಲಿ ಈ ಆಭರಣಗಳು ಮಾರಾಟವಾಗುತ್ತಲಿದೆ. ಯುವತಿಯರು ಸಾಮಾನ್ಯವಾಗಿ ಈ ಆಭರಣಗಳನ್ನು ಧರಿಸುವುದಿಲ್ಲ. ಮದುವೆ ಆದ ಮೇಲೆ ಕಿವಿ, ಮೂಗು, ಕೈ, ಬೆರಳು, ಕೊರಳು, ನಡು(ಸೊಂಟ), ಕಾಲು, ತಲೆಯ ಕೂದಲು ಇತ್ಯಾದಿ ಭಾಗಗಳ ಮೇಲೆ ಧರಿಸುವರು. ಕೆಲವು ಉಡುಗೆ ಮೇಲೆ ಈ ಎಲ್ಲಾ ಆಭರಣಗಳನ್ನು ವ್ಯವಸ್ಥಿತವಾಗಿ ಆಯಾ ಭಾಗದ ಮೇಲೆ ಜೋಡಿಸುವರು.

---

೧೭. ಆರ್. ವಿ. ರಸಲ್, ೧೯೧೬, **ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್ ಆಫ್ ದಿ ಸೆಂಟ್ರಲ್ ಪ್ರಾವಿನ್ಸಸ್ ಆಫ್ ಇಂಡಿಯಾ, ಸಂಪುಟ-೧,** ಆರ್.ಬಿ.ಹೆಚ್. ಪ್ರಕಾಶನ, ಪು. ೫೧೭.

ಅಷ್ಟು ಭಾರವಾದ ತೊಡುಗೆಯನ್ನು ತೊಟ್ಟು ಲಂಬಾಣಿ ಮಹಿಳೆಯರು ವಿಶಿಷ್ಟ ರೀತಿಯಿಂದ ಶೋಬಿಸುತ್ತಾರೆ. ಇವರು ಧರಿಸುವ ಆಭರಣಗಳನ್ನು ಗಮನಿಸಿದ ವಿದ್ವಾಂಸರು "Their dress is peculiar, and their ornaments are so singularly chosen that we have, we are confident, seen women who had eight or ten pounds weight in metal or ivory round their arms and leg's".[೧೮] ಪುರುಷರಿಗಿಂತ ಮಹಿಳೆಯರೇ ಹೆಚ್ಚಾಗಿ ಈ ರೀತಿಯ ಆಭರಣಗಳನ್ನು ಧರಿಸುವರು. ಪುರುಷರು ಓಲೆ, ಕಡಗ, ಉಂಗುರದಂತಹ ಸಾಮಾನ್ಯ ವಸ್ತುಗಳನ್ನು ತೊಡುವರು.

ಲಂಬಾಣಿಗರಲ್ಲೇ ಒಂದು ಉಪಪಂಗಡವಾದ ಸನಾರ್(ಅಕ್ಕಸಾಲಿ) ಸಮುದಾಯ ಎಲ್ಲಾ ರೀತಿಯ ಆಭರಣಗಳನ್ನು ತಯಾರಿಸುವರು. ಈ ಉಪಪಂಗಡವು ಲಂಬಾಣಿಗರಿಂದ ಭಿನ್ನವಾಗಿದ್ದು ಇವರ ಭಾಷೆ, ಆಚಾರವಿಚಾರಗಳಲ್ಲಿ ಬೇರೆಯಾಗಿರುವರು. ಹೆಚ್ಚಾಗಿ ಹೆಣ್ಣು ದೇವತೆಯ ಆರಾಧಕರು. ಕಾಳಿಕಾದೇವಿ, ಮರಿಯಮ್ಮ ಮುಂತಾದ ದೇವತೆಯನ್ನು ಆರಾಧಿಸುವರು. ಲಂಬಾಣಿಗರಂತೆ ಇವರೂ ಸಹ ಮಾಂಸಾಹಾರಿಗಳು. ಇವರ ಮೂಲ ಕಸಬು ಅಕ್ಕಸಾಲಿಕೆ. ತಾವು ತಯಾರಿಸಿದ ವಸ್ತುಗಳನ್ನು ತಾಂಡಾಗಳಿಗೆ ಹೋಗಿ ಮಾರುತ್ತಿದ್ದರು. ಇವುಗಳಿಂದಲೇ ಇವರ ಉಪಜೀವನ ನಡೆಯುವುದು.

ಮೂಲತಃ ಗುಜರಾತ್, ರಾಜಸ್ಥಾನ ಮೂಲದವರಾದ ಈ ಅಕ್ಕಸಾಲಿಗರು ಲಂಬಾಣಿ ಸಮುದಾಯದ ಒಂದು ಕವಲಾಗಿರಬಹುದು. ಅಲೆಮಾರಿಗಳಾದ ಲಂಬಾಣಿಗರಲ್ಲೇ ನಾವಿ(ಹಜಾಮರು), ಸನಾರ್(ಅಕ್ಕಸಾಲಿ), ಢಾಡಿ(ಸಂಗೀತಗಾರರು) ಇದ್ದಾರೆ. ಉದ್ಯೋಗದ ಹಿನ್ನೆಲೆಯಲ್ಲಿ ಈ ಪಂಗಡಗಳು ಬೇರೆ ಬೇರೆ ಆಗಿರಲು ಸಾಧ್ಯತೆಗಳಿವೆ. ಆದರೆ ಇವರ ಒಳ ಬೆಡಗುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಲಂಬಾಣಿಗರಿಂದ ಬೇರೆ ರೀತಿಯಲ್ಲಿದೆ. ಲಂಬಾಣಿಗರಿಗಿಂತ ನಾವು ಮೇಲು ಎಂಬ ಭಾವನೆ ಇವರಲ್ಲಿದೆ. ಊಟೋಪಚಾರದಂತಹ ಹಲವು ಅಂಶಗಳಲ್ಲಿ ನಾವು ಮೇಲು ಎಂಬ ಭಾವನೆ ಇವರಲ್ಲಿದೆ. ಊಟೋಪಚಾರ ಪರಸ್ಪರಲ್ಲಿ ಈ ಹಿಂದೆ ನಡೆಯುತ್ತಿರಲಿಲ್ಲ, ಆದರೆ ಈಗ ನಡೆಯುತ್ತಿದೆ. ಆದರೆ ಕೊಡುಕೊಳ್ಳುವಿಕೆ ಇವರಲ್ಲಿ ನಿಷೇಧವಿದೆ. ಮದುವೆಯ ಆಚಾರವಿಚಾರಗಳಲ್ಲಿ ಲಂಬಾಣಿ ಗರಿಗಿಂತ ಇವರಲ್ಲಿ ಅಧಿಕ ಭಿನ್ನತೆ ಗೋಚರಿಸುತ್ತದೆ.

ಅಕ್ಕಸಾಲಿಗರು ತಮಗೆ ಬೇಕಾದ ಒಡವೆಗಳನ್ನು ಜರ್ಮನ್ ಸಿಲ್ವರ್‌ನಿಂದ ತಯಾರಿಸುವರು. ಅವುಗಳನ್ನು ತಮ್ಮ ಜಾಣ್ಮೆಯಿಂದ ಕತ್ತರಿಸಿ ಕರಗಿಸಿ ವಿವಿಧ ಆಕಾರದ

---

೧೮. Edgar Thurston, 1987, **Caste and Tribes of Southern India**, Page-211.



## ಆಭರಣ ತಯಾರಿಕೆಯಲ್ಲಿ ತೊಡಗಿರುವ ಸನಾರ(ಅಕ್ಕಸಾಲಿಗರು)



ಸುರತರಾಮ ಮೋತಿರಾಮ ಪತ್ತಾರ



ಬಾಬು ಜಿವಲಪ್ಪಾ ಪತ್ತಾರ





ಬಾಬುಸಿಂಗ್ ನಾಮದೇವ ಪತ್ತಾರ



## ಆಭರಣ ತಯಾರಿಕೆಯಲ್ಲಿ ತೊಡಗಿರುವ ಸನಾರ(ಅಕ್ಕಸಾಲಿಗರು)





ಮುರಳಿ ಪತ್ತಾರ









ಆಭರಣ ತಯಾರಿಕೆಯಲ್ಲಿ ನಿರತರಾಗಿರುವ ಮಹಿಳೆಯರು















**ಆಭರಣ ತಯಾರಿಕೆಯಲ್ಲಿ ನಿರತರಾಗಿರುವ ಮಹಿಳೆಯರು**









## ಆಭರಣ ತಯಾರಿಕೆಯಲ್ಲಿ ನಿರತರಾಗಿರುವ ಮಹಿಳೆಯರು



















ಆಭರಣ ತಯಾರಿಕೆಯಲ್ಲಿ ಬಳಸುವ ವಿವಿಧ ಬಗೆಯ ವಸ್ತುಗಳು

ಒಡವೆಗಳನ್ನು ತಯಾರಿಸುವರು. ಈಗ ಹಲವು ತಾಂಡಗಳಲ್ಲಿ ಮಹಿಳೆಯರು ತಮ್ಮ ಉಡುಗೆ ತೊಡುಗೆಯ ಕಡೆಗೆ ಆಸಕ್ತಿ ಇಲ್ಲದಂತಾಗಿದ್ದಾರೆ. ಹೀಗಾಗಿ ಈ ಸಮುದಾಯದ ಮಹಿಳೆಯರನ್ನು ನಂಬಿ ಬದುಕುತ್ತಿದ್ದ ಲಂಬಾಣಿ ಅಕ್ಕಸಾಲಿಗರ ಉದ್ಯೋಗ ಇಂದು ಮರೆಯಾಗುವ ಹಂತದಲ್ಲಿದೆ.

ಪ್ರಸ್ತುತ ಸಂದರ್ಭದಲ್ಲಿ ಕೆಲವು ಅಕ್ಕಸಾಲಿಗ ಕುಟುಂಬಗಳು ಆಧುನಿಕವಾಗಿ ತಯಾರಾಗುವ ಕಾಲಿನ ಚೈನು, ಉಂಗುರ, ಸೊಂಟಪಟ್ಟಿ, ಕೊರಳ ಚೈನು, ಕಾಲುಂಗರ ಹೀಗೆ ನವೀನ ಮಾದರಿಯಲ್ಲಿ ಜರ್ಮನ್ ಸಿಲ್ವರ್‌ನಿಂದ ತಯಾರಿಸಿ ಮಾರುಕಟ್ಟೆಯಲ್ಲಿ ಮಾರುವರು. ಬಿಜಾಪುರದ ಸಂತೆಯ ಒಂದು ಬೀದಿಯಲ್ಲಿ(ಸನಾರ್ ಬಜಾರ್) ತಾವು ತಯಾರಿಸಿದ ವಿವಿಧ ಮಾದರಿಯ ವಸ್ತುಗಳನ್ನು ಮಾರುವರು. ಇವರು ಶ್ರಮವಹಿಸಿ ಮಾಡಿದ ಪರಿಕರಗಳಿಗೆ ಹೆಚ್ಚು ಬೆಲೆ ಇಲ್ಲ. ಕ್ಷೇತ್ರಕಾರ್ಯದ ಅವಧಿಯಲ್ಲಿ ಇವರನ್ನು ವಿಚಾರಿಸಿದಾಗ ಇವರು ತಮ್ಮ ಪೂರ್ವಜರನ್ನು ಶಪಿಸುವರು. ಏಕೆಂದರೆ ಅವರು ಈ ರೀತಿಯಲ್ಲಿ ತಯಾರಿಸಿದ ವಸ್ತುಗಳನ್ನು ಬೆಳ್ಳಿ, ಬಂಗಾರದಂತೆ ಮಾರಿದ್ದರೆ. ಇಂದು ಈ ವಸ್ತುಗಳಿಗೆ ಬೆಲೆ ಬರುತ್ತಿತ್ತು. ಆದರೆ ಬೆಳ್ಳಿ, ಬಂಗಾರದ ರೀತಿಯಲ್ಲಿ ಈ ಆಭರಣಗಳನ್ನು ಮಾರಲಿಲ್ಲ. ಹೀಗಾಗಿ ಮಾರುಕಟ್ಟೆಯಲ್ಲಿ ಈ ವಸ್ತುಗಳಿಗೆ ಬೆಲೆ ಇಲ್ಲವೆನ್ನುವರು.

ಈ ಉದ್ಯೋಗವನ್ನು ಹಿರಿಯ ತಲೆಮಾರುಗಳು ಮಾತ್ರ ಮಾಡುತ್ತಿವೆ. ತಮ್ಮ ಮಕ್ಕಳಿಗೆ ಶಿಕ್ಷಣ ನೀಡಿ ಬೇರೆ ಬೇರೆ ಉದ್ಯೋಗದಲ್ಲಿ ತೊಡಗಿಸಿದ್ದಾರೆ. ಅಲ್ಲದೇ ಬೆಳ್ಳಿ ಬಂಗಾರ ಮಾರುವ ಮಾರವಾಡಿಗಳಿಂದ ಕೆಲವೊಂದು ವಸ್ತುಗಳನ್ನು ಆರ್ಡರ್ ಪಡೆದು ಕೆಲವೇ ವಸ್ತುಗಳನ್ನು ಅವರಿಗೆ ಮಾಡಿಕೊಡುವರು. ಆದರೂ ಇವರಿಗೆ ಕುಟುಂಬ ನಿರ್ವಹಿಸಲು ಈ ಉದ್ಯೋಗ ಸಾಕಾಗುತ್ತಿಲ್ಲ.

ಇವರು ಜರ್ಮನ್ ಸಿಲ್ವರ್‌ನಿಂದ ತಯಾರಿಸಿದ ಆಧುನಿಕ ತೊಡುಗೆಗಳಾದ ಚೈನ್, ಕಾಲುಂಗುರ, ಉಂಗುರ, ಸರ ಮುಂತಾದ ವಸ್ತುಗಳನ್ನು ಜೋಗ್ಯಾರು ಇವರಿಂದ ಕೊಂಡುಕೊಂಡು ಹಳ್ಳಿಗಳಿಗೆ ಹೋಗಿ ಮಾರುವ ಒಂದು ಪದ್ಧತಿಯು ಕ್ಷೇತ್ರಕಾರ್ಯದಿಂದ ಕಂಡುಬಂದಿದೆ. ಇವರು ತಮ್ಮ ಕೆಲಸ ಕಾರ್ಯ ಮಾಡಲು ಹತೋಡ, ಕತ್ತರಿ, ನೇಯಿ, ಪಕ್ಕಡ, ಸುಳಾ, ಗಿರಿಮಟ, ತಾತ, ಸಿಲ್ವರ್, ಜರ್ಮನ್‌ರಾಂಗೊ, ಪಿತ್ತಲ ಹಾಗೂ ಹೀಟರ್ ಮುಂತಾದ ಸಲಕರಣೆಗಳನ್ನು ಬಳಸುವರು.

ಅಕ್ಕಸಾಲಿಗರಿಂದ ತಯಾರಾದ ಮೂಲವಸ್ತುಗಳು ಆಕರ್ಷಕವಾಗಿ ಕಾಣಲು ಈ ಕೆಳಗಿನ ವಸ್ತುಗಳನ್ನು ಬಳಸುವರು. ೧. ತೇಜಾಬ ತೈಲ, ೨. ಬೆಳಗು ಎಣ್ಣೆ(acid), ೩. ಸೈನಾ ಪೊಟಾಷಿಯಂ, ೪. ಚಾಂದಿ(ಬೆಳ್ಳಿ) ಇವುಗಳ ಮೂಲಕ ಒಂದು ಹೊಚ್ಚ ಹೊಸ ನವೀನ ಮಾದರಿಯಲ್ಲಿ ತಯಾರಿಸಿ ಮಾರುಕಟ್ಟೆಯಲ್ಲಿ ಮಾರುವರು. ವ್ಯವಸ್ಥಿತವಾಗಿ

ತಯಾರಾಗುವ ಇವರ ಒಡವೆಗಳು ಆಧುನಿಕರನ್ನು ಸಹ ನಿಬ್ಬೆರಗಾಗಿಸುತ್ತವೆ. ಆದರೆ ಕೆಲವೊಂದು ಆಭರಣಗಳ ವಿವರಗಳನ್ನು ಈ ಕೆಳಗಿನಂತಿ ವಿವರಿಸಲಾಗಿದೆ.

೧. ಟೋಪ್ಲಿ
೨. ಘುಗ್ರಿ
೩. ಚಡಿ ಟೋಪ್ಲಿ
೪. ಘುಂಗಟೊ
೫. ಲಟಕನ
೬. ಹಾಂಸಲಿ(ಕೊರಳಹಾರ)
೭. ವಾಂಕ್ಯಾ(ಅರ್ಧಚಂದ್ರಹಾರ)
೮. ಕಸೋಟ್ಯಾ
೯. ಚೂಡಿ
೧೦. ಆಟನಾ, ಪಾವಲಾ (ಕೈಯಲ್ಲಿ ಹಾಕುವ ಎಂಟಾಣೆ, ನಾಲ್ಕಾಣೆಯ ಉಂಗುರ)
೧೧. ಅಂಗುತಲಾ (ಕಾಲಿನ ಒಡವೆ)
೧೨. ಛಡ ಆಟನಾ (ಹೆಬ್ಬೆರಳಿಗೆ ಹಾಕುವ ಒಡವೆ)
೧೩. ಪಾವಲಾರ ಹಾರ (ನಾಲ್ಕಾಣೆ ನಾಣ್ಯದ ಸರ)
೧೪. ವಾಂಕಡಿ
೧೫. ಕಸ್ಸೆ
೧೬. ರುಳಿ
೧೭. ಭೂರಿಯಾ (ನತ್ತು)
೧೮. ಆಡಿ ಸಾಕಳಿ (ಕೂದಲಿಗೆ ಹಾಕುವ ಸರ)
೧೯. ಕನಿಯಾ (ಕಿವಿ ಓಲೆ)
೨೦. ಪಾನಾ ಘುಗ್ರಿ
೨೧. ಮಣಕ (ಪಟಿಯಾ)
೨೨. ಝೂಂಜರಿ (ಕಾಲಿಗೆ ಹಾಕುವ ಒಡವೆ)
೨೩. ಚಟಕಿ(ಕಾಲುಂಗುರು)
೨೪. ಪಿನ್ನೆ (ಕಾಲಿನ ಬೆರಳಿಗೆ ಹಾಕುವ ಒಡವೆ)
೨೫. ಪಾಟ್ಲಿ
೨೬. ಕೊಲ್ಡಾ (ಕಾಲಿಗೆ ಹಾಕುವ ಕಡಗ)
೨೭. ಬಿಚವಾ(ವಿಚವಾ)
೨೮. ಪಾನಾಸರ
೨೯. ಪುಲಾ
೩೦. ಬೇಡಿ (ಕೈಯಲ್ಲಿ ಬಳೆ)
೩೧. ಡಾಬಾ (ಸೊಂಟದ ಪಟ್ಟಿ)

**ಟೋಪ್ಲಿ**

ಮಹಿಳೆಯರ ಕೆನ್ನೆಗಳ ಎರಡು ಬದಿಯ ಕೂದಲುಗಳಿಗೆ ಈ 'ಟೋಪ್ಲಿ' ಎಂಬ ತೊಡುಗೆಯನ್ನು ಹಾಕುವರು. ಈ ರೀತಿಯ ಆಭರಣ ಕೂದಲೊಂದಿಗೆ ಸೇರಿಸಿ ಕಟ್ಟಿರುತ್ತಾರೆ.

ಇದನ್ನು ಮದುವೆಯಾದ ಮಹಿಳೆಯರು ಮಾತ್ರ ಸತತವಾಗಿ ಹಾಕಿಕೊಳ್ಳುವರು. ಆಗೊಮ್ಮೆ ಈಗೊಮ್ಮೆ ಹಬ್ಬಹರಿದಿನಗಳಲ್ಲಿ ಕೆಲವೊಂದು ಯುವತಿಯರೂ ಸಹ ಈ ಟೋಪ್ಲಿಯನ್ನು ತೊಡುತ್ತಾರೆ. ಹೆಚ್ಚಾಗಿ ಜರ್ಮನ್ ಸಿಲ್ವರ್‌ಗಳಿಂದ ಈ ಆಭರಣವನ್ನು ಲಂಬಾಣಿ ಅಕ್ಕಸಾಲಿಗರು ತಯಾರಿಸುವರು. ಕೆಲವು ಶ್ರೀಮಂತರು ಬೆಳ್ಳಿಯಿಂದಲೂ ಈ ಆಭರಣವನ್ನು ಮಾಡಿಸಿ ಹಾಕಿಕೊಳ್ಳುವರು. ಈ ಟೋಪ್ಲಿ ಎಂಬ ಆಭರಣವು ಗುಂಡಿ, ಟೋಪ್ಲಿ, ಸಾಕಳಿ(ಚೈನ್), ಘುಗ್ರ(ಗೆಜ್ಜೆ) ಇವುಗಳಿಂದ ಕೂಡಿರುತ್ತದೆ. ನೋಡಲು ಸುಂದರವಾಗಿರುವ ಈ ತೊಡುಗೆ ಇವರಿಗೆ ಮಹತ್ವದಾಗಿದೆ.

**ಘುಗ್ರಿ**

ಲಂಬಾಣಿ ಮಹಿಳೆಯರ ಮುತ್ತೈದೆಯ ಸಂಕೇತವಾದ 'ಘುಗ್ರಿ'ಯು ಮಹತ್ವದ ಆಭರಣವಾಗಿದೆ. ಕಳಸ, ಸುತ, ನಾಕಾ, ಇವು ಇದರ ಭಾಗಗಳು. ಮಹಿಳೆಯರು ಇದನ್ನು ಟೋಪ್ಲಿಯೊಂದಿಗೆ ಸೇರಿಸಿ ಕೆನ್ನೆಯ ಹತ್ತಿರ ಕೂದಲೊಂದಿಗೆ ಹಾಕಿಕೊಳ್ಳುವರು. ಇಲ್ಲಿ ಕೂದಲಿನ ಸುಮಾರು ಏಳು, ಎಂಟು ಎಳೆಗಳಿಂದ ಚಿಕ್ಕ ಚಿಕ್ಕ ಜಡೆ ಕೆನ್ನೆಯ ಎರಡು ಬದಿಗೆ ಹೆಣೆದು ಅದನ್ನು ಹಿಂದಕ್ಕೆ ತೆಗೆದುಕೊಂಡು ಅನಂತರ ಎಲ್ಲಾ ಕೂದಲನ್ನು ಒಟ್ಟು ಸೇರಿಸಿ ಜಡೆಯಲ್ಲಿ ಹೆಣೆಯುವರು. ಹೀಗೆ ಚೊಟ್ಲಾವನ್ನು ಕಟ್ಟಿಕೊಳ್ಳುತ್ತಾರೆ. ಗಂಡ ಸತ್ತ ನಂತರ ಈ ಘುಗ್ರಿಯನ್ನು ತೆಗೆದು ಹಾಕುವರು. ಇವುಗಳ ಮೂಲಕ ಮುತ್ತೈದೆ ಮತ್ತು ವಿಧವೆಯರನ್ನು ಕಂಡುಹಿಡಿಯಲು ಸಾಧ್ಯವಾಗುತ್ತದೆ.

**ವಾಂಕ್ಯಾ(ಅರ್ಧಚಂದ್ರಹಾರ)**

ಬುಡಕಟ್ಟು ಸಮುದಾಯದಲ್ಲಿ ಅನೇಕ ಸಮುದಾಯಗಳು ಈ 'ವಾಂಕ್ಯಾ' ಎಂಬ ಕೊರಳಿನ ಹಾರವನ್ನು ಧರಿಸುವರು. ಆದರೆ ಇದನ್ನು ವಿಶೇಷವಾಗಿ ವಿನ್ಯಾಸಗೊಳಿಸಿ ಲಂಬಾಣಿ ಮಹಿಳೆಯರು ತಮ್ಮ ಕೊರಳಿಗೆ ಹಾಕಿಕೊಳ್ಳುವರು. ಅರ್ಧಚಂದ್ರಾಕೃತಿಯಿಂದ ಕೂಡಿದ ಈ ಹಾರವು ಚೈನಿ(ಸಾಕಳಿ)ನೊಂದಿಗೆ ಕೊರಳಲ್ಲಿ ಹಾಕಿಕೊಳ್ಳುವರು. ಈ ಪದಕವನ್ನು ಅಕ್ಕಸಾಲಿಗರು ವಿವಿಧ ವಿನ್ಯಾಸಗಳಿಂದ ಅಲಂಕರಿಸುವರು. ಇದರ ಎರಡು ತುದಿಯ ಮೇಲ್ಭಾಗವನ್ನು ಕಳಸ, ಅಲಂಕಾರಕ್ಕಾಗಿ ಗೆಜ್ಜೆ, ಸುತ, ನಾಕಾ ಹಾಕಿರುವರು. ಅಲ್ಲದೆ ಕೆಳಗಡೆಗೆ ನಾಲ್ಕಾಣೆ(ಪಾವಲಾ)ಯ ಸರಗಳನ್ನು ಹಾಕಿರುವರು. ಅಲ್ಲದೆ ಅವುಗಳಿಗೆ ತಿತ್ತರಿ, ಸಾಕಳಿ(ಚೈನ್), ಘುಗ್ರ(ಗೆಜ್ಜೆ)ಗಳಿಂದ ಸುಂದರವಾಗಿ ಕಾಣುವಂತೆ ಕೈಯಿಂದಲೇ ಇದನ್ನು ತಯಾರಿಸುವರು. ಇದರ ಬೆಲೆ ಸುಮಾರು ಆರುನೂರರಿಂದ ಸಾವಿರ ರೂಪಾಯಿಗಳವರೆಗೆ ಮಾರುಕಟ್ಟೆಯಲ್ಲಿರುತ್ತದೆ.

ಅತ್ಯಂತ ಸುಂದರವಾಗಿ ರೂಪಿಸಿರುವ ವಾಂಕ್ಯಾವನ್ನು ಈಗಿನ ಮಹಿಳೆಯರು ಯಾರು ಅದನ್ನು ಕೊರಳಲ್ಲಿ ಹಾಕಲಾರರು. ಪ್ರಾಚೀನ ಈ ಕಲಾ ಮಾದರಿಯನ್ನು







ಘುಗ್ರಿ (ಲಂಬಾಣಿಗರ ತಾಳಿ)



ಇಂದು ಲಂಬಾಣಿ ಅಕ್ಕಸಾಲಿಗರು ಅವುಗಳಿಗೆ ಆಧುನಿಕ ತೊಡುಗೆಯ ರೂಪ ನೀಡಿ ಮಾರುಕಟ್ಟೆಯಲ್ಲಿ ಮಾರುತ್ತಿದ್ದಾರೆ. ಆದರೆ ಅವುಗಳನ್ನು ಕೊಳ್ಳುವವರು ವಿದೇಶಿ ಪ್ರವಾಸಿಗರು. ಲಂಬಾಣಿ ಕುಟುಂಬದಲ್ಲಿ ಹಿರಿತಲೆ ಮಹಿಳೆಯರು ಹಾಕಿ ಬಿಟ್ಟಿರುವ ಅರ್ಧಚಂದ್ರಾಕೃತಿಯ ವಾಂಕ್ಯಾವು(ಕೊರಳಲ್ಲಿ ಹಾಕುವ ಅರ್ಧಚಂದ್ರಾಕೃತಿಯ ಹಾರ) ಇಂದು ಪಳೆಯುಳಿಕೆಗಳಾಗಿ ಉಳಿದುಕೊಂಡಿವೆ. ಕೆಲವೊಂದು ವಾಂಕ್ಯಾವು ವಸ್ತು ಸಂಗ್ರಾಹಲಯಗಳಲ್ಲಿ ಪ್ರದರ್ಶನಗಳಿಗೆ ಮುಖ ಮಾಡಿವೆ. ಸೂಕ್ಷ್ಮ ಮಾದರಿಯಲ್ಲಿ ರಚನೆಯಾದ ಈ ತೊಡುಗೆಯನ್ನು ಮಾಡಲು ಅಕ್ಕಸಾಲಿಗೆ ತುಂಬಾ ಸಮಯ ಬೇಕಾಗುತ್ತದೆ. ನಾಲ್ಕಾಣೆ ಜೋಡಿಸಿ, ಅವುಗಳಿಗೆ ಗೆಜ್ಜೆಯನ್ನು ಅಂಟಿಸುವರು. ಈ ಹಾರವನ್ನು ಧರಿಸಿ ನಡೆದರೆ ಅವುಗಳ ಗೆಜ್ಜೆಯ ನಾದ ಕೇಳುಗರಿಗೆ ಹಿತವನ್ನುಂಟು ಮಾಡುವುದು.

**ಹಾಂಸಲಿ(ಕೊರಳ ಹಾರ)**

ಲಂಬಾಣಿ ಮಹಿಳೆಯರು ಕೊರಳಲ್ಲಿ ಧರಿಸುವ ಮಹತ್ವದ ಆಭರಣಗಳಲ್ಲಿ 'ಹಾಂಸಲಿ'ಯು ಒಂದಾಗಿದೆ. ಇದು ವೃತ್ತಾಕಾರವಾಗಿದ್ದು ಕೆಳಗಡೆ ಪಾವಲಿ ನಾಲ್ಕಾಣೆ ಹೆಗಡಿಗಳಿಂದ ವಿವಿಧ ವಿನ್ಯಾಸದಲ್ಲಿ ತಯಾರಿಸಲಾಗುತ್ತದೆ. ಈ ಹಾಂಸಲಿಯ ಜೊತೆಗೆ ತೀತ್ರಿಯನ್ನು ಜೋಡಿಸುವರು. ಈ ತೀತ್ರಿಯ ಕೆಳಗಡೆ ಸಾಕಳಿ(ಚೈನ್) ಅದರೊಂದಿಗೆ ಘುಗ್ರಾ(ಗೆಜ್ಜೆ)ವನ್ನು ವ್ಯವಸ್ಥಿತವಾಗಿ ಜೋಡಿಸಿರುವರು. ಈ ತೀತ್ರಿಯ ನಡುನಡುವೆ ನಾಕಾವನ್ನು ಜೋಡಿಸುವರು. ಈ ಹಾಂಸಲಿಯು ಸುಮಾರು ೮೦೦ರಿಂದ ೧೦೦೦ ರೂಪಾಯಿಗಳವರೆಗೆ ಬೆಲೆ ಬಾಳುತ್ತದೆ. ಇದನ್ನು ವಿವಿಧ ಆಕಾರಗಳಿಂದ ವಿನ್ಯಾಸಗೊಳಿಸಿ ಆಧುನಿಕ ಜನರ ಮನಸೆಳೆಯುವಂತೆ ಲಂಬಾಣಿ ಅಕ್ಕಸಾಲಿಗರು ತಯಾರಿಸುತ್ತಾರೆ. ಜರ್ಮನ್ ಸಿಲ್ವರ್‌ನಿಂದ ಇದನ್ನು ತಯಾರಿಸುತ್ತಾರೆ. ಇತ್ತೀಚೆಗೆ ಲಂಬಾಣಿ ಮಹಿಳೆಯರಿಗೆ ಈ ಆಭರಣದ ಕಡೆಗೆ ಆಸಕ್ತಿ ಇಲ್ಲದಂತಾಗಿದೆ. ಆದರೆ ವಿದೇಶಿ ಗ್ರಾಹಕರ ಮನಸೆಳೆಯುವಲ್ಲಿ ಮಹತ್ವದವುಗಳಾಗಿ ಪರಿಣಮಿಸಿವೆ.

ವಯಸ್ಸಾಗಿರುವ ಹಿರಿ ಅಜ್ಜಿಯರಿಗೆ ಮಾತ್ರ ಈ ಹಾಂಸಲಿ ಸೀಮಿತವಾಗಿವೆ. ಕೊರಳಲ್ಲಿ ಇವುಗಳ ಭಾರ ತಾಳಲಾರದೆ ಇಂದು ಇವು ಪೆಟ್ಟಿಗೆಯ ಒಳಗೆ ಉಸಿರುಗಟ್ಟಿವೆ. ತಾಂಡಾಗಳಲ್ಲಿ ಇವುಗಳನ್ನು ಹಣ ಕೊಟ್ಟು ಕೊಂಡುಕೊಳ್ಳುವ ಸಂಸ್ಕೃತಿಭಂಜಕರು ಸೃಷ್ಟಿಯಾಗುತ್ತಿದ್ದಾರೆ. ಇವರು ಇವುಗಳನ್ನು ಕಡಿಮೆ ಬೆಲೆಗೆ ಕೊಂಡುಕೊಂಡು ವಿದೇಶಿ ವ್ಯಕ್ತಿಗಳಿಗೆ ಹೆಚ್ಚಿನ ಹಣಕ್ಕೆ ಮಾರುವರು. ಈ ರೀತಿಯಲ್ಲಿ ಸಂಸ್ಕೃತಿಯನ್ನು ಮಾರಿಕೊಳ್ಳುವ ದುಷ್ಟ ಜನರು ಲಂಬಾಣಿಗರಲ್ಲಿ ಕಂಡುಬರುವರು. ಇವರು ಇವರ ಉಡುಗೆ ತೊಡುಗೆಯನ್ನು ಕಡಿಮೆ ಬೆಲೆಗೆ ಖರೀದಿಸಿ ವಿದೇಶಿಗರಿಗೆ ಹೆಚ್ಚಿನ ಬೆಲೆಗೆ ಮಾರುವರು.

**ಬಾಜುಬಂದ(ಪಾಟ್ಲೆ)**

ಇದು ಮಹಿಳೆಯರು ತಮ್ಮ ಕೈಯಲ್ಲಿ ಧರಿಸುವ ಗೆಜ್ಜೆಯಿಂದ ಕೂಡಿದ ಬಳೆಯಾಗಿದೆ. ಇದನ್ನು ಸಹ ಜರ್ಮನ್ ಸಿಲ್ವರ್‌ನಿಂದ ತಯಾರಿಸಲಾಗುತ್ತದೆ. ಇದನು ನಾಕಾ, ಘುಗ್ರ(ಗೆಜ್ಜೆ),





ಪಾಟ್ಲೆ



ಬಾಜುಬಂದ (ತೋಳಬಂದಿ)





ಸಾಕಳಿ(ಚೈನ್) ಇವುಗಳೆಲ್ಲವನ್ನು ಈ ಬಾಜುಬಂದಿನ ಮೇಲೆ ಜೋಡಿಸಿರುವರು. ಇದನ್ನು ತೋಳುಬಳೆ ಹಾಗೂ ಮುಂಗೈಯಲ್ಲೂ ಹಾಕಿಕೊಳ್ಳುವರು.

ಚಿಕ್ಕ ಚಿಕ್ಕ ಗೆಜ್ಜೆಯನ್ನು ಒಂದರ ಪಕ್ಕದಲ್ಲಿ ಒಂದಂತೆ ಜೋಡಿಸಿ ವೃತ್ತಾಕಾರದಲ್ಲಿ ಬಳೆಯ ರೂಪದಲ್ಲಿ ತಯಾರಿಸುವರು. ಲಂಬಾಣಿಗರು ಹಾಕುವ ಕೈ ಬಳೆ(ಬಲ್ಯ)ಯ ಜೊತೆಗೆ ಮುಂಗೈಯಲ್ಲಿ ಇದನ್ನು ಹಾಕಿಕೊಳ್ಳುವರು. ನೃತ್ಯ ಮಾಡುವ ವೇಳೆಗೆ ಈ ಗೆಜ್ಜೆಯಿಂದ ಕೂಡಿದ ಪಾಟ್ಲ(ಬಳೆ) ಮನಸ್ಸಿಗೆ ಹೆಚ್ಚು ಹುಮ್ಮಸನ್ನು ತರುತ್ತದೆ.

**ಪಾವಲಾರ ಹಾರ(ನಾಲ್ಕಾಣೆ ರೂಪಾಯಿ ಸರ)**

ಕರ್ನಾಟಕದ ಹಲವು ಬುಡಕಟ್ಟು ಮಹಿಳೆಯರು ಈ 'ಪಾವಲಾರ'(ನಾಲ್ಕಾಣಿ) ಸರವನ್ನು ಕೊರಳಲ್ಲಿ ಹಾಕಿಕೊಳ್ಳುವರು. ಅದರಲ್ಲೂ ಲಂಬಾಣಿ ಮಹಿಳೆಯರು ಇದನ್ನು ವಿವಿಧ ವಿನ್ಯಾಸಗಳಿಂದ ಮಾಡಿಸಿ ಕೊರಳಲ್ಲಿ ಧರಿಸುವರು. ಇದರಲ್ಲಿ ನಾಲ್ಕಾಣೆ ಸರ, ಎಂಟಾಣೆ ಸರ ರಪಿಯಾರ ಹಾರ(ಸರ) ಎಂದು ವಿಭಾಗಿಸುವರು. ಈ ಸರದ ಕೆಳಗಡೆ ಒಂದು ರೂಪಾಯಿಯನ್ನು ಜೋಡಿಸಿರುವರು. ಅದಕ್ಕೆ ರಪಿಯಾ ಎನ್ನುವರು. ಈ ಒಂದು ರೂಪಾಯಿಯ ಕೆಳಗಡೆ ಸಾಕಳಿ(ಚೈನ್), ಘುಗ್ರ(ಗೆಜ್ಜೆ) ಹಾಗೂ ಪಾವಲಾಗಳನ್ನು ಜೋಡಿಸಿರುತ್ತಾರೆ. ಸರಗಳ ಒಳಗಡೆ ಅಲ್ಲಲ್ಲಿ ಬೊಗಳಿ(ಕೊಳವೆ)ಗಳನ್ನು ಹಾಕಿರುವರು. ಕೆಲವು ಸ್ತ್ರೀಮಂತ ಮಹಿಳೆಯರಲ್ಲಿ ಬೆಳ್ಳಿಯ ನಾಣ್ಯಗಳಿದ್ದವು. ಇವುಗಳನ್ನು ತಂದೆ ತಾಯಿಗಳು ಉಡುಗೊರೆಯಾಗಿ ನೀಡುತ್ತಿದ್ದರು. ಹಿಂದೆ ಬೆಳ್ಳಿಯ ನಾಣ್ಯಗಳು ಚಲಾವಣೆಯಲ್ಲಿದ್ದರಿಂದ, ಇವುಗಳನ್ನು ಅಧಿಕವಾಗಿ ಸಂಗ್ರಹಿಸಿ ಅವು ತಮ್ಮಿಂದ ದೂರಹೋಗಬಾರದೆಂದು, ಅವುಗಳ ಹಾರವನ್ನು ಮಾಡಿಸಿ ಹಾಕಿಕೊಳ್ಳುವರು. ಮಗಳನ್ನು ಗಂಡನ ಮನೆಗೆ ಕಳಿಸುವ ವೇಳೆ ನೂರರಿಂದ ಮೂರನೂರರವರೆಗೆ ಬೆಳ್ಳಿಯ ನಾಣ್ಯವನ್ನು ನೀಡಿ ತಮ್ಮ ಗೌರವವನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ಈ ನಾಣ್ಯಗಳನ್ನು ಕೆಲವರು ಕೊರಳಹಾರವನ್ನಾಗಿಸಿದರೆ, ಇನ್ನೂ ಕೆಲವರು ಅವುಗಳನ್ನು ಕರಗಿಸಿ ತಮಗೆ ಬೇಕಾದ ಆಭರಣಗಳನ್ನು ಮಾಡಿಸಿಕೊಳ್ಳುತ್ತಿದ್ದರು. ಆದರೆ ಈಗ ಇವುಗಳ ಬಳಕೆ ಇಲ್ಲದಂತಾಗಿದೆ.

**ಲಟಕಣ**

ಮಹಿಳೆಯರು ತಮ್ಮ ಉಡುಗೆ ಹಾಗೂ ತೊಡುಗೆಗಳ ಮೇಲೆ ಅಲ್ಲಲ್ಲಿ 'ಲಟಕಣ'ನ್ನು ಹಾಕಿಕೊಳ್ಳುತ್ತಾರೆ(ನಾಲ್ಕಾಣೆಯ ಮೇಲೆ ಅಲ್ಲಲ್ಲಿ ಚೈನು ಹಾಗೂ ಗೆಜ್ಜೆಗಳಿಂದ ಇದನ್ನು ಟಾಕಾ ಹಾಕಿರುವರು). ಇದನ್ನು ತಯಾರಿಸಲು ನಾಲ್ಕಾಣೆ, ನಾಕಾ, ಸಾಕಳಿ ಚೈನ್, ಘುಗ್ರ ಗೆಜ್ಜೆಗಳು ಬೇಕಾಗುತ್ತವೆ. ಇದನ್ನು ಜರ್ಮನ್ ಸಿಲ್ವರ್‌ನಿಂದ ತಯಾರಿಸಲಾಗುತ್ತದೆ.

ಈ ಲಟಕನನ್ನೂ ಖವ್ಯಾ ಚೊಟ್ಯಾನ ಕೊನೆಯ ಭಾಗಕ್ಕೆ(ಎರಡು ಬದಿ ಮಧ್ಯೆ) ಜೋಡಿಸುವರು.

ವಿಶೇಷವಾಗಿ ಒಂದು ರೂಪಾಯಿ, ನಾಲ್ಕಾಣೆಯ ಮೇಲೆ ಚೈನಿನ ಎಳೆಯನ್ನು ಟಾಕದಿಂದ ಜೋಡಿಸುವರು. ಆ ಎಳೆಗಳ ಕೊನೆಗೆ ಗೆಜ್ಜೆ ಸೇರಿಸಿ ಸುಂದರವಾಗಿ ಅಕ್ಕಸಾಲಿಗರು ಮಾಡಿರುವರು. ಒಂದು ರೂಪಾಯಿಯನ್ನು ಹಾರದಲ್ಲಿ ಪದಕದ ರೀತಿಯಲ್ಲಿ ವಿಶೇಷವಾಗಿ ಅದನ್ನು ಚೈನಿನ ಎಳೆ ಹಾಗೂ ಗೆಜ್ಜೆಗಳಿಂದ ತಯಾರಿಸುವರು. ಅಲ್ಲದೆ ನಾಲ್ಕಾಣೆ ಹಾಗೂ ಎಂಟಾಣೆಗೂ ಸಹ ಜೈನಿನ ಎಳೆ ಅದರೊಂದಿಗೆ ಗೆಜ್ಜೆ ಸೇರಿಸಿ ಅದನ್ನು ಕೈಗೆ ಉಂಗುರದ ರೀತಿಯಲ್ಲಿ ಬಳಸುವರು. ಅಲ್ಲದೆ ಕುಪ್ಪಸ(ಕಾಂಚಳಿ)ದಲ್ಲಿ ಖವ್ಯ(ಕುಪ್ಪಸದ ತೋಳಿನ ಮೇಲಿರುವ ಹೊದಿಕೆ), ಪಾಟ್ಲಿ(ಕುಪ್ಪಸದ ಎದೆಯ ಭಾಗದ ಮೇಲೆ ಬಂದಿರುವ ಹೊದಿಕೆ)ಗಳ ಮೇಲೆ ನಾಲ್ಕಾಣೆಯನ್ನೇ ಹೆಚ್ಚಾಗಿ ಬಳಸುವರು. ಇವುಗಳಿಂದ ಕುಪ್ಪಸಕ್ಕೆ ಒಂದು ಮೆರುಗು ಬರುತ್ತದೆ. ಪಚೇಲ(ಕೈಯ ತೋಳಿಗೆ ಬಟ್ಟೆಯಿಂದ ತಯಾರಿಸಿದ ಬಳೆ) ಇವುಗಳ ಮೇಲೆ ಸಾಲಾಗಿ ನಾಲ್ಕಾಣೆಯನ್ನು ಹಚ್ಚುವರು. ಇದು ಎರಡು ತೋಳಿಗೆ ಹಾಕುವರು. ಇವುಗಳ ಒಂದು ಬದಿಗೆ ಲಟಕನ ಹಾಗೂ ಅದರೊಂದಿಗೆ ಗೆಜ್ಜೆ ಸೇರಿಸಿರುವರು.

**ವಿಚುವಾ(ಕಾಲುಂಗರ)**

ಇದು ಮಹಿಳೆಯರು ಕಾಲಿನ ಬೆರಳಿಗೆ ಹಾಕುವ ಒಂದು ಆಭರಣವಾಗಿದೆ. ಅವುಗಳ ಮೇಲೆ ಗೆಜ್ಜೆಗಳನ್ನು ಹಾಕಿರುತ್ತಾರೆ. ಇತ್ತೀಚೆಗೆ ಆಧುನಿಕ ಕಾಲಕ್ಕೆ ತಕ್ಕಂತೆ ವಿವಿಧ ವಿನ್ಯಾಸಗಳಲ್ಲಿ ಈ ಕಾಲುಂಗುರವನ್ನು ತಯಾರಿಸುವರು. ಇದನ್ನು ಜರ್ಮನ್ ಸಿಲ್ವರ್, ಹಿತ್ತಾಳೆ ಲೋಹಗಳಿಂದ ತಯಾರಿಸುತ್ತಾರೆ. ಇದನ್ನು ಮದುವೆಯಾದ ಮಹಿಳೆಯರು ಹಾಕಿಕೊಳ್ಳುವರು. ಕಡುಬಡತನದಲ್ಲಿ ಜೀವಿಸುತ್ತಿರುವ ಈ ಸಮುದಾಯದ ಮಹಿಳೆಯರ ಮೂಗಿನಲ್ಲಿ ಹಾಕುವ ಭೂರಿಯಾ ಮಾತ್ರ ಬಂಗಾರದ್ದು, ಉಳಿದವೆಲ್ಲವೂ ಹಿತ್ತಾಳೆ, ಜರ್ಮನ್ ಸಿಲ್ವರ್ ಹಾಗೂ ಲೋಹವೇ ಇವರ ಪಾಲಿಗೆ ಬಂಗಾರವಾಗಿದೆ.

**ಕನಿಯಾ(ಕಿವಿ ಓಲೆ)**

ಇದು ಒಂದು ಮೊಳ ಉದ್ದದ ಸರಪಳಿಯಂತಿರುವ ಕಿವಿಯ ಆಭರಣವಾಗಿದೆ. ಇದನ್ನು ಜರ್ಮನ್ ಸಿಲ್ವರ್‌ನಿಂದ ತಯಾರಿಸುತ್ತಾರೆ. ಈ ಚೈನಿನ ಕೆಳಗಡೆ ಸಣ್ಣ ಸಣ್ಣ ಗೆಜ್ಜೆಗಳನ್ನು ಜೋಡಿಸಿರುತ್ತಾರೆ. ಒಂದು ಕಿವಿಗೆ ಎರಡರಂತೆ ನಾಲ್ಕು ಚೈನನ್ನು ಹಾಕಿರುವರು.

**ಆಡಿ ಸಾಕಳಿ(ಅಡ್ಡ ಚೈನ್)**

ಲಂಬಾಣಿ ಮಹಿಳೆಯರು ಕೆನ್ನೆಯ ಎರಡು ಬದಿಯ ಕೂದಲಿಗೆ ಈ 'ಆಡಿಸಾಕಳಿ' ಎಂಬ ಆಭರಣವನ್ನು ಹಾಕಿಕೊಳ್ಳುವರು. ಇದರ ಮೇಲೆ ವಿವಿಧ ವಿನ್ಯಾಸಗಳಿರುತ್ತವೆ. ಕೆಲವೊಮ್ಮೆ ಅಲ್ಲಲ್ಲಿ ಸಣ್ಣ ಸಣ್ಣ ಗೆಜ್ಜೆಯನ್ನು ಜೋಡಿಸಿರುತ್ತಾರೆ.







ಪುಲಾ (ಹೂವಿನ ಆಕಾರದ ಉಂಗುರಗಳು)



ವಿಂಚುವಾ (ಕಾಲುಂಗುರಗಳು)

**ಭೂರಿಯಾ(ನತ್ತು)**

ಮೂಗಿಗೆ ಹಾಕುವ ರಿಂಗಿನ ಆಕಾರದ ಒಡವೆಯನ್ನು 'ಭೂರಿಯಾ' ಎಂದು ಕರೆಯುವರು. ಇದು ಬಂಗಾರ ಹಾಗೂ ಬೆಳ್ಳಿಯಿಂದ ಕೂಡಿರುತ್ತದೆ. ಲಂಬಾಣಿ ಮಹಿಳೆಯರು ತಮ್ಮ ಮೈಮೇಲೆ ಧರಿಸುವ ಒಡವೆಗಳಲ್ಲಿ ಬಂಗಾರದ ಒಡವೆ ಎಂದರೆ ಈ ಭೂರಿಯಾ. ಇದನ್ನು ಅಕ್ಕಸಾಲಿಗರು ಬಹಳ ಸೂಕ್ಷ್ಮತೆಯಿಂದ ತಯಾರಿಸುವರು. ಮದುವೆ ಆದ ಮೇಲೆ ಬದುಕಿನ ಕೊನೆಯವರೆಗೂ ಈ ಭೂರಿ ಎಂಬ ಒಡವೆಯನ್ನು ಮುಗಿನಲ್ಲಿ ಧರಿಸುವರು. ಮನೆಯಲ್ಲಿ ಏನಾದರೂ ತೊಂದರೆ, ಕಷ್ಟಗಳು ಬಂದರೆ ಈ ಒಡವೆಯನ್ನು ಒತ್ತೆಯಿಡುವ ಪ್ರಸಂಗಗಳು ಈ ಸಮುದಾಯದಲ್ಲಿ ಗೋಚರಿಸಿವೆ.

**ಕಸ್ಸೆ**

ಕಾಲಲ್ಲಿ ಹಾಕುವ ಈ ಒಡವೆಯನ್ನು 'ಕಸ್ಸೆ'ಯೆಂದು ಕರೆಯುವರು. ಲಂಬಾಣಿಗರು ಕರೆಯುವಂತೆ ಕಸಾರ ಎಂಬ ಲಂಬಾಣೇತರ ಸಮುದಾಯದವರು ಇದನ್ನು ತಯಾರಿಸುವರು. ಅಂಗುತಳಾ(ಉಂಗುಷ್ಟ), ಝೂಂಜರ, ವಾಂಕಡಿ, ಚಟಕಿ(ಕಾಲುಸುತ) ಈ ಆಭರಣಗಳನ್ನು ಕಸಾರ ಎಂಬ ಸಮುದಾಯದವರು ತಯಾರಿಸುವರು. ಇವರು ಹೈದ್ರಾಬಾದ್, ಸೋಲಾಪುರದ ಭಾಗಗಳಲ್ಲಿ ಅಲ್ಲಲ್ಲಿ ಸಿಗುವರು.

ಮದುವೆಯಾಗುವ ವೇಳೆಯಲ್ಲಿ ಈ ಕಸ್ಸೆ ಎಂಬ ತೊಡುಗೆಯನ್ನು ಮದುಮಗಳ ಕಾಲಲ್ಲಿ ಹಾಕುವರು. ಅದರೊಂದಿಗೆ ಜಾಂಜರ್, ತೊಡೇವುಗಳನ್ನು ಸಹ ಸೇರಿಸಿರುವರು. ಈ ಕಸ್ಸೆ ಎಂಬ ತೊಡುಗೆಯನ್ನು ವಯಸ್ಸಾದ ಅಥವಾ ಮಧ್ಯವಯಸ್ಸಿನ ಮಹಿಳೆಯರಲ್ಲಿ ಕಾಣಬಹುದು. ಆದರೆ ಈಗ ಈ ಮಾದರಿಯ ತೊಡುಗೆ ಕಾಣದಂತಾಗಿದೆ. ಲಂಬಾಣಿಗರಂತೆ ಇತರೆ ಕೆಲವು ಬುಡಕಟ್ಟುಗಳಲ್ಲಿ ಈ ಆಭರಣಗಳನ್ನು ಕಾಣಬಹುದು. ಈ ಒಡವೆಯನ್ನು ತಯಾರಿಸುವ ಸಮುದಾಯವು ಬೇರೆಯಾಗಿದೆ.

**ಬಳೆ(ಬಲ್ಯಾ)**

ಕೈಗೆ ಧರಿಸುವ ಬಳೆಯನ್ನು 'ಬಲ್ಯಾ' ಎಂದು ಕರೆಯುವರು. ಕಾಡಿನಲ್ಲಿ ಹೇರಳವಾಗಿ ಸಿಗುತ್ತಿದ್ದ ಜಿಂಕೆಯ ಕೋಡು ಅಥವಾ ಆನೆಯ ದಂತದಿಂದ ಈ ಬಳೆಗಳನ್ನು ಮಾಡಿ ಧರಿಸಿಕೊಂಡಿರಬೇಕು ಎಂಬ ಅಭಿಪ್ರಾಯವಿದೆ. ಮುಂಗೈಗೂ, ತೋಳಿಗೂ, ಕೊಂಬಿನ ದಂತ ಬಳೆಗಳನ್ನು ಹಾಕುವುದುಂಟು. ತೋಳುಗಳಿಗೆ ಕೊಂಬಿನ ಬಳೆಗಳ ಕೆಳಗೆ ಬಣ್ಣ ಬಣ್ಣದ ಕವಡೆಗಳಿಂದ ಹೊಲೆದ ಪಚೇಲಾ ಎಂಬ ಗೊಂಡೇವುಗಳನ್ನು ಕಟ್ಟಿಕೊಂಡಿರುತ್ತಾರೆ. ಮುಂಗೈಗೆ ಹಿತ್ತಾಳೆಯ ಮಾಟ್ಲೆ ಎಂಬ ಬಳೆಗಳನ್ನು ಧರಿಸುವರು. ಕಾಡುಮೇಡುಗಳಲ್ಲಿ ಸಂಚರಿಸುವ ವೇಳೆಗೆ ತಮ್ಮ ಕೈಗಳಿಗೆ ಗಿಡಗಂಟೆ, ಮುಳ್ಳು ಪೊದೆಗಳಿಂದ ರಕ್ಷಿಸಿಕೊಳ್ಳಲು





ರಿಯಾ (ನತ್ತು)



ಕಸ್ಸೆ (ಕಾಲಾಭರಣ)



ವಾಂಕಡಿ, ಕಸ್ಸೆ (ಕಾಲಾಭರಣ)

ಈ ರೀತಿಯ ಒಡವೆಗಳನ್ನು ಹಾಕಿರಬೇಕೆನಿಸುತ್ತದೆ. ಇತ್ತೀಚೆಗೆ ಪ್ಲಾಸ್ಟಿಕ್ ಬಳೆಗಳನ್ನು ಹಾಕಿಕೊಳ್ಳುತ್ತಿದ್ದಾರೆ. ಈ ಬಳೆಗಳಲ್ಲದೆ ಕೈಗಳಲ್ಲಿ ಅಲ್ಲಲ್ಲಿ ಚುಡೊ(ಮುತ್ತೈದೆಯರು ತೋಳಲ್ಲಿ ಧರಿಸುವ ಬಳೆ), ಅದರ ಅಡಿಗೆ ವಿವಿಧ ರೀತಿಯ ಮಣಿಗಳಿಂದ ಹೆಣೆದಿರುವ ಕಸೊಟ್ಯಾವನ್ನು ಕಟ್ಟಿಕೊಳ್ಳುತ್ತಾರೆ. ಮುಂಗೈಗೆ 'ಗೋಜ್ರಾ' ತೋಳುಗಳಿಗೆ ಪಜೇಲಾ ಬಳೆಗಳ ನಡುವೆ ಅಲ್ಲಲ್ಲಿ 'ಮಾಟ್ಲಿ'(ಮಾಟ) ಇವೆಲ್ಲಾ ಬಳೆಗಳನ್ನು ಈ ಸಮುದಾಯದ ಮಹಿಳೆಯರು ಹಾಕಿಕೊಳ್ಳುವರು. ಮುಂಗೈ ಮತ್ತು ತೋಳುಗಳಿಗೆ ದಂತದ ಬಳೆಗಳನ್ನು ಹಾಕುವುದುಂಟು. ತೋಳುಗಳಿಗೆ ಕೊಂಬಿನ ಬಳೆಗಳ ಕೆಳಗೆ ಬಣ್ಣ ಬಣ್ಣದ ಕವಡೆಗಳಿಂದ ಹೊಲಿದ 'ಪಚೇಲಾ' ಎಂಬ ಗೊಂಡೇವುಗಳನ್ನು ಕಟ್ಟಿಕೊಂಡಿರುತ್ತಾರೆ. ಮುಂಗೈಗೆ ಹಿತ್ತಾಳೆಯ 'ಮಾಟ್ಲಿ' ಎಂಬ ಬಳೆಗಳನ್ನು ಧರಿಸುವರು.

**ಚೂಡೊ(ಮುತ್ತೈದೆ ಸಂಕೇತದ ಒಡವೆ)**

ಮದುವೆ ಆದ ಮಹಿಳೆಯರ ತೋಳಲ್ಲಿ ಈ ಒಡವೆ ಇರುತ್ತದೆ. ಇದು ತೋಳಿಂದ ಕೆಳಗೆ ಸರಿಯಬಾರದೆಂಬ ನಂಬಿಕೆ ಇದೆ. ಕೆಳಗೆ ಸರಿದರೆ ಅಪಶಕುನ ಎನ್ನುವರು. ಇದನ್ನು ಬಣ್ಣ ಬಣ್ಣದ ಬಟ್ಟೆಗಳ ಮೇಲೆ ಕವಡೆಗಳಿಂದ ನಾಲ್ಕಾಣೆಯನ್ನು ಅಥವಾ ನಯಾ ಪೈಸೆಯನ್ನು ಬಳೆಯಾಕಾರದ ಬಟ್ಟೆಯ ಮೇಲೆ ಜೋಡಿಸಿ ತಯಾರಿಸುವರು. ಗಂಡ ಸತ್ತ ಮೇಲೆ ಇದನ್ನು ವಿಧವೆಯರು ಬಂದು ತೆಗೆಯುವರು. ಒಂದು ರೀತಿಯಲ್ಲಿ ಮುತ್ತೈದೆಯರ ಸಂಕೇತವಾಗಿದೆ.

**ಝೂಂಜರಿ(ಕಾಲಲ್ಲಿ ಧರಿಸುವ ಒಡವೆ)**

ಪ್ರಸ್ತುತ ಸಂದರ್ಭದಲ್ಲಿ 'ಝೂಂಜರಿ' ಎಂಬ ಪರಿಕರವು ಮದುವೆಯ ಸಂದರ್ಭದಲ್ಲಿ ಮದುಮಗಳ ಕಾಲಲ್ಲಿ ಕಾಣುತ್ತೇವೆ. ಪಳೆಯುಳಿಕೆಗಳಾಗಿ ಇಂದು ಮದುವೆಯ ಸಂದರ್ಭದಲ್ಲಿ ಪ್ರದರ್ಶನಕ್ಕೆ ತೋರದಂತಿದೆ. ಹಿಂದೆ ಹಿರಿಯ ತಲೆಮಾರಿನ ಮಹಿಳೆಯರು ವಾಂಕಡಿ, ಚೌಕಾಕಾರದ ಹಿತ್ತಾಳೆಯ(ಕಸ್) ಇವುಗಳನ್ನು ಸದಾ ಹಾಕಿಕೊಳ್ಳುವರು. ಆದರೆ ಆಧುನಿಕ ಕಾಲದಲ್ಲಿ ಇವು ಮರೀಚಿಕೆಯಾಗಿವೆ.

**ಚಟ್ಕ(ಕಾಲುಂಗುರ)**

ಲಂಬಾಣಿ ಮಹಿಳೆಯರು ಕಾಲು ಹಾಗೂ ಕೈಗಳ ಬೆರಳಿಗೆ ಬೆಳ್ಳಿ ಅಥವಾ ಹಿತ್ತಾಳೆಯಿಂದ ತಯಾರಿಸಿದ ಉಂಗುರವನ್ನು ಹಾಕಿಕೊಳ್ಳುವರು. ಉಂಗುರದ ಮೇಲೆ 'ಎಂಟಾಣೆ'ಯನ್ನು ಟಾಕ ಹಾಕಿಸಿಕೊಳ್ಳುವರು. ಜೊತೆಗೆ ಕಾಲುಸುತ್ತನ್ನು ತೊಡುವರು. ಇವುಗಳೊಂದಿಗೆ 'ವಿಂಚುವ' ಸಹ ಹಾಕಿಕೊಳ್ಳುವರು.

ಲಂಬಾಣಿ ಮಹಿಳೆಯರು ಅನೇಕ ಮಾದರಿಯ ಆಲಂಕಾರಿಕ ಒಡವೆಗಳನ್ನು ಬಳಸುವರು. ಅವುಗಳನ್ನು 'ರಾಂಗ್‌ಪಾರಿ'ಯಿಂದ ತಯಾರಿಸಿದ್ದೆಂದು ಹೇಳುತ್ತಾರೆ. ಅಂಥ





ಪಾವಲಾರ ಕಸೋಟಿಯಾ,ಗಜರಾ (ಮೊಣಕೈ ಆಭರಣ)







ಕಸ್ಸೆ (ತೊಳಾಭರಣಗಳು)









ಪಾವಲಾರ ಕಸೋಟಿಯಾ,ಗಜರಾ (ಮೊಣಕೈ ಆಭರಣ)





ಕಸ್ಸೆ (ತೋಳಾಭರಣ)





ಕೊಲ್ಡಾ (ಕಾಲಿಗೆ ಹಾಕುವ ಕಡಗ)



ಅಡಿಸಾಕಳಿ



ಕೊಲ್ಡಾ (ಕಾಲಿಗೆ ಹಾಕುವ ಕಡಗಗಳು)

ವಸ್ತುಗಳನ್ನು ತಯಾರಿಸಿಕೊಡುವ 'ಭರಾವ'ಗಳನ್ನು 'ರಾಂಗ್‌ಪಾರಿವಾಳ' ಎಂದು ಕರೆಯುತ್ತಾರೆ. ಪಾರಿ, ಗಜರ, ಪಚೇಲ, ಚೂಡೇರ ಗೂಗರ, ನಾನಕ್ಯ ಗುಗರ, ಗುಂಗಟೇರ ಗುಗರ, ಟೋಪ್ಲಿ, ಪಾರಿ ಚಲ್ಲಿ ಬಾಂತೇರ ನುಗಿರಿ, ಪೊಲಿ, ನುಗರಿಯಾಯಿರ್‌ಪೊಲಿ ನಳಿ, ನಳಿರ್‌ಟೋಪ್ಲಿ, ಮಾಚಳಿ, ವಿಂಚೂವ, ಕಣದೋರಿರಪಾರ, ಕಾಂಟಾಳೋ ಪಚೇಲ, ಲಸಣ್ಯಾ, ಗುಗರಿಮಾರ ಗುಗರ, ಲಾಲ್ಡಿಮಾರ್ ಪತಡಿ, ಹೀಗೆ ಸುಮಾರು ಒಂದು ನೂರ ಮೂರು ಬಗೆಯ ವಸ್ತುಗಳನ್ನು ತಯಾರಿಸುತ್ತಿದ್ದರೆಂದು ಭರಾವಗಳು ಹೇಳುತ್ತಾರೆ". ಈ ಸಮುದಾಯದ ಮಹಿಳೆಯರು ತೊಡುವ ಆಭರಣ ತಯಾರಿಸುವಿಕೆಯಿಂದ ಹಲವು ಸಮುದಾಯಗಳು ಬದುಕುತ್ತಿದ್ದವು. ಆದರೆ ಲಂಬಾಣಿಗರ ಮಹಿಳೆಯರನ್ನು ನಂಬಿ ಬದುಕುತ್ತಿದ್ದ ಇಂಥ ಅಕ್ಕಸಾಲಿಗ ಚಿಕ್ಕ ಚಿಕ್ಕ ಸಮುದಾಯಗಳ ಸ್ಥಿತಿ ಇಂದು ಚಿಂತಾಜನಕವಾಗಿದೆ. ಕಾರಣ ಈ ಸಮುದಾಯದ ಮಹಿಳೆಯರು ತಮ್ಮ ಮೂಲ ಉಡುಗೆ ತೊಡುಗೆಯನ್ನು ಬಿಟ್ಟಿರುವುದೇ ಆಗಿದೆ.

**ಕಣದೋರೋ(ಉಡದಾರ)**

ಸಾಮಾನ್ಯವಾಗಿ ಇದನ್ನು ಗಂಡಸರು ಸೊಂಟಕ್ಕೆ ಕಟ್ಟಿಕೊಳ್ಳುವರು. ಈ ರೀತಿಯ ಉಡದಾರ ಬೆಳ್ಳಿಯದಾಗಿರುತ್ತದೆ. ಇದು ಕುಟುಂಬದ ಶ್ರೀಮಂತಿಕೆಯ ಸಂಕೇತದಂತಿದೆ. ದಪ್ಪ ಕಾಶಿದಾರದ ಮೂರು ಎಳೆಗಳಿಗೆ ಪ್ರತ್ಯೇಕವಾಗಿ ಒಂದಕ್ಕೊಂದು ಕಸೂತಿ ತೆಗೆದು ಆಮೇಲೆ ಮೂರು ಎಳೆಗಳಿಗೆ ಒತ್ತಟ್ಟಿಗೆ ಕೂಡಿಸಿ ಮೂರು ಕಡೆಗೆ ಅಲ್ಲಲ್ಲಿ ಕಸೂತಿ ಹಾಕಿ ಬಿಗಿದಿರುತ್ತಾರೆ. ಎರಡೂ ಬದಿಗೆ ಕಟ್ಟಿಕೊಳ್ಳಲಿಕ್ಕೆ ಕೊಂಡಿ ಮಾಡಿರುತ್ತಾರೆ. ಕೊಂಡಿಗಳ ಮೇಲೆ ಪ್ರತ್ಯೇಕವಾದ ಒಂದು ಚೋಟ ಉದ್ದನೆಯ ಎಳೆಗಳ ಮೇಲೆ ಕಸೂತಿ ತೆಗೆದು ಅವರ ಮೇಲೆ ಅಲ್ಲಲ್ಲಿ ಉಣ್ಣೆಯ ಗೊಂಡೆ ಹಚ್ಚಿ ಮಿಶ್ರಧಾತುವಿನ(ಪಾರಿ) ತವರು ಹಚ್ಚಿ ತಯಾರಿಸುತ್ತಾರೆ.

**೩.೪. ಚರ್ಮ ಮಾಧ್ಯಮದ ಕರಕುಶಲ ಕಲೆ**

ಮಾನವನ ಚರಿತ್ರೆಯನ್ನು ಅವಲೋಕಿಸಿದರೆ, ಚರ್ಮದ ಜತೆಗಿನ ನಂಟು ಕುತೂಹಲಕಾರಿಯಾಗಿದೆ. ಪ್ರಾಣಿಗಳ ಚರ್ಮವನ್ನು ಬಟ್ಟೆಗಳನ್ನಾಗಿ ತೊಡುತ್ತಿದ್ದರಿಂದ ಈ ಬಳಕೆ ಆರಂಭವಾಗುತ್ತದೆ. ಚರ್ಮವನ್ನೇ ಬಳಸಿ ಅಲಂಕಾರಿ ವಸ್ತುಗಳನ್ನು ಮಾಡಿಕೊಳ್ಳುವುದು ಇದೆ. ಇಂದು ನಾವು ಚರ್ಮದ ಬೆಲ್ಟ್ ಹಾಕುತ್ತೇವೆ. ಕೆಲವೊಮ್ಮೆ ಚರ್ಮದ ಚಪ್ಪಲಿ ಹಾಕುವುದೂ ಇದೆ. ಹೀಗೆ ಚರ್ಮವನ್ನೇ ಕಲಾ ಮಾಧ್ಯಮಕ್ಕೆ ಬಳಸಿಕೊಳ್ಳುವುದು. ಮನುಷ್ಯ ತನ್ನ ಚರ್ಮದ ಮೇಲೆ ಕಲೆಯನ್ನು ಅನಾವರಣ ಮಾಡುವುದು ನಡೆದೇ ಇದೆ. ಲಂಬಾಣಿ ಸಮುದಾಯವೂ ಕೂಡ ಅಲೆಮಾರಿ ಸಮುದಾಯವಾಗಿದ್ದರಿಂದ ತನ್ನ ಕಲಾ ಪ್ರತಿಭೆಯನ್ನು ಚರ್ಮದ ಮೇಲೂ ದಾಖಲಿಸಿರುವುದು ಕಾಣುತ್ತದೆ.

ವಿಶ್ವದ ಎಲ್ಲ ಬುಡಕಟ್ಟುಗಳು ಒಂದಲ್ಲಾ ಒಂದು ಕಾಲಘಟ್ಟದಲ್ಲಿ ಹಚ್ಚೆಯನ್ನು ಅನುಸರಿಸಿವೆ. ಚರ್ಮದ ಮೇಲೆ ಅಳಿಸಲಾಗದ ಬಣ್ಣವನ್ನು ಸೂಜಿಗಳ ಮೂಲಕ ಹಾಕುವ ಕಲೆ ಇದಾಗಿದೆ. ಹಚ್ಚೆಗಳಲ್ಲಿ ಸಾಕಷ್ಟು ವೈವಿಧ್ಯತೆ ಇದ್ದು ಕಪ್ಪುಬಣ್ಣದ ಹಸಿರು ಚಿತ್ರ ಮೂಡಿಸುವ ದ್ರವದ ಬಳಕೆ ಎಲ್ಲಡೆ ಸಾಮಾನ್ಯವಾಗದ್ದು ಕೆನಡಾದಲ್ಲಿ ಮಾತ್ರ ಕೆಂಪು ಬಣ್ಣವನ್ನು ಬಳಸಲಾಗುತ್ತದೆ.

ಈ ವಿನ್ಯಾಸಗಳು ಸುತ್ತಮುತ್ತಲಿನ ಪರಿಸರದಿಂದ ಪ್ರಭಾವಿತಗೊಂಡಿದ್ದು ಅಲಂಕಾರಕ್ಕಾಗಿ ಇಲ್ಲವೇ, ಧಾರ್ಮಿಕ ವಿಧಾನವಾಗಿ ಅಥವಾ ನಂಬಿಕೆ ಭಯಗಳಿಂದಾಗಿ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಕೆಲವೊಮ್ಮೆ ಸಮಾಜಕ್ಕೆ ತಮ್ಮ ಸ್ಥಾನಮಾನ ಶಕ್ತಿ ಸೂಚಿಸಲು ಇದನ್ನು ಬಳಸಲಾಗುತ್ತದೆ. ಹುಲಿಯ ಹಚ್ಚೆ ಹಾಕಿಸಿಕೊಂಡರೆ ಅದರ ಎಲ್ಲ ಗುಣಗಳ ಅಂಶ ತಮಗೂ ಬರುತ್ತದೆ ನಂಬಿಕೆ ಇದೆ. ಅದೃಷ್ಟ ತರುವ ನಂಬಿಕೆಯೂ ಇದೆ. ಜೊತೆಗೆ ಆ ಕ್ರೂರ ಪ್ರಾಣಿಗಳಿಂದ ರಕ್ಷಣೆ ಸಿಗುತ್ತದೆಂದೂ ಭಾವಿಸುತ್ತಾರೆ. ಕೆಲ ಜನಾಂಗಗಳಲ್ಲಿ ಕುಲ ಚಿನ್ನೆಯಾಗಿಯೂ ದುಷ್ಟ ಮಾಂತ್ರಿಕ ಶಕ್ತಿ ವೈರಿಗಳು, ಭೂತ ಪಿಶಾಚಿಗಳು ಅಥವಾ ರೋಗಗಳ ವಿರುದ್ಧ ರಕ್ಷಣೆಗಾಗಿಯೂ ಇದನ್ನು ಹಾಕಿಸಿಕೊಳ್ಳುತ್ತಾರೆ.

ಇತ್ತೀಚಿನ ದಿನಗಳಲ್ಲಿ ಮೂಲ ಹಚ್ಚೆ ಕಲೆ ನಶಿಸುತ್ತಿದೆ. ಕ್ರಿಶ್ಚಿಯನ್ ಮಿಶನರಿಗಳು, ಪುರೋಹಿತರು ಅದನ್ನು ಹೀನ ಕಲೆ ಎಂದು ನಿಷೇಧಿಸಿದರು. ಆದರೆ ಇತ್ತೀಚಿನ ಯುವ ಪೀಳಿಗೆಯ ಮತ್ತೆ ಹಚ್ಚೆಗಳೆಡಗೆ ಒಲವು ತೋರಿಸುತ್ತಿರುವುದರಿಂದ ಈ ಕಲೆ ಪುನರುಜ್ಜೀವನ ಪಡೆದಿದೆ. ಹಿಂದಿನಂತೆ ನೋವಿನ ಕ್ಲಿಷ್ಟ ವಿಧಾನಗಳನ್ನು ಬಿಟ್ಟು ಹೆಚ್ಚು ವೈಜ್ಞಾನಿಕ ಬಣ್ಣ ಬಣ್ಣಗಳ ನೋವಿರದ ಹಚ್ಚೆಗಳು ಹೆಚ್ಚು ಜನಪ್ರಿಯವಾಗುತ್ತಿವೆ.

**ಹಚ್ಚಕಲೆ**

ಪ್ರಾಚೀನ ಕಾಲದಿಂದಲೂ ಗ್ರಾಮೀಣ ಭಾಗದಲ್ಲಿ ಈ ಹಚ್ಚೆ ಹೆಚ್ಚು ಪ್ರಸಿದ್ಧಿಯನ್ನು ಪಡೆದ ಕಲೆಯಾಗಿದೆ. ಆದಿವಾಸಿಗಳು ಹೆಚ್ಚಾಗಿ ಈ ಹಚ್ಚೆಯನ್ನು ತಮ್ಮ ಮೈ ಮೇಲೆ ಹಾಕಿಸಿಕೊಳ್ಳುತ್ತಿದ್ದರು. ಜಗತ್ತಿನಲ್ಲಿ ಎಲ್ಲಾ ಭಾಗಗಳಲ್ಲೂ ಹಚ್ಚೆ ಹೊಯ್ಯಿಸಿಕೊಳ್ಳುವ ಸಂಪ್ರದಾಯವಿದೆ. ಈ ಜನಪದ ಕಲೆ ಜನರ ಬದುಕಿನಲ್ಲಿ ಹಲವು ನಂಬಿಕೆಗಳಂತೆ ಬೆಳೆದುಕೊಂಡು ಬಂದಿದೆ. ಇಂದು ಹಚ್ಚೆ ಸಂಪ್ರದಾಯ ಕ್ರಮೇಣ ಮಾಯವಾಗುತ್ತಿದೆ ಯಾದರೂ ಜನಪದ ವೈಶಿಷ್ಟ್ಯ ಕಲೆಯಾಗಿ ಆಧುನಿಕತೆಯ ಸ್ವರೂಪ ಪಡೆದುಕೊಂಡಿದೆ.

ಪ್ರದೇಶವಾರು ಭಿನ್ನ ಭಿನ್ನ ಅಭಿರುಚಿಯ ಕಲೆಗಳು ಈ ಹಚ್ಚೆ ಮೂಲಕ ಗೋಚರಿಸುತ್ತವೆ. ಮನುಷ್ಯನ ಮೂಲ ಅವಶ್ಯಕತೆಗಳ ಪೂರೈಕೆ ಆದ ನಂತರ ತನ್ನ ಮನಸ್ಸಿನ

ಭಾವನೆಗೆ ತಕ್ಕಂತೆ ತನ್ನ ಮೈಮೇಲೆ ಅಂದ ಚಂದ ಕಾಣಲು ಈ ಹಚ್ಚೆಯ ಮೊರೆ ಹೋಗಿರುವ ಸಾಧ್ಯತೆಗಳಿವೆ. ಉಡುಗೆ ತೊಡುಗೆಗಳ ಮೂಲಕ ತನ್ನನ್ನು ಬೆಚ್ಚಗೆ ಕಾಪಾಡಿಕೊಳ್ಳಬೇಕು. ಮೈಗೆ ಬಣ್ಣ ಬಳಿದುಕೊಂಡು ಸುಂದರವಾಗಿ ಕಾಣಬೇಕೆಂದು ಮನುಷ್ಯ ಬಯಸುತ್ತಿದ್ದ. ಇಂತಹ ಮಹತ್ವದ ಸೌಂದರ್ಯಪ್ರಜ್ಞೆಯನ್ನು ಬೆಳೆಸಿಕೊಂಡ ಇವನು ಪ್ರಕೃತಿಯಿಂದಲೇ ಪಡೆಯತೊಡಗಿದನು. ಕಾಡಿನಲ್ಲಿ ತನ್ನ ಕಣ್ಣಿಗೆ ಕಂಡ ಪ್ರಾಣಿಗಳ ಮೈ ಮೇಲಿನ ಸುಂದರ ಬಣ್ಣಗಳನ್ನು ಕಂಡು ತಾನು ಹಾಗೆ ಕಾಣಬೇಕೆಂಬ ಆಸೆ ಅವನಲ್ಲಿ ಮೂಡಿದಾಗ ಈ ರೀತಿಯ ಹಚ್ಚೆ ಸಂಪ್ರದಾಯ ಬೆಳೆಯಲು ಕಾರಣವಾಯಿತು. ಕೆಲವೊಮ್ಮೆ ತಾತ್ಕಾಲಿಕ ಬಣ್ಣಗಳು ಅಳಿಸಿಹೋಗುವುದರಿಂದ ಶಾಶ್ವತವಾಗಿ ತಮ್ಮ ಮೈ ಮೇಲೆ ಬಣ್ಣ ಉಳಿಯುವಂತೆ ಮಾಡಿದ ಕಲೆಯೇ ಹಚ್ಚೆ ಆಗಿದೆ. ಅದು ಮುಂದೆ ಹಚ್ಚೆಯ ರೂಪವಾಗಿ ಶಾಶ್ವತ ಸ್ಥಾನ ಪಡೆಯಿತು.

ಜನಪದ ಚಿತ್ರಕಲೆ ಮಾನವನ ಸಂಸ್ಕೃತಿ ಕಾಲಕ್ರಮೇಣ ಹೇಗೆ ರೂಪಗೊಂಡಿತು ಎಂಬುದನ್ನು ತೋರಿಸಬಲ್ಲ ವಿಶಿಷ್ಟ ಕಲಾಪ್ರಕಾರ, ಮಾನವ ಅನಾದಿಕಾಲದಿಂದಲೂ ತನ್ನ ನಂಬಿಕೆ, ಆಚರಣೆ, ಆರಾಧನೆ, ಸಂಪ್ರದಾಯಗಳ ಹಿನ್ನೆಲೆಯಲ್ಲಿ ಅನೇಕ ಕಲಾ ಪ್ರಕಾರಗಳನ್ನು ರೂಪಿಸಿಕೊಂಡು ಅವುಗಳನ್ನು ಉಳಿಸಿಕೊಂಡು ಬಂದಿದ್ದಾನೆ. ಕೆಲವು ಕಲಾ ಪ್ರಕಾರಗಳು ಕಾಲಗರ್ಭದಲ್ಲಿ ನಶಿಸಿಹೋಗಿವೆ. ಮತ್ತೆ ಕೆಲವು ಕಲೆಗಳು ನಶಿಸಿಹೋಗುವ ಸ್ಥಿತಿಯಲ್ಲಿವೆ. ಜಾನಪದ ದೃಶ್ಯಕಲೆಗೆ ಸಂಬಂಧಿಸಿದ ಹಚ್ಚೆ ಕೂಡ ವಿಶ್ವದ ಅನೇಕ ದೇಶಗಳಲ್ಲಿ ಸಾಯುತ್ತಾ, ಮರುಹುಟ್ಟು ಪಡೆಯುತ್ತಾ ಉಳಿದುಕೊಂಡು ಬಂದಿದೆ. ಹಚ್ಚೆ ಪ್ರಪಂಚದ ಎಲ್ಲ ಕಡೆ ದೊರೆಯುವ ಜನಪ್ರಿಯ ಕಲಾಪ್ರಕಾರ. "ಉತ್ತರ ಧ್ರುವದಿಂದ ಹಿಡಿದು ದಕ್ಷಿಣದ ನ್ಯೂಜಿಲ್ಯಾಂಡ್‌ವರೆಗೆ ಹಚ್ಚೆ ಹಾಕಿಸಿಕೊಳ್ಳದೆ ಜನರಿರುವ ಯಾವುದೇ ದೊಡ್ಡ ರಾಷ್ಟ್ರವನ್ನು ಹೆಸರಿಸಲಾಗದು ಎಂದು ಡಾರ್ವಿನ್ ಬಹಳ ಹಿಂದೆಯೇ ಹೇಳಿದ್ದಾನೆ. ಭಾರತದ ಎಲ್ಲ ರಾಜ್ಯಗಳಲ್ಲಿ ದೊರೆಯುವ ಹಚ್ಚೆ ಕರ್ನಾಟಕದಲ್ಲಿಯೂ ಅತ್ಯಂತ ಜನಪ್ರಿಯ ಕಲೆಯಾಗಿದೆ."[೧೯]

ಪ್ರಾಚೀನ ಕಾಲದಲ್ಲಿ ಅರಣ್ಯದಲ್ಲೇ ಬದುಕನ್ನು ಸಾಗಿಸುತ್ತಿದ್ದ ಮಾನವ ಪ್ರಕೃತಿಯ ಪ್ರತಿಯೊಂದು ಸೊಬಗನ್ನು ತನ್ನ ಮೈ ಮೇಲೆ ತರಲು ಪ್ರಯತ್ನಿಸಿದ. ಹುಲಿ, ಚಿಗರೆಗಳ ಆಕರ್ಷಕ ಮೈಬಣ್ಣ ನೋಡಿ ಅರಣ್ಯವಾಸಿ ಪ್ರಾಚೀನ ಮಾನವನಿಗೆ ತನ್ನ ಅನಾಕರ್ಷಕ ದೇಹದ ಮೇಲೆ ಜಿಗುಪ್ಸೆ ಹುಟ್ಟಿರಬೇಕು. ಅಂತೆಯೇ ಬಣ್ಣ ಬಣ್ಣದ ಮಣ್ಣುಗಳನ್ನು ಮೈಗೆ ಮೆತ್ತಿಕೊಂಡಿರಬೇಕು. ಹೀಗೆ ಮಾಡುವುದರಿಂದ ತನಗೆ ಬೇಟೆಯಾಡುವುದರಲ್ಲಿಯೂ

---

೧೯. ಪ್ರೊ. ಎಸ್.ಕೆ. ರಾಮಚಂದ್ರಾವ್, ೧೯೮೧, **ಕರ್ನಾಟಕದ ಕಲೆಗಳು, ಸಂಪುಟ–೧**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.ಸಂ. ೩–೪.

ಸಹಾಯವಾಗುತ್ತದೆ ಎಂದು ಅನುಭವಕ್ಕೆ ಬಂದಿದ್ದರಿಂದ ಬಣ್ಣಗಳನ್ನು ಕಲಾತ್ಮಕವಾಗಿ ಜೋಡಿಸುವುದನ್ನು ಕಲಿತನು. ಕ್ರಮೇಣ ಚಿತ್ರಗಳಿಲ್ಲದೇ ತನಗೆ ಬೇಟೆ ಸಿಗದು, ಕ್ರೂರ ಪ್ರಾಣಿಗಳಿಂದ ರಕ್ಷಣೆ ಸಿಗದು ಎಂದು ಅರಿತಿದ್ದರಿಂದ ಅವುಗಳನ್ನು ಶಾಶ್ವತವಾಗಿ ತನ್ನ ಶರೀರದ ಮೇಲೆ ಬಿಡಿಸಲು ಯತ್ನಿಸಿರಬೇಕು. ಮೊಟ್ಟ ಮೊದಲನೆಯ ಹಚ್ಚೆ ಸಸ್ಯ ಬಣ್ಣ ಮತ್ತು ಮುಳ್ಳಿನ ಸಹಾಯದಿಂದ ನಿರ್ಮಾಣವಾಗಿರಬೇಕು. ಇಂದಿಗೂ ಅಂತಹದೇ ಪದ್ಧತಿ ಬಳಕೆಯಲ್ಲಿ ಇದೆ. ಹಚ್ಚೆ ಬಿಡಿಸಿಕೊಳ್ಳುವುದು ಧಾರ್ಮಿಕವೆಂದು ಪರಿಗಣಿಸ ಲಾರಂಭಿಸಿದ್ದರಿಂದ ಅವನ್ನು ಹಾಕುವ ತಜ್ಞರು ಬೆಳೆದುಕೊಂಡರು. ಮುಂದೆ ಹಚ್ಚೆ ಹಾಕುವಿಕೆಯನ್ನು ತಮ್ಮ ಉದ್ಯೋಗವನ್ನಾಗಿಸಿ ಬದುಕಲು ಪ್ರಾರಂಭಿಸಿದರು. ಆದಿವಾಸಿ ಬುಡಕಟ್ಟುಗಳು ಈ ಕಲೆಯಲ್ಲಿ ಪರಿಣತಿಯನ್ನು ಹೊಂದಿದ್ದರು. ನಮ್ಮ ನಾಡಿನಲ್ಲಿ ಕೊರವಂಜಿ, ಕೊರವರು, ಕುಕ್ಕೆ ಕೊರವರು, ಸಿಳ್ಳೇಕ್ಯಾತರು, ಬುರುಡೆ ಬೆಸ್ತರು, ಮೇದರು ಜೋಗಿಗಳು ಇವರಲ್ಲಿ ಹಚ್ಚೆ ಹಾಕುವುದರಲ್ಲಿ ಗಟ್ಟಿಗರು. ಇವರ ಕಲೆಗಾರಿಕೆಯ ಪ್ರಯೋಜನವನ್ನು ಜನಾಂಗವೆಲ್ಲ ಪಡೆದುಕೊಳ್ಳುತ್ತಿದ್ದಿತು. ಒಂದೆಡೆ ನಿಲ್ಲದೆ ಊರೂರು ಅಲೆಯುತ್ತ ಈ ಜನರು ಹಳ್ಳಿಯ ಸಂತೆಗಳಲ್ಲಿ ಜನರ ಗುಂಪನ್ನು ನೆರೆಯಿಸಿಕೊಂಡು ಹಚ್ಚೆ ಹಾಕುತ್ತಿದ್ದರು. ಹಾಕಿದ್ದಕ್ಕೆ ಪ್ರತಿಫಲವಾಗಿ ಅಕ್ಕಿ ವೀಳೆಯದೆಲೆ, ಅಡಿಕೆ, ಬಾಳೆಹಣ್ಣು, ಸ್ವಲ್ಪ ಹಣ ಪಡೆಯುವರು. ಇವರಿಗೆ ಬದುಕೂ ಆಯಿತು, ಗಿರಾಕಿ ಮೈ ಮೇಲೆ ಕಲೆಯೂ ಮೂಡಿತು.

"ಕೇರಳದ ಕಡೆ ಕಾಕ್ಕಾಲನ್ ಪಂಗಡದ ಹೆಂಗಸರು ಹಚ್ಚೆ ಹಾಕುತ್ತಾರೆ. ಹಲವು ಹಚ್ಚೆಯ ವಿನ್ಯಾಸಗಳನ್ನು ಬರೆದಿಟ್ಟುಕೊಂಡ ಕಡತವನ್ನು, ನಾಲ್ಕಾರು ಸೂಜಿಗಳನ್ನು, ಮಸಿಯನ್ನೂ ಹಿಡಿದುಕೊಂಡು ಊರೂರು ಕೇರಿಕೇರಿ ತಿರುಗಾಡುತ್ತಾರೆ. ತಮ್ಮ ಕಡತದಿಂದ ಗಿರಾಕಿಯು ಬಯಸಿದ ಹಚ್ಚೆಯನ್ನು ಓರಣವಾಗಿ ಹಾಕುತ್ತಾರೆ. ತೋರಿಸಿದ ನಕ್ಷೆಯನ್ನು ಕರಾರುವಾಕ್ಕಾಗಿ ಹಚ್ಚೆಯಲ್ಲಿ ಇಳಿಸುವುದು ಇವರ ಜಾಣತನ. ಮೊನಚಾದ ಸಣ್ಣ ಕಡ್ಡಿಯಿಂದ ಮಸಿಯಲ್ಲಿ ಚರ್ಮದ ಮೇಲೆ ಈ ನಕ್ಷೆಯನ್ನು ಗುರುತಿಸಿಕೊಂಡು, ಅನಂತರ ಆ ವಿನ್ಯಾಸದ ಮೇಲೆ ಸೂಜಿಯಿಂದ ಚುಚ್ಚಿ ಚರ್ಮವನ್ನು ತಣ್ಣೀರಿಂದ ತೊಳೆದು ತಾವು ಸಿದ್ಧಪಡಿಸಿ ತಂದಿರುವ ಹಸಿರು ಮಸಿಯನ್ನು ಆ ಭಾಗದಲ್ಲಿ ಉಜ್ಜುತ್ತಾರೆ. ನೋವಾಗದಿರ ಲೆಂದು ಕೊಬ್ಬರಿ ಎಣ್ಣೆಯನ್ನು ತಿಕ್ಕುವರು. ಬಣ್ಣ ಹೊಳೆಯಲು ಸ್ವಲ್ಪ ಅರಿಶಿಣವನ್ನು ಸೇರಿಸುತ್ತಾರೆ. ಹೀಗೆ ಹಚ್ಚೆ ಹಾಕುವ ಬಗೆಗೆ ಅವರಲ್ಲಿ ಪಚ್ಚಾಕುತ್ತುಕ ಎಂದರೆ ಹಸಿರು ಬಣ್ಣವನ್ನು ಚುಚ್ಚುವುದು ಎಂದು ಹೆಸರಿದೆ."[೨೦]

---

೨೦. ಡಾ. ಎಚ್.ಜೆ. ಲಕ್ಕಪ್ಪಗೌಡ(ಪ್ರ.ಸಂ.), ೧೯೯೮, **ಸುವರ್ಣ ಜಾನಪದ, ಸಂಪುಟ–೨,** ಪು.ಸಂ. ೪೫.

ಕರ್ನಾಟಕದಲ್ಲಿ ಹಚ್ಚೆ ಹಾಕುವ ಕೆಲವೊಂದು ಸಮುದಾಯಗಳಿವೆ. ಕೊರವಂಜಿ, ಕೊರವರು, ಜೋಗಿಗಳು ಮುಂತಾದ ಜನ ಸಮುದಾಯಗಳು ಹಳ್ಳಿ ಹಳ್ಳಿಗೆ ತೆರಳಿ ಮೇಲೆ ಪ್ರಸ್ತಾಪಿಸಿದ ಮಾದರಿಯಲ್ಲಿ ಹಚ್ಚೆ ಹಾಕುವುದು. ಲಂಬಾಣಿಗರಿಗೆ ಹಚ್ಚೆ ಹಾಕುವ ಪದ್ಧತಿ ರೂಢಿಯಲಿಲ್ಲ. ಅವರು ಲಂಬಾಣೇತರ ಸಮುದಾಯದವರಿಂದ ತಮ್ಮ ಮೈ ಮೇಲೆ ಹುಯ್ಸಿಕೊಳ್ಳುವರು. ಈ ಹಚ್ಚೆಯನ್ನು ಅರಿಶಿನದ ಪುಡಿ, ಅಗಸೇ ಗಿಡದ ಎಲೆಗಳನ್ನು ಅರೆದು ಲೇಪ ಮಾಡಿ ಅದನ್ನು ತೆಳುವಾದ ಬಟ್ಟೆಯ ಮೇಲೆ ಹರಡಿ, ಅನಂತರ ಅದನ್ನು ಬತ್ತಿಯಂತೆ ಸುತ್ತಿ, ಹರಳೆ ಎಣ್ಣೆ ದೀಪದ ಮೇಲೆ ಹಿಡಿದು, ಬಟ್ಟೆಗೆ ಬೆಂಕಿ ಸೋಕಿಸುತ್ತಾರೆ. ಒಂದು ಮಡಕೆಯನ್ನು ಅದರ ಮೇಲೆ ದಬ್ಬಿ ಹಾಕುತ್ತಾರೆ. ಮಡಕೆಯ ಒಳಭಾಗದಲ್ಲಿ ಕಪ್ಪು ಹಿಡಿಯುತ್ತದೆ. ಅದನ್ನು ಕೆರೆದು ತೆಗೆದುಕೊಂಡು ಎದೆಹಾಲಿನಲ್ಲಿ ಅಥವಾ ನೀರಿನಲ್ಲಿ ಬೆರೆಸುತ್ತಾರೆ. ಇದೇ ಹಚ್ಚೆ ಅಗಸೆಯ ಸೊಪ್ಪು ಮಾತ್ರವಲ್ಲದೆ ಕುರುವೆಪ್ಪಿಲ, ಕರಿಸಾರಂಗನ್ನಿ ಮೊದಲಾದ ಇತರ ಎಲೆಗಳನ್ನೂ ಬಳಸುವುದುಂಟು. ನಮ್ಮ ಕಡೆ ಹತ್ತಾರು ಬಗೆಯ ಎಲೆಗಳನ್ನು ಆರಿಸಿಕೊಂಡು ಅವುಗಳ ರಸವನ್ನು ತೆಗೆದು ಹಚ್ಚೆಯ ಮಸಿಯನ್ನು ತಯಾರು ಮಾಡುತ್ತಾರೆ. ಬರಗರಾಗನ ಸೊಪ್ಪು, ಹೊನ್ನಗೊನ್ನೆ, ಎದೆಹಾಲಿನ ಸೊಪ್ಪು, ಮರವರಿಕೆ ಸೊಪ್ಪು, ಮಣಿಯವರ ಸೊಪ್ಪು, ತುಂಬಿ ಸೊಪ್ಪು, ತಿರುಗೋಣಿ ಸೊಪ್ಪು, ಮೊದಲಾದುವೆಲ್ಲ ಹಚ್ಚೆಯ ಸೊಪ್ಪುಗಳೇ, ಇವಲ್ಲದೆ ಹಾಗಲಕಾಯಿ ಎಲೆ ರಸ ಚಪ್ಪದವರೆ ರಸಗಳನ್ನೂ ಬಳಸುತ್ತಾರೆ. ಸೊಪ್ಪಿನ ರಸವನ್ನು ಹಿಂಡಿಕೊಂಡು, ಹೆಂಚಿನ ಮೇಲೆ ಹರವಿ ಬಳಿದು, ನೆರಳಿನಲ್ಲಿ ಒಣಗಿಸುತ್ತಾರೆ. ಅನಂತರ ಅಚ್ಚೆಳ್ಳೆಣ್ಣೆ ದೀಪದ ಮೇಲೆ ಈ ಹೆಂಚನ್ನು ಹಿಡಿದು ಕಪ್ಪನ್ನು ಸಂಗ್ರಹಿಸಿಕೊಳ್ಳುತ್ತಾರೆ. ಇದನ್ನು ಎದೆಹಾಲಿನಲ್ಲಿ ಕಲಸಿದರೆ ಹಚ್ಚೆಯಾಯಿತು. ಇದನ್ನು ಮೊದಲೇ ಮಾಡಿಟ್ಟುಕೊಂಡಿರುತ್ತಾರೆ. ಹಚ್ಚೆ ಹಾಕುವಾಗ ತಣ್ಣೀರಿನಲ್ಲಿ ಕಲಸಿಕೊಳ್ಳುತ್ತಾರೆ.

ವೀಳೆಯದೆಲೆ ರಸದಿಂದಲೂ ಹಚ್ಚೆಯನ್ನು ಮಾಡುವುದುಂಟು. ಆದರೆ ಇದಕ್ಕೆ ಸೆಗಣಿಯನ್ನು ಸ್ವಲ್ಪ ಸೇರಿಸಿ, ಕಪ್ಪನ್ನು ಪಡೆಯಲು ಹರಳೆಣ್ಣೆ ದೀಪವನ್ನು ಬಳಸಬೇಕು. ಹಚ್ಚೆ ಸೊಪ್ಪೆಂದು ಒಂದು ಸೊಪ್ಪಿದೆ. ಅದರ ರಸಕ್ಕೆ ಸ್ವಲ್ಪ ಇದ್ದಿಲು ಪುಡಿಯನ್ನು ಬೆರೆಸಿದರೆ ಆಯ್ತು.

ಪ್ರಾದೇಶಿಕವಾಗಿ ಈ ಕಲೆಯನ್ನು ಅನೇಕ ಹೆಸರುಗಳಿಂದ ಕರೆಯುವ ರೂಢಿ ಇದೆ. ಹಚ್ಚೆ, ಅಚ್ಚೆ, ಹಂಚೆ, ಅಣಚೆ, ಹಣಚೆ ಎಂಬ ಪದಗಳ ಆಯಾ ಪ್ರಾದೇಶಿಕ ಹಿನ್ನೆಲೆಯಲ್ಲಿ ಬಳಕೆಯಾಗುತ್ತವೆ. ಅಣ್ ಎಂದರೆ ಲೇಪಿಸು ಅಥವಾ ಅಂಟು ಎಂಬ ಅರ್ಥ ನಿಷ್ಪನ್ನಗೊಳ್ಳುತ್ತದೆ ಎಂದು ಕೆಲವರ ಅಭಿಪ್ರಾಯ. ಈ ಅಣಚೆ ಎಂಬ ಪದಕ್ಕೆ ನಮ್ಮ ಪೂರ್ವಿಕರು ಮುತ್ತೈದೆ, ಸುಮಂಗಲೆ, ಗರತಿ ಎನ್ನುವ ವಿಶಾಲ ಅರ್ಥವನ್ನು ನೀಡಿದ್ದಾರೆ.

ನಮ್ಮ ಪೂರ್ವಿಕರು ಗರತಿತನದ ಸೌಭಾಗ್ಯದ ಸಂಕೇತವಾಗಿ ಈ ಹಚ್ಚೆ ಕಲೆಯನ್ನು ಹಾಕಿಸಿಕೊಳ್ಳುತ್ತಿದ್ದರು.

ಪ್ರಾದೇಶಿಕವಾಗಿ ವಿವಿಧ ರೂಪಗಳಿಂದ ಕರೆಯಲಾಗುವ ಈ ಕಲೆಗೆ ತಮಿಳು ಮತ್ತು ಮಲಯಾಳಂ ಭಾಷೆಗಳಲ್ಲಿ ಪಚ, ಪಚ್ಚ ಎಂಬ ರೂಪಗಳಿವೆ. ಪಚ, ಪಚ್ಚೆ, ಹಚ್ಚೆ ಎಂದರೆ ಹಸಿರು ಎಂಬ ಅರ್ಥವಿದೆ. ಇತರ ದ್ರಾವಿಡ ಭಾಷೆಗಳಲ್ಲಿಯೂ ಇಂತಹದೇ ರೂಪಗಳಿವೆ. ಗಿಡಮೂಲಿಕೆಗಳಿಂದ ಸಿದ್ಧಪಡಿಸಿದ ರಸ ದೇಹದ ಮೇಲಿನ ಚಿತ್ರಗಳಿಗೆ ಹಳದಿ ಮಿಶ್ರಿತ ಹಸಿರು ಬಣ್ಣದ ಛಾಯೆಯನ್ನು ಕೊಡುವುದರಿಂದ ಈ ಹೆಸರು ಬಂದಿರಬಹುದು ಎಂಬ ಅಭಿಪ್ರಾಯವಿದೆ. ಹಚ್ಚೆ ದೇಹದ ಮೇಲೆ ಅಲಂಕಾರವೂ ಹೌದು, ಜನರ ನಂಬಿಕೆಗಳ ಸಂಕೇತವೂ ಹೌದು. ಜನಿಸಿದ ಮಾನವ ಸತ್ತ ಮೇಲೆ ಪುನಃ ಹಾಗೆಯೇ ಹೋಗದೆ ತಮ್ಮೊಡನೆ ಹಚ್ಚೆ ಗುರುತುಗಳು ಬರುತ್ತವೆ ಎಂಬ ನಂಬಿಕೆ ಅನೇಕ ಜನಪದ ಸಂಸ್ಕೃತಿಯಲ್ಲಿ ಕಂಡುಬರುತ್ತದೆ. ಈ ಹಚ್ಚೆಗಳ ಮೇಲೆ ಜನಪದರು ಹಾಡುಗಳನ್ನು ಕಟ್ಟಿಕೊಂಡಿದ್ದಾರೆ.

ಸತ್ತಾರೆ ನಮಕೂಟೆ
ಮತ್ತೇನು ಬರಬಹುದು
ಹಚ್ಚೆಯ ಒಟ್ಟು ಸೂಲಿಹಲ್ಲು
ಕಟ್ಟಿರೊ ತುರುಬು

ಎಂಬ ಉಕ್ತಿಯಿಂದ ಜನಪದರಿಗೆ ಹಚ್ಚೆಯ ಬಗ್ಗೆ ಇರುವ ಮನೋಧೋರಣೆಯನ್ನು ತಿಳಿಸಿಕೊಡುತ್ತದೆ. ಕರ್ನಾಟಕದಲ್ಲಿ ಈ ಹಚ್ಚೆಯ ಕುರಿತಾಗಿ ಪ್ರಾಚೀನ ಇತಿಹಾಸ ಇದ್ದರೂ ನಮಗೆ ಶರಣರ ವಚನಗಳಲ್ಲಿ ಅಲ್ಲಲ್ಲಿ ಹಚ್ಚೆಯ ಉಲ್ಲೇಖ ಕಂಡುಬರುತ್ತದೆ. "ಐದೆ ಅಣಚೆಯಿಲ್ಲವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ" ಎಂಬ ಮಾತು ಬಸವಣ್ಣನವರ ವಚನಗಳಲ್ಲಿ ಬಂದರೆ, "ಅಣಚೆತನವಂ ಕೈಕೊಳ್ ನಿನ್ನೋಲೆ ಭಾಗ್ಯದ ಭದ್ರ ಲಕ್ಷಣದ ಪದದೊಳ್ ಸಂಧೀ ಸೌಭಾಗ್ಯದಿಂ ಸ್ವಜನಗಳಿಂ ತಣಿಸಿ" ಎಂಬ ಮಾತು ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಬಂದಿದೆ. ಮತ್ತೊಂದೆಡೆ ಬಸವಣ್ಣನವರು ಹಚ್ಚೆ ಹಾಕಿಸಿಕೊಂಡ ಹರಭಕ್ತೆಯ ಕೈಯಿಂದ ಕೊಂಬ ಪ್ರಸಾದ ಪ್ರಸಾದವಲ್ಲ ಅದು ನರಮಾಂಸ, ಹೆಂಡ ಹಾಗೂ ನಾಯಿ ರಕ್ತಕ್ಕೆ ಸಮಾನ ಎಂಬ ಟೀಕೆ ಮಾಡಿದ್ದಾರೆ. ಇವೇ ಮುಂತಾದ ಉಲ್ಲೇಖಗಳಿಂದ ಹನ್ನೆರಡನೇ ಶತಮಾನಕ್ಕೂ ಪೂರ್ವದಲ್ಲಿಯೇ ಕರ್ನಾಟಕದಲ್ಲಿ ಹಚ್ಚೆ ಕಲೆ ಪ್ರಚಲಿತದಲ್ಲಿತ್ತೆಂದು ತಿಳಿದುಬರುತ್ತದೆ.[೨೧] ಈ ರೀತಿಯ ಕಲಾಮಾದರಿಯನ್ನು ಅನೇಕ

---

೨೧. ಪ್ರೊ. ಎಸ್.ಕೆ. ರಾಮಚಂದ್ರರಾವ್, ೧೯೮೧, **ಕರ್ನಾಟಕದ ಕಲೆಗಳು, ಸಂಪುಟ–೧,** ಪು.ಸಂ. ೫.

ಬುಡಕಟ್ಟು ಸಮುದಾಯಗಳು ತಮ್ಮ ಮೈ ಮೇಲೆ ಅಂದ ಚಂದ ಕಾಣುವಂತೆ ಹಾಕಿಸಿಕೊಳ್ಳುವರು.

ಹಚ್ಚೆ ಹಾಕಿಸುವ ಪದ್ಧತಿ ಸರ್ವದೇಶ ಹಾಗೂ ಜನಾಂಗಗಳಲ್ಲಿ ಪ್ರಚಲಿತವಿದೆ. ನಮ್ಮ ಪೂರ್ವಜರು ಈ ಹಚ್ಚೆಯ ಬಗ್ಗೆ ತುಂಬಾ ಆಸಕ್ತಿಯನ್ನು ಹೊಂದಿದ್ದರು, ತಮ್ಮ ತಮ್ಮ ಇಷ್ಟಕ್ಕೆ ಅನುಸಾರವಾಗಿ ದೇವಾನುದೇವತೆಗಳ ಚಿತ್ರಗಳನ್ನು ತಮ್ಮ ಕೈಗಳ ಮೇಲೆ ಹೊಯ್ಯಿಸಿಕೊಳ್ಳುತ್ತಿದ್ದರು. ಅತ್ಯಾಧುನಿಕರೆನಿಸಿಕೊಂಡವರು ಕೂಡ ಹಣೆ, ಗಲ್ಲ, ತೋಳು, ಬೆನ್ನು ಹೀಗೆ ಮುಂತಾದ ಭಾಗಗಳ ಮೇಲೆ ಆಕರ್ಷಣೆಯ ಹಚ್ಚೆಯನ್ನು ಹಾಕಿಸಿಕೊಂಡಿರುತ್ತಾರೆ.

ಕೆಲವು ಆದಿವಾಸಿಗಳು ಎಲ್ಲಾ ಹಚ್ಚೆಯನ್ನು ಏಕಕಾಲದಲ್ಲಿ ಬಿಡಿಸಿಕೊಳ್ಳದೆ ಅನುಕೂಲವಾದಾಗ ಅದನ್ನು ಜೋಡಿಸುತ್ತ ಹೋಗುತ್ತಾರೆ. ನಾಮಕರಣ ಮಾಡುವಾಗ, ಋತುಮತಿಯಾದಾಗ ಹೀಗೆ ವಿವಿಧ ಕಾಲಗಳಲ್ಲಿ ಬಿಡಿಸಿಕೊಳ್ಳುವ ಹಚ್ಚೆಗಳಿವೆ. ವಾರಕ್ಕೊಮ್ಮೆ ಸೇರುವ ಸಂತೆಗಳಲ್ಲಿ ಅಥವಾ ಹಟ್ಟಿ, ತಾಂಡಾಗಳಲ್ಲಿ ಬರುವ ಹಚ್ಚೆ ಹಾಕುವವರಿಂದ ತಮ್ಮ ದೇಹದ ಭಾಗಗಳ ಮೇಲೆ ಹೊಯ್ಯಿಸಿಕೊಳ್ಳುವರು. ಹಬ್ಬ ಹರಿದಿನ ಮದುವೆಯ ಕಾಲಗಳಲ್ಲಿ ಹಚ್ಚೆಯವರೇ ಹಳ್ಳಿಗೆ ಬಂದು ತಮ್ಮ ಕೆಲಸಕ್ಕಾಗಿ ಕಾಳು, ಕಡ್ಡಿ, ಬಟ್ಟೆ ಮುಂತಾದ ಪರಿಕರಗಳನ್ನು ಪಡೆಯುತ್ತಾರೆ. ತ್ರಿಕೋನ, ಚೌಕೋನ, ಚಚ್ಚೌಕಕೋನಗಳು, ರಂಗೋಲಿ, ಸಸ್ಯ ಜಾತಿಗೆ ಸಂಬಂಧಿಸಿದ ಅನೇಕ ಗಿಡಮರಗಳನ್ನು ತಮ್ಮ ಕೈತೋಳು ಹಾಗೂ ಕಾಲಿನ ಭಾಗಗಳಲ್ಲಿ ಅಂದವಾಗಿರುವಂತೆ ಹಾಕಿಸಿಕೊಳ್ಳುತ್ತಿದ್ದರು.

ಲಂಬಾಣಿ ಮಹಿಳೆಯರು ತಮ್ಮ ಕೈತೋಳು ಮುಂಗೈ ಕಾಲಿನ ಮೀನಖಂಡಗಳಲ್ಲಿ ಅಂದ ಚಂದದ ರಂಗೋಲಿ, ಹೂಬಳ್ಳಿ, ಗಿಡಮರ, ಹದ್ದು, ನವಿಲು, ಪಾರಿವಾಳ, ಬಾಳೆಗಾಡ್ರೆ ಹೀಗೆ ಅನೇಕ ರೀತಿಯ ಹಚ್ಚೆಯನ್ನು ಹಾಕಿಸುತ್ತಿದ್ದರು. ಸಾಮಾನ್ಯವಾಗಿ ಆದಿವಾಸಿಗಳು ಹಣೆಯ ಮೇಲೆ ಬೊಟ್ಟು, ಕೆನ್ನೆಗಳ ಮೇಲೆ ಚುಕ್ಕಿ, ಗದ್ದದ ಮೇಲೆ ಗುಂಡು, ಎದೆಯ ಮೇಲೆ ಅಂಗೈ ಕಮಲದ ಹೂ ಆಕಾರವನ್ನು ತಮ್ಮ ದೇಹದ ಭಾಗಗಳಲ್ಲಿ ಹುಯ್ಯಿಸಿಕೊಳ್ಳುವರು. ಹಳ್ಳಿಗಾಡಿನ ಜನರು ಹಲವಾರು ಮಾದರಿಯಲ್ಲಿ ಹಚ್ಚೆ ಹಾಕಿಸಿಕೊಳ್ಳುವರು. ಮುತ್ತಿನ ಹಾರ, ತೋಳುಚಪ್ಪರ, ದುಂಡು ಮಲ್ಲಿಗೆ, ಗಿಳಿಪದ್ಮ, ಸೀತೆಯ ಸೆರಗು, ಮಾವಿನ ಎಲೆ, ಜೋಗಿಯ ಜಡೆ, ಗೌರಿಗದ್ದುಗೆ, ನಾಗರ ಹೆಡೆ, ಬಲೆಗುಪ್ಪು, ಹುಲಿ ಉಗುರು, ತಾವರೆ ಎಲೆ, ಮೊದಲಾದ ವಿನ್ಯಾಸಗಳಲ್ಲಿ ಹಾಕಿಸುವರು, ಮದುವೆಯಾದ ಹೆಣ್ಣುಮಕ್ಕಳ ಹಣೆಯ ಮೇಲೆ ನಕ್ಷತ್ರ ಹಚ್ಚೆ ಹಾಕಿಸಿಕೊಂಡರೆ, ಮದುವೆಯಾಗುವ ಮೊದಲು ಏಳು ವರ್ಷ ವಯಸ್ಸಾದ ಮೇಲೆ ಮೈನೆರೆಯುವ ಮುಂಚೆ ಸೂರ್ಯ, ಚಂದ್ರರ ಹಚ್ಚೆ, ಹಾಕಿಸಿಕೊಳ್ಳುವ ವಾಡಿಕೆ.

ಹುಬ್ಬುಗಳ ನಡುವೆ ದೃಷ್ಟಿಬೊಟ್ಟು ಹಣೆಯ ಮೇಲೆ ಅರ್ಧ ಚಂದ್ರ, ತೋಳುಗಳ ಮೇಲೆ ತೋಳು ಚಪ್ಪರ, ಕುಬುಸದ ಹಚ್ಚೆ, ಗೌರಿಗದ್ದುಗೆ, ಮೊದಲಾದುವು, ಕೈ ಹಿಂಭಾಗದಲ್ಲಿ ಜೋಗಿಯ ಜಡೆ, ತಾವರೆ ಹೂವು, ಅಷ್ಟಕೊಳ, ಹೆಬ್ಬೆರಳ ಮೇಲೆ ಹುಲಿಯುಗುರು, ಒಲೆಗುಪ್ಪು, ಕಾಲುಗಳ ಮೇಲೆ ಕಮಲದ ಹಚ್ಚೆ ಅಥವಾ 'ಹಸೆ' ಇವನ್ನು ಕಾಣಬಹುದು. ಎದೆಯ ಮೇಲೆ ಮೊಸಳೆ, ಗಿಳಿ, ಮೀನು, ಜೇಡ, ಇವನ್ನು ಹಚ್ಚೆಗಳಲ್ಲಿ ಹಾಕಿಕೊಳ್ಳುವ ಜನರಿದ್ದಾರೆ". ಅಲ್ಲದೆ ಕೆಲವು ಜನರು ಈ ಹಚ್ಚೆಗೆ ಧಾರ್ಮಿಕ ಸಾಂಕೇತಿಕ ರೂಪವನ್ನು ಸಹ ನೀಡಿದ್ದಾರೆ. ವೈಷ್ಣವ ಪಂಗಡಕ್ಕೆ ಸೇರಿದ್ದರೆ ಚಕ್ರಾಂಕನ, ಶೈವರಾದರೆ ಪುಂಡ, ತ್ರಿಶೂಲ, ಲಿಂಗ, ಬಸವಗಳ ಚಿಹ್ನೆಗಳಿದ್ದರೆ, ಕ್ರೈಸ್ತರಲ್ಲಿ ಶಿಲುಬೆ, ದೇವರ ಹೆಸರನ್ನು ಹಚ್ಚೆಯಲ್ಲಿ ಬರೆಯಿಸಿಕೊಳ್ಳುವ ಪದ್ಧತಿ ಈಗಲೂ ನಮ್ಮಲ್ಲಿದೆ. ಓಂ, ಶ್ರೀ, ಸ್ವಸ್ತಿಕ್ ಮುಂತಾದ ಮಾದರಿಯ ಹಚ್ಚೆಗಳನ್ನು ಹಾಕಿಸಿಕೊಳ್ಳುವರು.

ಈ ರೀತಿಯ ಹಚ್ಚೆಗಳು ಒಂದೊಂದು ಅರ್ಥವನ್ನು ಸೂಕ್ಷ್ಮವಾಗಿ ನೀಡುವವು. ಹಣೆಯ ಮೇಲಿನ ಹಚ್ಚೆ ಬೊಟ್ಟು ಲಕ್ಷ್ಮಿಯ ಸಂಕೇತವಂತೆ, ನವಿಲು ಹಚ್ಚೆ ಸರಸ್ವತಿಯದು ಮುಡಿ ಗೌರಿಯದು, ಹೆಜ್ಜೆ ಸೀತೆಯದು, ಸಂತಾನವನ್ನು ಬಯಸುವವರು ಮೀನಿನ ಹಚ್ಚೆಯನ್ನು ಹಾಕಿಸಿಕೊಳ್ಳುತ್ತಾರೆ. ದಾಂಪತ್ಯ ಸುಖ ಬೇಕೆನ್ನುವರು ಬಾಚಣಿಕೆಯ ಹಚ್ಚೆಯನ್ನು ಆರಿಸಿಕೊಂಡು ತಮ್ಮ ಅಂಗಗಳ ಮೇಲೆ ಹಚ್ಚೆಯನ್ನು ಹೊಯ್ಸಿಕೊಳ್ಳುವರು.

ಈ ಹಚ್ಚೆಯು ಲಂಬಾಣಿ ಸಮುದಾಯದಲ್ಲಿ ಪುರುಷರಿಗಿಂತ ಮಹಿಳೆಯರಿಗೆ ಹೆಚ್ಚು ಪ್ರಿಯವಾದ ಕಲೆಯಾಗಿದೆ. ಇವರು ತಮ್ಮ ಹಣೆ, ಗಲ್ಲ, ಕುತ್ತಿಗೆ, ಕೈತೋಳು, ಕಾಲು, ಮೊಣಕಾಲಿನ ಮೇಲೆ ಹಚ್ಚೆಯನ್ನು ಕಾಣಬಹುದು. ಮದುವೆಯ ಮೊದಲು ನಂತರ ಹಚ್ಚೆ ಹಾಕಿಸಿಕೊಳ್ಳುವುದು ಜನಪದದಲ್ಲಿ ಕಂಡುಬರುತ್ತದೆ. ತಮ್ಮ ದೇಹದ ಸೌಂದರ್ಯವರ್ಧನೆಗಾಗಿ ಹಚ್ಚೆಯನ್ನು ಹೆಚ್ಚು ಜನ ದೇಹದ ಅಂಗಾಂಗಗಳ ಮೇಲೆ ಹಾಕಿಸಿಕೊಳ್ಳುತ್ತಿದ್ದರು.

ಭಾರತಕ್ಕೆ ಬಂದ Tavernier ವಿದೇಶಿ ಪ್ರವಾಸಿಗನು ಬಂಜಾರಾ(ಲಂಬಾಣಿ) ಮಹಿಳೆಯರ ಮೈ ಮೇಲೆ ಇರುವ ಹಚ್ಚೆಯನ್ನು ಕಂಡು ಈ ಕೆಳಗಿನಂತೆ ಉಲ್ಲೇಖಿಸಿದ್ದಾನೆ. "Their women from their wrist upwards tatoo their skin with flowers, and they paint these flowers in diverse colours with the juice of the roots in such a manner to apper as though the skin was a flowered fabric"[೨೨] (ಬಂಜಾರ ಜಾತಿಯ ಮಹಿಳೆಯರು ಮುಂಗೈಯಿಂದ ತೋಳಿನವರೆಗೆ ತಮ್ಮ ಕೈಗಳನ್ನು ಹೂವಿನ ಹಚ್ಚೆಯಿಂದ ಸಿಂಗರಿಸಿಕೊಂಡು ಅದಕ್ಕೆ ಅನೇಕ ಬೇರುಗಳ ರಸದಿಂದ

---

೨೨. L.K. Anathakrishna Iyer, 1935, **The Mysore Tribes and Caste-Vol-I**, page-437.

ತಯಾರಿಸಿದ ವಿವಿಧ ಬಣ್ಣಗಳನ್ನು ಹಚ್ಚಿಕೊಂಡು ಚರ್ಮವೇ ಹೂವಿನೋಪಾದಿಯಲ್ಲಿ ಕಾಣುವಂತೆ ಮಾಡಿಕೊಳ್ಳುತ್ತಿದ್ದರು ಎನ್ನುತ್ತಾರೆ). ಲಂಬಾಣಿ ಮಹಿಳೆಯರಲ್ಲಿ ಹಚ್ಚೆಯು ಸೌಂದರ್ಯ ಹಾಗೂ ಸೌಭಾಗ್ಯದ ಅಂಶಗಳಾಗಿ ಕಂಡುಬರುತ್ತವೆ. ಹಚ್ಚೆ ಹಾಕಿಸಿಕೊಳ್ಳದೆ ಹೋದರೆ ಸ್ವರ್ಗದಲ್ಲಿ ಸ್ಥಾನ ಸಿಗಲಾರದೆಂಬ ನಂಬಿಕೆ ಇದೆ. ದೇಹದ ಅನೇಕ ಭಾಗಗಳಲ್ಲಿ ಹಚ್ಚೆ ಹಾಕಿಸಿಕೊಳ್ಳುತ್ತಿದ್ದರೆ ನಮ್ಮ ಜನಪದರ ಉದ್ದೇಶ ಜನ ನೋಡುವಂತಿರಬೇಕು ಹಾಗೂ ಮೆಚ್ಚುವಂತೆ ಇರಬೇಕು ಎಂಬ ಹಿನ್ನೆಲೆಯಲ್ಲಿ ಚುಚ್ಚಿಸಿಕೊಳ್ಳುತ್ತಿದ್ದರು. ಕಣ್ಣಿಗೆ ಕಾಣಲು ಹೆಚ್ಚು ಅಂದವಾದ ಚಿತ್ತಾಕರ್ಷಕವಾದ ಹಚ್ಚೆಗಳನ್ನು ಹಾಕಿಸಿಕೊಳ್ಳುತ್ತಿದ್ದರು.

ಈ ಸಮುದಾಯದಲ್ಲಿ ಹಚ್ಚೆ ಚುಚ್ಚಿಸಿಕೊಳ್ಳುವ ಸಂಪ್ರದಾಯವನ್ನು ಕುರಿತಾಗಿ ಡಾ. ಪಿ.ಕೆ. ಖಂಡೋಬಾ ಅವರು ಈ ಕೆಳಗಿನಂತೆ ಅಭಿಪ್ರಾಯಪಡುತ್ತಾರೆ. ರಂಗುರಂಗಿನ ಚಿತ್ರವಿಚಿತ್ರವಾದ ವೇಷಭೂಷಣಗಳಲ್ಲಿ ಕಾಣಿಸಿಕೊಳ್ಳುವ ಇಂದಿನ ಲಂಬಾಣಿ ಮಹಿಳೆಯರು ಮೊದಮೊದಲು ನಿಸ್ಸಂದೇಹವಾಗಿಯೂ ಅಪ್ಪಟ ಸುಂದರಿಯರು, ಈಗಲೂ ಅಷ್ಟೇ. ಒಂದು ಕಾಲಕ್ಕೆ ಮುಸ್ಲಿಮರಿಂದಾಗುವ ಅತ್ಯಾಚಾರವನ್ನು ಸಹಿಸಿಕೊಳ್ಳಲಾಗದೆ ಹೇರಡವಿಯನ್ನು ಹೊಕ್ಕು ಅಲ್ಲಿದ್ದ ಜಂಗಲಿ ಜಾತಿಯವರೊಡನೆ ಬೆರೆತು, ತಮ್ಮನ್ನು ತಾವು ರಕ್ಷಿಸಿಕೊಳ್ಳಲು ತಮ್ಮ ಸೌಂದರ್ಯವನ್ನು ಆಕಾರ ವಿಕಾರವನ್ನಾಗಿ ಮಾಡಿಕೊಂಡರು. ಚೂಪಾದ ಆಯುಧಗಳಿಂದ ತೊಡಕಾದ ವಿನ್ಯಾಸಗಳನ್ನು ಮೈ ಮೇಲೆಲ್ಲ ಕೊರೆದುಕೊಂಡು ತಮ್ಮ ಸೌಂದರ್ಯವನ್ನು ಮರೆಮಾಚಿಕೊಂಡರು. ಈ ತೊಡಕು ವಿನ್ಯಾಸವೇ ಮುಂದೆ ಲಂಬಾಣಿಗರಲ್ಲಿ ಹಚ್ಚೆಯ ರೂಪದಲ್ಲಿ ಉಳಿದುಕೊಂಡಿರಲು ಸಾಕು. ವಿವಾಹಪೂರ್ವದಲ್ಲಿಯೇ ಹಚ್ಚೆ ಹಾಕಿಸಿಕೊಳ್ಳುವುದು ಈ ಸಮುದಾಯದಲ್ಲಿ ಕಂಡುಬರುವ ಒಂದು ಸಂಪ್ರದಾಯವಿದೆ.

ಮಹಿಳೆಯರು ತಮ್ಮ ದೇಹದ ಹಣೆ, ಗಲ್ಲ, ಕೆನ್ನೆ, ತೋಳು, ತೊಡೆ, ಕಾಲು, ಅಂಗೈ, ಮುಂಗೈ, ಗದ್ದ, ಹುಬ್ಬುಗಳ ಎರಡು ಬದಿಗೆ, ಎದೆಯ ಮೇಲೆ ಕಲಾತ್ಮಕವಾಗಿ ವಿವಿಧ ಮಾದರಿಯ ರೇಖಾಕೃತಿಗಳ ಹಚ್ಚೆಯನ್ನು ಹಾಕಿಸಿಕೊಳ್ಳುವ ಸಂಪ್ರದಾಯವಿದೆ. ಲಂಬಾಣಿ ಮಹಿಳೆಯರು ಮುಖದ ಮೇಲೆ, ಕೈಗಳ ಮೇಲೆ ಹಚ್ಚೆ ಹಾಕಿಸಿಕೊಳ್ಳುವುದು ಒಂದು ಬಗೆಯ ಅಲಂಕಾರದ ಚಿನ್ನೆಗಳಾಗಿವೆ. ಸಾಮಾನ್ಯವಾಗಿ ಮೂಗಿನ ಎಡಭಾಗದಲ್ಲಿ ಒಂದು ಹಚ್ಚೆ ಗುರುತು ಕೈಗಳ ಮೇಲೆ ತಮ್ಮ ಪ್ರಿಯರಾದ ತಂದೆ ತಾಯಿ, ಅಣ್ಣ ತಮ್ಮ, ಅಕ್ಕ ತಂಗಿ, ತಾಯಿಯ ಸಹೋದರರ ಹೀಗೆ ಹಲವು ತಮ್ಮ ಪ್ರೀತಿಯ ವ್ಯಕ್ತಿಗಳ ಹೆಸರನ್ನು ಹುಯ್ಯಿಸಿಕೊಳ್ಳುವ ಪದ್ಧತಿಯು ಇವರಲ್ಲಿ ಗೋಚರಿಸುತ್ತದೆ. ಇತರೆ ಸಮುದಾಯದ ಮಹಿಳೆಯರಂತೆ ಸೌಭಾಗ್ಯದ ಸಂಕೇತವಾಗಿ ಕುಂಕುಮದ ಬೊಟ್ಟನ್ನು ಇಟ್ಟುಕೊಳ್ಳುವುದಿಲ್ಲ. ಬದಲಾಗಿ ಹಣೆಗೆ ಹಚ್ಚೆಯ ಬೊಟ್ಟನ್ನು ಹಾಕಿಸಿಕೊಳ್ಳುವರು. ಹಚ್ಚೆ ಹಾಕುವ ವೃತ್ತಿಯ ಸಮುದಾಯದವರಾದ ಕೊರವಂಜಿ ಸ್ತ್ರೀಯರು, ಶಿಳ್ಳೆಕ್ಯಾತರು, ಜೋಗಿಯರು, ಮೇದಾರರು,

ವಡ್ಡರು ಇವರಲ್ಲದೆ ಬ್ಯಾಡರು ಮುಂತಾದ ಜಾತಿಯವರು ಹಚ್ಚೆಯನ್ನು ಹಾಕುವ ಸಮುದಾಯಗಳಾಗಿವೆ. ಇವರಿಂದ ಲಂಬಾಣಿ ಮಹಿಳೆಯರು ಗಿಡ, ಬಳ್ಳಿ, ಪಕ್ಷಿ, ಬಾಸಿಂಗ, ಹೂವಿನ ಗೊಂಚಲು, ರಾಮನ ತೊಟ್ಟಿಲು, ಹಾವು, ಚೇಳು, ಮೀನು, ಜರಿಹುಳ, ಗೋದಿಕಾಳು, ಪಗಡಿ ಬಜಾರ, ಪೂಲ್(ಹೂವು), ತೇರು, ಕೇಳಾರಜಾಡ(ಬಾಳೇಗಿಡ), ಪಾಂಚಿಭೇನೆ(ಐದು ಜನ ಅಕ್ಕತಂಗಿಯರು), ಅಡ್ಡತಿಡ್ಡ ಮಲಗಿರುವ, ಪಾಂಚಿಭೇನೆ(ಐದು ಜನ ಅಕ್ಕತಂಗಿಯರು) ಕೊಡ ಎತ್ತಿಕೊಂಡು ಇರುವುದು. ಧರ್ಮೇರ ಹಚ್ಚೆ(ದೊಡ್ಡವಳಾಗುವ ಮುಂಚೆ ಹಚ್ಚೆ ಹಾಕಿಸುವರು). ಹುಲಿ ಉಗುರು, ದುಂಡುಮಲ್ಲಿಗೆ ಹಾಗೂ ಕಮಲದ ಹೂಗಳಂತ ಸುಂದರವಾದ ರೇಖಾಚಿತ್ರಗಳನ್ನು ತಮ್ಮ ದೇಹದ ನಾನಾ ಭಾಗಗಳಲ್ಲಿ ಈ ಮೇಲೆ ಹೇಳಿದ ಸಮುದಾಯದವರಿಂದ ಹಚ್ಚೆ ಹಾಕಿಸಿಕೊಳ್ಳುವರು.

ಲಂಬಾಣಿ ಮಹಿಳೆಯರು ಹೆಚ್ಚಾಗಿ ಸೌಂದರ್ಯವತಿಯರು. ಅದರ ಮೆರುಗನ್ನು ಹೆಚ್ಚಿಸಲು ತಮ್ಮ ದೇಹಕ್ಕೆ ಅನೇಕ ಬಗೆಯ ಅಲಂಕಾರಗಳನ್ನು ಮಾಡಿಕೊಳ್ಳುತ್ತಿದ್ದರು. ಅಲೆಮಾರಿ ಪರಂಪರೆಯವರಾದ ಇವರು ಪ್ರಕೃತಿಯ ಮಡಿಲಲ್ಲಿ ಕಾಣುವ ವಿವಿಧ ವೈಚಿತ್ರ್ಯಗಳನ್ನು ತಮ್ಮ ದೇಹದ ಮೇಲೆ ಹಚ್ಚೆ ಹಾಕಿಸಿಕೊಳ್ಳುತ್ತಿದ್ದರು. ಗಿಡ, ಮರ, ಪಕ್ಷಿ, ಚೇಳು, ಮಾವಿನ ಎಲೆ, ದೀಪದ ಆರತಿ ಹೀಗೆ ತಮಗೆ ಬೇಕಾದ ಮಾದರಿಯ ಹಚ್ಚೆಯನ್ನು ಹಾಕಿಸುತ್ತಿದ್ದರು.

ಲಂಬಾಣಿ ಮಹಿಳೆಯರಲ್ಲಿ ತಾವೇ ಹಚ್ಚೆ ಹಾಕಿಕೊಳ್ಳುವ ಮತ್ತು ವೃತ್ತಿನಿರತರಿಂದ ಹಚ್ಚೆ ಹಾಕಿಸಿಕೊಳ್ಳುವ ಎರಡೂ ಪದ್ಧತಿಗಳು ರೂಢಿಯಲ್ಲಿವೆ. ಹಚ್ಚೆ ಹಾಕಿಕೊಳ್ಳುವವರು ದೀಪದ ಕೀಟವನ್ನು ಸಂಗ್ರಹಿಸಿ ಕೊಬ್ಬರಿ ಎಣ್ಣೆಯಲ್ಲಿ ಕರಗಿಸಿ ದ್ರವದ ಕಿಟ್ಟವನ್ನು ತಯಾರಿಸಿಕೊಳ್ಳುತ್ತಾರೆ. ಹೀಗೆ ತಯಾರಿಸಿಕೊಂಡು ದ್ರವಕಿಟ್ಟದಲ್ಲಿ ಸೂಜಿಯನ್ನು ಅದ್ದಿ ಅದ್ದಿ ಹಚ್ಚೆ ಹಾಕಬೇಕಾದ ಭಾಗಗಳಲ್ಲಿ ತಮಗೆ ಬೇಕಾದ ಚಿತ್ರದ ಮಾದರಿಯಲ್ಲಿ ಚುಚ್ಚಿಕೊಳ್ಳುತ್ತಾರೆ. ಮತ್ತೆ ಕೆಲವರು ಬುಂಡೇ ಬೆಸ್ತರು, ವಡ್ಡರು, ಕೊರವಂಜಿಯರು, ಶೀಳ್ಳೆಕ್ಯಾತರು ಮುಂತಾದ ವೃತ್ತಿನಿರತರಿಂದ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಹಚ್ಚೆ ಹಾಕಿದ್ದಕ್ಕಾಗಿ ತೆಂಗಿನಕಾಯಿ, ದವಸಧಾನ್ಯಗಳನ್ನು ಕಾಣಿಕೆಯಾಗಿ ಕೊಡುತ್ತಾರೆ.

ಈ ಹಚ್ಚೆ ಹಾಕುವವರು ಹೆಚ್ಚಾಗಿ ಹಬ್ಬಹರಿದಿನಗಳಲ್ಲಿ ಅಲ್ಲದೆ ಆಗೊಮ್ಮೆ ಈಗೊಮ್ಮೆ ತಾಂಡಾಗಳಿಗೆ ಬರುವುದುಂಟು. ಇವರಿಗೆ ಜೋಳ, ರಾಗಿ, ಭತ್ತ ಅಲ್ಲದೆ ಕೆಲವೊಮ್ಮೆ ಹಣ ಕೊಟ್ಟು ಹಚ್ಚೆ ಹಾಕಿಸಿಕೊಳ್ಳುವರು. ಕೆಲವು ಕಡೆ ಅನ್ನ, ರೊಟ್ಟಿ, ಮಜ್ಜಿಗೆಗಳಂತಹ ಆಹಾರಪದಾರ್ಥಗಳನ್ನು ಕೊಟ್ಟು ಹಚ್ಚೆ ಹಾಕಿಸಿಕೊಳ್ಳುವ ಪದ್ಧತಿ ರೂಢಿಯಲ್ಲಿತ್ತು. ಆದರೆ ಪ್ರಸ್ತುತ ಸಂದರ್ಭದಲ್ಲಿ ಲಂಬಾಣಿ ಸಮುದಾಯದಲ್ಲಿ ಹಚ್ಚೆ ಹಾಕಿಸಿಕೊಳ್ಳುವ ಪದ್ಧತಿ ಮರೆಯಾಗುತ್ತಿದೆ. ಕಾರಣ ಆಧುನಿಕತೆಗೆ ಒಳಗಾದ ಈ ಸಮಾಜವು ಇತರೆ ಮುಂದುವರೆದ

ಸಮುದಾಯದ ನಡಿಗೆಯಲ್ಲಿ ಸಾಗುತ್ತಿದೆ. ಹೀಗಾಗಿ ಈ ರೀತಿಯ ಹಚ್ಚೆ ಹಾಕಿಸಿಕೊಳ್ಳುವಿಕೆ ನವಪೀಳಿಗೆಗೆ ಮೌಢ್ಯತೆಯಾಗಿ ಗೋಚರಿಸಿವೆ. ಹಿಂದಿನ ತಲೆಮಾರಿನ ಅಜ್ಜಿಯಂದಿರ ಕೈಗಳ ಮೇಲೆ, ಪಾದಗಳ ಮೇಲೆ ವಿವಿಧ ಮಾದರಿಯ ಹಚ್ಚೆಯ ಕಲೆಗಾರಿಕೆಯನ್ನು ಕಾಣಬಹುದಾಗಿದೆ. ಅಲ್ಲದೆ ಇತ್ತೀಚಿನ ಪೀಳಿಗೆಯ ಯುವತಿಯರು, ಯುವಕರು ಆಧುನಿಕ ಮಾದರಿಯಲ್ಲಿ ಹಚ್ಚೆಗಳನ್ನು ಹಾಕಿಸಿಕೊಳ್ಳುತ್ತಿದ್ದಾರೆ.

ಮೈಯಂಗಳದ ಚಿತ್ತಾರ ಜನಪದರ ಬದುಕಿನಲ್ಲಿ ಸಹಜವಾಗಿ ಬೆರೆತಂತೆ ನಲಿಯುತ್ತಿದ್ದ ದಿನಗಳಿದ್ದವು. ಓಣಿಯಲ್ಲಿ ಕಟ್ಟೆಗೆ ಕುಳಿತ ಅಜ್ಜಿಯರ, ಹಿರಿಯ ತಲೆಮಾರಿನ ಮಹಿಳೆಯರ ಹಣೆ, ಕೈ ಬರಿದಾಗಿರುತ್ತಿದ್ದುದು ಅಪರೂಪ. ಅಂಥ ಹಚ್ಚೆಯ ಚಿತ್ರ ನೋಡಬೇಕೆಂದರೂ ಈಗ ಕಾಣಸಿಗುವುದು ಕಡಿಮೆ. ಹಲವು ಉದ್ದೇಶ, ನಂಬಿಕೆ, ಸೌಂದರ್ಯಪ್ರಜ್ಞೆಗೆ ಮೂಲವಾದ ಹಚ್ಚೆಗೆ ಸಾವಿರಾರು ವಿನ್ಯಾಸದ ಮೆರುಗು. ಒಂದಕ್ಕಿಂತ ಒಂದು ಸುಂದರ. ಆದರೆ ಇಂಥ ಆಕರ್ಷಕ ವಿನ್ಯಾಸಗಳೂ ನಂತರದ ಪೀಳಿಗೆಗಳನ್ನು ಪ್ರಚೋದಿಸಲಿಲ್ಲ. ಕಲಿತವರಲ್ಲಿ ಇದರತ್ತ ಆಸಕ್ತಿ ಇರಲಿಲ್ಲ. ಕ್ರಮೇಣ ಆಧುನಿಕ ಮನೋಭಾವದವರೆಲ್ಲ ಅದೇನೋ ಹಳಬರಂತೆ ಎಂದು ಮೂಗು ಮುರಿಯುತ್ತಿದ್ದ ಕಾಲವೂ ಬಂತು. ಆ ಕಾಲ ಹೋಗಿಯೂ ಆಯಿತು. ಆದರೆ ಅಷ್ಟೊತ್ತಿಗಾಗಲೆ ಪೇಟೆಯುವರ ವ್ಯತ್ಯಾಸ ಕಡಿಮೆಯಾಗತೊಡಗಿದ್ದ ಕಾಲವೂ ಬಂದಿತು. ಹಳೆಯ ಬಣ್ಣ ಕಳೆದುಕೊಳ್ಳುತ್ತಿರುವ ಹಚ್ಚೆಯ ಅಲಂಕಾರ ಈಗ ಪ್ಯಾಷನ್ ಜಗತ್ತಿನಲ್ಲಿ ರಂಗೇರಿ ಕಂಗೊಳಿಸುತ್ತಿದೆ.

ಪ್ರಪಂಚದ ಅನೇಕ ಬುಡಕಟ್ಟುಗಳಲ್ಲಿ ತುಂಬಾ ಜನಪ್ರಿಯವಾದ ಹಚ್ಚೆ ಕಲೆಯ ವಿವಿಧ ವಿನ್ಯಾಸಗಳ ಮೂಲಕ ಗೋಚರಿಸಿದೆ. ಅಲ್ಲದೆ ಕೆಲವೊಮ್ಮೆ ಸಮುದಾಯದಲ್ಲಿ ಇವುಗಳ ಕುರಿತಾಗಿ ಆಚರಣಾತ್ಮಕ ಪದ್ಧತಿಗಳು ಕಂಡುಬರಲು ಸಾಧ್ಯತೆ ಇದೆ. ವಿವಿಧ ಭಾಗದಲ್ಲಿ ಕಂಡುಬರುವ ಈ ಹಚ್ಚೆಕಲೆಯನ್ನು ಹಲವು ಜನಾಂಗದವರು ತಮಗೆ ಇಷ್ಟವಾದ ಭಾಗಗಳಲ್ಲಿ ಹಾಕಿಸಿಕೊಳ್ಳುವರು. ಅದರಲ್ಲೂ ಲಂಬಾಣಿ ಮಹಿಳೆಯರು ತಮಗೆ ಅಂದ ಚಂದ ಕಾಣುವಂತೆ ಪ್ರಾಕೃತಿಕ ವಿನ್ಯಾಸದ ಮಾದರಿಯ ಕೆಲವೊಂದು ಚಿತ್ರಗಳನ್ನು ತಮ್ಮ ಅಂಗಾಂಗಗಳ ಮೇಲೆ ಹಾಕಿಸಿಕೊಳ್ಳುತ್ತಿದ್ದರು.

ಲಂಬಾಣಿ ಸಮುದಾಯದ ಮಹಿಳೆಯರಿಗೆ ಹಚ್ಚೆಯು ಒಂದು ಶುಭ ಸಂಕೇತವಾದಂತಿದೆ. ಏಕೆಂದರೆ ಇವರಲ್ಲಿ ಪುರುಷರಿಗಿಂತ ಮಹಿಳೆಯರೇ ಅಧಿಕ ಪ್ರಮಾಣದಲ್ಲಿ ಹಚ್ಚೆಯನ್ನು ಹಾಕಿಸಿಕೊಳ್ಳುವರು. ಕಾಡು ಮೇಡುಗಳಲ್ಲಿ ಅಲೆಯುವ ಮಾನವರಲ್ಲಿ ಉದಯಿಸಿದ ಈ ಹಚ್ಚೆ ಮುಂದೆ ನಾಗರಿಕ ಮಾನವನವರೆಗೂ ಬೆಳೆದುಕೊಂಡು ಬಂದಿದೆ. ಇಂದಿನ ನಾಗರಿಕ ಮಾನವರಲ್ಲಿ ವಿಭಿನ್ನ ಸ್ವರೂಪದಲ್ಲಿ ಈ ಹಚ್ಚೆಗಳನ್ನು ಕಾಣಬಹುದಾಗಿದೆ. ಆಧುನಿಕ ಲಂಬಾಣಿ ಮಹಿಳೆಯರಲ್ಲಿ ಹಚ್ಚೆಯ ಪ್ರಮಾಣ

ಕಡಿಮೆಯಾಗುತ್ತ ಬಂದಿದೆ. ಪ್ರಾಚೀನ ಮಹಿಳೆಯರು ಹಚ್ಚೆ ಹಾಕಿಸಿದರೆ ಮಾತ್ರ ಮುಕ್ತಿ ದೊರೆಯುತ್ತದೆ ಎಂಬ ನಂಬಿಕೆ ಇತ್ತು. ಹೀಗಾಗಿ ಹಿರಿಯ ತಲೆಮಾರಿನ ಮಹಿಳೆಯರು ತಮಗೆ ಬೇಕಾದಂತಹ ಚಿತ್ರಗಳನ್ನು ಹಾಕಿಸಿಕೊಳ್ಳುತ್ತಿದ್ದರು.

ಪ್ರಾರಂಭದಲ್ಲಿ ಹಚ್ಚೆ ಹಾಕಿಸಿಕೊಳ್ಳುವುದು ತುಂಬಾ ಕಷ್ಟದ ಕೆಲಸವಾಗಿತ್ತು. ಹಚ್ಚೆ ಹಾಕುವ ಶರೀರದ ಭಾಗದಲ್ಲಿ ಮೊದಲು ಕೊಬ್ಬರಿ ಎಣ್ಣೆಯನ್ನು ಲೇಪಿಸಿ ಸ್ವಲ್ಪ ಸಮಯ ತಡೆದು ನೀರಲ್ಲಿ ಅದ್ದಿ ಕಡ್ಡಿಯಿಂದ ನೀರಿನ ಗೆರೆ ಮೂಡುವಂತೆ ಹಚ್ಚೆಯ ನಕ್ಷೆ ಬಿಡಿಸುತ್ತಾರೆ. ನೀರಿನಿಂದ ಇಲ್ಲವೇ ಹಚ್ಚೆ ಮಸಿಯಿಂದಲೂ ರೇಖೆಗಳನ್ನು ಮೂಡಿಸಿ ನಂತರ ಆ ರೇಖೆಗಳ ಮೇಲೆ ಸರಿಯಾದ ಕ್ರಮದಲ್ಲಿ ಹಚ್ಚೆ ಹುಯ್ಯತೊಡಗುತ್ತಾರೆ. ತುಕ್ಕು ಅಥವಾ ಜಂಗು ಹತ್ತದಿರುವ ಸೂಜಿಗಳ ಕಟ್ಟನ್ನು ಪರೀಕ್ಷಿಸಿ ಸಣ್ಣ ಚಿತ್ರ ವಿನ್ಯಾಸವಿದ್ದರೆ ಮೂರು ಸೂಜಿಗಳ ಕಟ್ಟನ್ನು ದೊಡ್ಡ ಚಿತ್ರದ ವಿನ್ಯಾಸವಿದ್ದರೆ ಮೂರಕ್ಕಿಂತ ಹೆಚ್ಚು ಸೂಜಿಗಳ ಕಟ್ಟನ್ನೂ ಕಟ್ಟನ್ನು ಹುಯ್ಯಲು ಉಪಯೋಗಿಸುತ್ತಾರೆ.

"ಹಚ್ಚೆಯ ಮಸಿಯನ್ನು ಚಿಕ್ಕ ಕುಡಿಕೆಯಲ್ಲಿ ಹಾಕಿಟ್ಟುಕೊಂಡು ಸೂಜಿಗಳ ಮೊನಚನ್ನು ಆ ಮಸಿಯಲ್ಲಿ ಅದ್ದಿ, ನಕ್ಷೆ ಹಾಕಿದ ಶರೀರದ ಭಾಗದ ಮೇಲೆ ಕ್ರಮವಾಗಿ ಚುಚ್ಚುತ್ತ ಹೋಗುತ್ತಾರೆ. ನೀರಿನಿಂದ ಇಲ್ಲವೆ ಮಸಿಯಿಂದ ಮಾಡಿದ ರೇಖಾವಿನ್ಯಾಸವೆಲ್ಲ ಸೂಜಿಯ ಚುಚ್ಚುವಿಕೆಗೆ ಒಳಪಡುತ್ತದೆ. ಹಾಳೆಗಳ ಮೇಲೆ ರಂಧ್ರಗಳ ಚಿತ್ರವಿನ್ಯಾಸ ಮೂಡುವಂತೆ ಸೂಜಿ ಚುಚ್ಚಲಾಗುತ್ತದೆ. ಹಚ್ಚೆ ಹುಯ್ಯುವ ಈ ಸಂದರ್ಭದಲ್ಲಿ ಕಂಡುಬರುವ ಹಚ್ಚೆ ಹಾಕಿಸಿಕೊಳ್ಳುವವರ ವೇದನೆಯನ್ನು ಅವರೇ ಬಲ್ಲರು. ಈ ನೋವನ್ನು ಮರೆಸಲು ಹಚ್ಚೆ ಹಾಕುವವರು ಹಾಸ್ಯಭರಿತವಾಗಿ ಸುಂದರವಾದ ಕೆಲವು ಸಲ ಶೃಂಗಾರಮಯವಾದ ಅಶ್ಲೀಲ ಹಾಡುಗಳನ್ನು ಇಲ್ಲವೇ ಶಿಶು ಪ್ರಾಸದಂತಿರುವ ನಗೆಯ ಚಟಾಕಿಗಳನ್ನು, ಕತೆಗಳನ್ನು ಹೇಳುತ್ತಿರುತ್ತಾರೆ. ಹುಯ್ಯುವ ಸಮಯದುದ್ದಕ್ಕೂ ಹಚ್ಚೆ ಹಾಕುವವರು ಸಮಾಧಾನಿಸುತ್ತಿದ್ದರೆ, ಹಾಕಿಸಿಕೊಳ್ಳುವವರು ವೇದನೆಯಿಂದ ನರಳುತ್ತಿರುತ್ತಾರೆ, ಅಳುತ್ತಿರುತ್ತಾರೆ. ಹರೆಯದ ಹುಡುಗಿಯರು ಸಂಕೋಚಕ್ಕೊಳಗಾಗಿ ಹಲುಮುಡಿಕಚ್ಚಿಕೊಂಡು ನೋವನ್ನು ನುಂಗುತ್ತಾ ನಡು ನಡುವೆ ಹಾಸ್ಯ, ಅಶ್ಲೀಲ, ಚುಟುಕು, ಹಾಡು, ಕತೆಗಳಿಗೆ ನಗುತ್ತಲೂ ಕೂತಿರುತ್ತಾರೆ. ತಾವು ಶಾಶ್ವತವಾದ ಪವಿತ್ರವಾದ ಸೌಭಾಗ್ಯದ ಸಂಕೇತವೊಂದನ್ನು ಪಡೆದೆವೆಂಬ ಸಂಭ್ರಮ, ಹೆಮ್ಮೆ ಹಚ್ಚೆ ಹಾಕಿಸಿಕೊಂಡವರಲ್ಲಿ ಉಂಟಾಗುತ್ತದೆ. ಹುಯ್ಯುವುದು ಮುಗಿದ ಮೇಲೆ ಹಚ್ಚೆ ಚುಚ್ಚಿದ ಆ ಭಾಗದ ಮೇಲೆ ಕಪ್ಪು ಮಸಿಯನ್ನು ಲೇಪಿಸುತ್ತಾರೆ."[೨೩] ನಂತರ ಕೆಲವು ದಿನಗಳವರೆಗೆ ಆ ಹಚ್ಚೆ ಕಲೆಯ ಮೇಲೆ ಎಣ್ಣೆಯಂತಹ ಪದಾರ್ಥಗಳನ್ನು ಹಚ್ಚಿ ಗಾಯವನ್ನು ಮಾಸಿಸುತ್ತಿದ್ದರು. ಈ ಸಮುದಾಯದ ಮಹಿಳೆಯರಲ್ಲಿ ಹಚ್ಚೆಯು

---

೨೩. ಡಾ. ಎಸ್.ಸಿ. ಪಾಟೀಲ, ೨೦೦೪, **ಹಚ್ಚೆಕಲೆ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ಪು.ಸಂ. ೨೫–೨೬.

ಹಿರಿಯರಿಂದ ಕಿರಿಯರಿಗೆ, ತಾಯಿಯಿಂದ ಮಗಳಿಗೆ, ಅತ್ತೆಯಿಂದ ಸೊಸೆಗೆ ಹೀಗೆ ತಲೆತಲಾಂತರದಿಂದ ಸೌಂದರ್ಯ ಹಾಗೂ ದೈವದ ಕಲ್ಪನೆಯ ನೆಲೆಯಲ್ಲಿ ಒಂದು ಮಾಧ್ಯಮವನ್ನಾಗಿ ಬಳಸಿಕೊಂಡು ಬಂದ ಕೀರ್ತಿ ಇದೆ. ಈ ಹಚ್ಚೆಯ ಕಲೆಯನ್ನು ಉಳಿಸಿಕೊಂಡು ಧಾರ್ಮಿಕ ಪರಂಪರೆಯನ್ನು ಕಾಪಾಡಿಕೊಂಡು ಬಂದುದಲ್ಲದೆ ತಮ್ಮ ಸೌಂದರ್ಯವನ್ನು ವೃದ್ಧಿಸಿಕೊಂಡಿದ್ದಾರೆ.

ಪ್ರಾಚೀನ ಕಾಲಘಟ್ಟದಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಹೊಂದಿದ ಹಚ್ಚೆ ಕಲೆಯು ಕರ್ನಾಟಕದಲ್ಲಿ ಹೆಚ್ಚು ಜನಪ್ರಿಯವಾಗಿದೆ. ಏಕೆಂದರೆ ಗ್ರಾಮೀಣ ಪ್ರದೇಶದಲ್ಲಿ ಹಚ್ಚೆಯ ವಿವಿಧ ಚಿತ್ತಾರಗಳನ್ನು ದೇಹದ ಮೇಲೆ ಹಾಕಿಸಿಕೊಂಡಿರುವ ಅನೇಕ ಮಹಿಳೆಯರು ದೊರೆಯುತ್ತಾರೆ. ಶಿವಮೊಗ್ಗ ಜಿಲ್ಲೆಯ ದೀವರು, ಕೋಟಿ ಒಕ್ಕಲಿಗ, ಕರಿ ಒಕ್ಕಲಿಗ ಜನಾಂಗಕ್ಕೆ ಸೇರಿದ ಮಹಿಳೆಯರು, ವಿಜಾಪುರ, ಬಳ್ಳಾರಿ, ಶಿವಮೊಗ್ಗ, ಗುಲಬರ್ಗಾ ಮುಂತಾದ ಜಿಲ್ಲೆಯ ಲಂಬಾಣಿ ಮಹಿಳೆಯರು ಹಚ್ಚೆ ಚಿತ್ರಗಳನ್ನು ಹಾಕಿಸಿಕೊಂಡಿರುವುದನ್ನು ನೋಡಿದರೆ ಹಚ್ಚೆ ಎಂತಹ ಶ್ರೀಮಂತ ಕಲಾಪ್ರಕಾರ ಎಂಬುದು ಗೊತ್ತಾಗುತ್ತದೆ. ಹಚ್ಚೆ ಹಾಕುವವರು ಸಾಮಾನ್ಯವಾಗಿ ಪಂಚಮಿ ಹಬ್ಬದಿಂದ ಕಾರ್ತಿಕದವರೆಗೂ ಊರೂರು ಅಲೆದಾಡಿ ಹಚ್ಚೆ ಹಾಕುತ್ತಾರೆ. ಈ ವೃತ್ತಿಯನ್ನು ಕೈಗೊಳ್ಳುವ ಸಮುದಾಯದವರು ತುಂಬ ಬಡತನದಲ್ಲಿ ಇರುವವರು. ಆದರೆ ಇತ್ತೀಚೆಗೆ ಹಚ್ಚೆ ಹಾಕುವ ಪರಿಪಾಟ ಕಾಣೆಯಾಗಿದೆ. ಕಾರಣ ಆಧುನಿಕ ಪ್ರಭಾವದಿಂದ ತನ್ನ ಮೂಲ ಸ್ವರೂಪವನ್ನು ಹಚ್ಚೆ ಕಳೆದುಕೊಳ್ಳುತ್ತಿದೆ. ಹಚ್ಚೆಯು ಹಲವು ನಂಬಿಕೆ ಚಿಕಿತ್ಸೆಯ ಕ್ರಮವಾಗಿ ಸಂಪ್ರದಾಯ, ಸೌಂದರ್ಯದ ಮೂಲವಾಗಿ ಆಚರಣೆಯಲ್ಲಿತ್ತು. ಜನಪದ ಹಚ್ಚೆ ಕಲೆ ಈಗ ಅಂತಹ ಯಾವ ಉದ್ದೇಶಗಳಿಗೂ ಬಳಕೆಯಾಗುತ್ತಿಲ್ಲ. ಇತ್ತೀಚಿನ ದಿನಮಾನಗಳಲ್ಲಿ ಈ ಹಚ್ಚೆಯ ಬಳಕೆಯು ಯುವ ಜನತೆಯಲ್ಲಿ ಭಿನ್ನ ಸ್ವರೂಪವನ್ನು ಪಡೆದುಕೊಳ್ಳುತ್ತಿದೆ. ತಾನೂ ಒಬ್ಬ ಒಂದಿಷ್ಟು ಜನರಲ್ಲಿ ಭಿನ್ನ ಅಭಿರುಚಿಯಿರುವ ವಿಶಿಷ್ಟ ವ್ಯಕ್ತಿಯಾಗಿ ಕಾಣಿಸಿಕೊಳ್ಳಲು ಸುಮ್ಮನೆ ಚಂದ ತೋರುತ್ತದೆ ಎಂಬ ಕಾರಣಕ್ಕೆ ಫ್ಯಾಶನ್‌ಗೆಂದು ಯಾರದೋ ಗಾಢ ನೆನಪಿನಲ್ಲಿ ಭಾವೋತ್ಕಟತೆಯ ಪ್ರತೀಕವಾಗಿ ಸ್ನೇಹ, ಪ್ರೀತಿಯ ಕುರುಹಾಗಿ ಕಂಡುಬರುತ್ತದೆ.

**ಹಚ್ಚೆಯನ್ನು ಕುರಿತ ಕೆಲವು ನಂಬಿಕೆಗಳು**

ಹಚ್ಚೆಯನ್ನು ಕುರಿತು ಪ್ರದೇಶದಿಂದ ಪ್ರದೇಶಕ್ಕೆ ಜನಾಂಗದಿಂದ ಜನಾಂಗಕ್ಕೆ ಅನೇಕ ರೀತಿಯ ನಂಬಿಕೆಗಳಿವೆ. ವಿಧಿ ನಿಷೇಧಗಳು ಈ ಜನರಲ್ಲಿ ಕಂಡುಬರುತ್ತವೆ. ಪ್ರತಿಯೊಂದು ಆಚಾರ ವಿಚಾರಗಳಲ್ಲಿ ಭಿನ್ನರಾಗಿ ಗೋಚರಿಸುವ ಈ ಸಮುದಾಯವು ಇತರೆ ಸಮುದಾಯದ ನಂಬಿಕೆಗಿಂತ ಅಲ್ಪಸ್ವಲ್ಪ ಭಿನ್ನ ಮಾದರಿಯ ಚಿಂತನೆಯನ್ನು ಈ ಹಚ್ಚೆಯಲ್ಲಿ ಕಾಣಬಹುದಾಗಿದೆ. ಹೀಗಾಗಿ ಹಚ್ಚೆಯ ಬಗೆಗೆ ಅವರದೇ ಆದ ಆಚರಣೆ,

ನಂಬಿಕೆಗಳಿವೆ. ಕಟ್ಟುಕತೆಗಳಿವೆ. ಸಮುದಾಯದ ಹಿರಿಯ ತಲೆಮಾರಿನ ವ್ಯಕ್ತಿಗಳನ್ನು ಸಂದರ್ಶಿಸಿದಾಗ ಈ ಕೆಳಗಿನಂತೆ ನಂಬಿಕೆಗಳ ಕುರಿತಾಗಿ ಮಾಹಿತಿಯನ್ನು ನೀಡಿದ್ದಾರೆ. ಅಲ್ಲದೆ ಕೆಲವು ವಿದ್ವಾಂಸರ ಕೃತಿಗಳ ಅಧ್ಯಯನದಿಂದ ನಂಬಿಕೆಗಳ ಕುರಿತಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

೧. ಹಚ್ಚೆಯಿಲ್ಲದವರು ರಾಶಿಯ ಕಣಕ್ಕೆ ಹೋಗಬಾರದು. ಇವರು ಹೋದರೆ ಕಣದಲ್ಲಿ ಯಾವುದೇ ಹುಲುಸು ಆಗಲಾರದೆಂಬ ನಂಬಿಕೆ ಇದೆ.

೨. ಅಂಗೈ ಪಾದಗಳ ಮೇಲೆ ಹಾವು ಚೇಳುಗಳ ಚಿತ್ರದ ಹಚ್ಚೆ ಹಾಕಿಸಿಕೊಂಡರೆ ಹಾವು ಚೇಳುಗಳು ಕಚ್ಚಲಾರವು. ವಿಷ ಸಹ ಏರಲಾರದು. ಅವರ ಹತ್ತಿರ ಸುಳಿಯಲಾರವೆಂಬ ನಂಬಿಕೆ ಇದೆ.

೩. ಮುಖದ ಮೇಲೆ ಹಚ್ಚೆಯ ಬೊಟ್ಟಿರದಿದ್ದರೆ ದೃಷ್ಟಿದೋಷವು ತಗಲುವುದಿಲ್ಲ.

೪. ಹುಬ್ಬಿನ ಕೊನೆಯಲ್ಲಿ ಹಚ್ಚೆ ಹಾಕಿಸಿಕೊಂಡರೆ ತಲೆ ಸುತ್ತುವುದಿಲ್ಲ ತಲೆನೋವು ಬರುವುದಿಲ್ಲ.

೫. ಮುಂಗೈಯಲ್ಲಿ ಧಾನ್ಯಗಳ ಹಚ್ಚೆ ಇದ್ದರೆ ಅಂಥವರ ಕೈಯಲ್ಲಿ ಧನಧಾನ್ಯಗಳು ವೃದ್ಧಿಸುತ್ತವೆ.

೬. ಮುಂಗೈ ಬದಿಗೆ ಗೋದಿ ಕಾಳು ಹಚ್ಚೆ ಹುಯ್ಯಿಸಿಕೊಂಡರೆ ಆ ಮಹಿಳೆ ಮಾಡಿದ ಅಡುಗೆ ವೃದ್ಧಿಯಾಗುತ್ತದೆ ಅಲ್ಲದೆ ಹಳಸುವುದಿಲ್ಲ.

೭. ಹುಟ್ಟಿದಾಗ ನಾವು ಏನು ತಂದಿರುವುದಿಲ್ಲ. ಆದರೆ ಸತ್ತಾಗ ನಮ್ಮೊಂದಿಗೆ ಹಚ್ಚೆಯೊಂದೆ ಬರುವುದು. ಉಳಿದ ಸಂಪತ್ತು ಯಾವುದೂ ಬರಲಾರದು.

೮. ಹೆಣ್ಣು ಮೈನೆರೆಯುವ ಮೊದಲೇ ಹಚ್ಚೆ ಹಾಕಿಸಿಕೊಂಡರೆ ಅದು ಧರ್ಮದ ಮುದ್ರೆ, ಮೈನೆರತ ಮೇಲೆ ಹಾಕಿಸಿಕೊಂಡರೆ ಪಾಪದ ಮುದ್ರೆ ಎಂದು ಭಾವಿಸುತ್ತಾರೆ.

೯. ಹಚ್ಚೆ ಹಾಕಿಸಿಕೊಂಡವರು ಐದು ದಿನ ಸ್ನಾನ ಮಾಡುವುದಿಲ್ಲ ಹಾಗೂ ಐದು ದಿನ ಅರಿಶಿಣ ಹಾಕಿದ ಅಡುಗೆ ಊಟ ಮಾಡಬಾರದು.

೧೦. ಕಾಯಿಲೆಯಿಂದ ಮೈ ಕೈ ನೋವು, ಸಂದು ಹಿಡಿಯುವುದು, ಕೈ ಕಾಲು ಊದಿಕೊಳ್ಳುವುದು ಅಥವಾ ವಾತವಾಗಿದ್ದರೆ ಆ ಸ್ಥಳಗಳಲ್ಲಿ ಹಚ್ಚೆ ಹಾಕಿಸಿಕೊಂಡರೆ ಕಾಯಿಲೆ ವಾಸಿಯಾಗುವುದೆಂಬ ನಂಬಿಕೆಯಿದೆ.

೧೧. ಕೆಟ್ಟ ಕಣ್ಣಿನವರ ದೃಷ್ಟಿದೋಷವಾಗದಿರಲೆಂದು ಹಚ್ಚೆ ಹಾಕಿಸಿಕೊಳ್ಳುತ್ತಾರೆ.



## ಮಹಿಳೆಯರ ಮುಖದ ಮೇಲಿರುವ ಹಚ್ಚೆ







ಮಹಿಳೆಯರ ಮುಂಗೈ ಮೇಲಿರುವ ಹಚ್ಚೆ



## ಮಹಿಳೆಯರ ಮುಂಗೈ ಮೇಲಿರುವ ಹಚ್ಚೆ











**ಮಹಿಳೆಯರ ಕೈಗಳ ಮೇಲಿರುವ ಹಚ್ಚೆ**











## ಮಹಿಳೆಯರ ಮುಂಗೈ ಮೇಲಿರುವ ಹಚ್ಚೆ









ಮಹಿಳೆಯರ ಕೈಗಳ ಮೇಲಿರುವ ಹಚ್ಚೆ











ಮಹಿಳೆಯರ ಕೈಗಳ ಮೇಲಿರುವ ಹಚ್ಚೆ











## ಮಹಿಳೆಯರ ಕೈಗಳ ಮೇಲಿರುವ ಹಚ್ಚೆ











**ಮಹಿಳೆಯರ ಕೈಗಳ ಮೇಲಿರುವ ಹಚ್ಚೆ**











**ಮಹಿಳೆಯರ ಕೈಗಳ ಮೇಲಿರುವ ಹಚ್ಚೆ**











ಮಹಿಳೆಯರ ಕೈಗಳ ಮೇಲಿರುವ ಹಚ್ಚೆ







## ಮಹಿಳೆಯರ ಕಾಲುಗಳ ಮೇಲಿರುವ ಹಚ್ಚೆ









## ಮಹಿಳೆಯರ ಕಾಲುಗಳ ಮೇಲಿರುವ ಹಚ್ಚೆ









೧೨. ಮಕ್ಕಳ ಬೆನ್ನ ಮೇಲೆ ಸುಳಿ ಇದ್ದರೆ ಅನಂತರದಲ್ಲಿ ಹುಟ್ಟಿದ ಮಕ್ಕಳು ಬದುಕುವುದಿಲ್ಲವೆಂದು ನಂಬುವ ಕಾರಣ ಅಂಥ ಸುಳಿಗಳನ್ನು ಹಚ್ಚೆ ಹಾಕಿಸಿ ಅಳಿಸಿ ಹಾಕುತ್ತಾರೆ.

೧೩. ಮಕ್ಕಳಿಗೆ ಮೊಮ್ಮಕ್ಕಳಿಗೆ ಹಿಂದೆ ಗತಿಸಿದ ಹಿರಿಯರ ಹೆಸರುಗಳನ್ನು ಕೈಗಳ ಮೇಲೆ ಹಾಕಿಸುವರು. ಇದರಿಂದ ಹಿರಿಯರ ನೆನಪು ಮಕ್ಕಳಲ್ಲಿ ಉಳಿಯಲಿ ಎಂಬ ನಂಬಿಕೆ ಇದೆ.

೧೪. ಲಂಬಾಣಿ ಮಹಿಳೆಯರಲ್ಲಿ ತಮ್ಮ ಅಣ್ಣ, ಅಕ್ಕ, ಭಾವ, ಹಾಗೂ ತಮ್ಮ ಪ್ರೀತಿಯ ಗೆಳೆಯ, ಗೆಳತಿಯರ ಹೆಸರುಗಳನ್ನು ಹಾಕಿಸಿಕೊಳ್ಳುವ ಪರಿಪಾಟವಿದೆ. ಈ ಪದ್ಧತಿಯು ಅನೇಕ ಸಮುದಾಯಗಳಲ್ಲಿ ಕಂಡುಬರುವ ಸಾಧ್ಯತೆಗಳಿವೆ.

೧೫. ದೈವದ ವಿಚಾರದಲ್ಲಿ ಹೆಚ್ಚು ಆಧ್ಯಾತ್ಮಿಕ ನಂಬಿಕೆಯುಳ್ಳ ಇವರು, ತಮ್ಮ ಕೈಗಳ ಮೇಲೆ ಆಂಜನೇಯ, ಮರಿಯಮ್ಮ, ಸೇವಾಬಾಯ ಮುಂತಾದ ದೇವರ ಹೆಸರು ಹಾಗೂ ಅವರ ಭಾವಚಿತ್ರಗಳನ್ನು ಹಾಕಿರುವ ಸಂಪ್ರದಾಯವಿದೆ.

**೩.೫. ಸಂಕೀರ್ಣ ಮಾಧ್ಯಮದ ಕರಕುಶಲಕಲೆ**

ಹಿಂದೂಗಳ ಮನೆ ಅಂಗಳದಲ್ಲಿ ಆಕರ್ಷಣೀಯ ಕಲೆ ರಂಗೋಲಿ. ಬೆಳಗಿನ ಜಾವ ಮೊದಲು ಅಂಗಳ ಗುಡಿಸಿ ಸ್ವಚ್ಛತೆ ಮಾಡಿ, ಅಂಗಳಕ್ಕೆ ನೀರು ಚಿಮುಕಿಸಿ, ಹಲವು ಪ್ರಕಾರದ ವಿನ್ಯಾಸದ ಮಾದರಿಯಲ್ಲಿ ರಂಗೋಲಿಯನ್ನು ಸ್ತ್ರೀಯರು ಹಾಕುವರು. ರಂಗೋಲಿಯನ್ನು ಸುಂದರವಾಗಿ ಬಿಡಿಸುವುದು ಒಂದು ಕಲೆ ಆಗಿದೆ. ಮನೆಯನ್ನು, ಅಂಗಳವನ್ನು ಅಂದವಾಗಿಟ್ಟುಕೊಳ್ಳಬೇಕೆಂಬ ಉದ್ದೇಶದಿಂದ ಹುಟ್ಟಿರುವ ಈ ಕಲೆಯು ಇಂದು ಧಾರ್ಮಿಕ ಅರ್ಥವನ್ನು ಪಡೆದುಕೊಂಡು ಆಚರಣೆಯಲ್ಲಿದೆ. ರಂಗೋಲಿಯು ಶುಭದ ಸಂಕೇತ. ರಂಗೋಲಿ ಮನೆಯ ಮುಂದಿದ್ದರೆ ಭೂತ ಪ್ರೇತಗಳು ಮನೆಯನ್ನು ಪ್ರವೇಶಿಸುವುದಿಲ್ಲ. ರಂಗೋಲಿ ಇಲ್ಲದ ಮನೆಯು ದೆವ್ವಗಳ ವಾಸಸ್ಥಾನ ಇತ್ಯಾದಿಯಾಗಿ ಹಲವಾರು ನಂಬಿಕೆಗಳು ಹಿಂದೂ ಧರ್ಮೀಯರಲ್ಲಿ ಪ್ರಚಲಿತವಿದೆ.

ಲಂಬಾಣಿ ಜನಾಂಗದಲ್ಲಿ ರಂಗೋಲಿಯನ್ನು ಸಾಂಸ್ಕೃತಿಕ ಆಚರಣೆಯ ಹಿನ್ನೆಲೆಯಲ್ಲಿ ಬಳಸಲಾಗುತ್ತದೆ. ಒಂದನೆಯದು ಸಾಂಕ್ಯಾಪೊರೇರೊ, ಎರಡನೆಯದು ಚೋಕೋಪೊರೇರೊ. ಸಾಂಕ್ಯಾಪೊರೆರೋ ಪ್ರಕಾರದ ರಂಗೋಲಿಯನ್ನು ವಧುವರರಿಗೆ ಶುಭ ಕೋರುವ ಮತ್ತು ದುಷ್ಟಶಕ್ತಿಗಳು ಸಮೀಪ ಬರದಂತೆ ತಡೆಗಟ್ಟುವ ಉದ್ದೇಶದಿಂದ ಬಳಕೆಯಾಗುತ್ತದೆ. ಎರಡನೆಯದು ಚೋಕೋಪೊರೇರೊ. ಇದನ್ನು ಕುಲದೇವತೆಯನ್ನು ಆಗಿನ ಸಂದರ್ಭದಲ್ಲಿ ಪ್ರತಿಷ್ಠಾಪಿಸುವಾಗ ಆ ಜಾಗದಲ್ಲಿ ಚಕ್ರದ ಮಾದರಿಯಲ್ಲಿ ರಂಗೋಲಿ ಹಾಕುವರು.

ಇದನ್ನೇ ಚೋಕೋಪೂರೇರೊ ಎನ್ನುವರು. ಮನೆಯ ಹಿರಿಯರಾದವರು ಇವುಗಳನ್ನು ನೆರವೇರಿಸುವರು. "ತಮ್ಮ ಮೂಲಪುರುಷರಾದ ದಾದ ಮೋಲ ರಾಧಿದಾದಿಯರು ಋತುಮತಿಯಾಗಿದ್ದಾರೆಂಬ ಕಾರಣದಿಂದ ಬ್ರಾಹ್ಮಣ ಸಮಾಜದಿಂದ ಪರಿತ್ಯಕ್ತರಾಗಿದ್ದ ಮೂವರು ಕನ್ಯೆಯರನ್ನು ತಮ್ಮ ದತ್ತು ಮಕ್ಕಳಿಗೆ ಮದುವೆ ಮಾಡಿಸುತ್ತಾರೆ. ಹಾಗೆ ಮದುವೆ ಮಾಡಿಸುವಾಗ ನವ ವಧುವರರಿಗೆ ಲೋಪದೋಷಗಳು ತಟ್ಟದಂತೆ, ದುಷ್ಟಶಕ್ತಿಗಳು ಪೀಡಿಸದಂತೆ ದಿಗ್ಬಂಧಿಸಲು ಈ ಬಗೆಯ ರಂಗೋಲಿಯನ್ನು ಹಾಕಿದ್ದರು. ಅಂದಿನ ಆ ವಿಧಾನವನ್ನು ಇಂದಿಗೂ ನಾವು ಅನುಸರಿಸುತ್ತಿದ್ದೇವೆಂಬುದು ಅವರ ವಿವರಣೆ. ಈ ವಿವರಣೆಯ ಮೇರೆಗೆ ಲಂಬಾಣಿಗಳಲ್ಲಿ ರಂಗೋಲಿಯು ದುಷ್ಟಶಕ್ತಿಗಳ ದಿಗ್ಭಂಧನದ ಉದ್ದೇಶದಿಂದ ಬಂದಿದೆ ಎಂಬುದು ಸ್ಪಷ್ಟವಾಗುತ್ತದೆ."[೨೪] ಹೀಗೆ ರಂಗೋಲಿಯು ಲಂಬಾಣಿಗರಲ್ಲಿ ಕಾಣಿಸಿಕೊಂಡಿರುವುದರ ಬಗೆಗೆ ಈ ಮೇಲಿನಂತೆ ಕೆಲವು ಐತಿಹ್ಯಗಳಿವೆ.

ಲಂಬಾಣಿಗರಲ್ಲಿ ರಂಗೋಲಿಕಲೆ ನಾಗರಿಕತ್ವ ಪಡೆದ ಮೇಲೆ ಇತರೇ ಸಮುದಾಯದ ಅನುಕರಣೆಯ ಮುಖಾಂತರ ಬಂದಂತಿದೆ. ಜನಪದ ಪ್ರದರ್ಶನ ಕಲೆಗಳಲ್ಲಿ ಈ ರಂಗೋಲಿ ಕಲೆಗೆ ಮಹತ್ತರ ಸ್ಥಾನವಿದೆ. ಇಂದು ಸಮುದಾಯದ ಮಹಿಳೆಯರಿಗೆ ರಂಗೋಲಿಯು ಮಹತ್ವದ ಕಲೆಯಾಗಿ ಮಾರ್ಪಟ್ಟಿದೆ. ಸಾಮಾನ್ಯವಾಗಿ ಲಂಬಾಣಿಗರು ರಂಗೋಲಿಯನ್ನು ಚೋಕೋಪೊರೇರೊ ಎಂದು ಕರೆಯುವರು. ಇದಕ್ಕೆ ಮಹತ್ವದ ಪಾವಿತ್ರ್ಯತೆ ಇದೆ. ಇದನ್ನು ತಮ್ಮ ಮನೆ ಅಂಗಳ, ಹೊಸ್ತಿಲು ಮಂಟಪ ಮುಂತಾದ ಕಡೆ ಹಾಕುವುದಿಲ್ಲ. ಯಾರೂ ತುಳಿಯಲಾರದ ಕಡೆಗಳಲ್ಲಿ ರಂಗೋಲಿಯನ್ನು(ಚೋಕೊ) ಹಾಕುವರು. ದೇವರ ಕಾರ್ಯ ಕಲಾಪ, ಪೂಜೆ ಪುನಸ್ಕಾರ ಮಾಡುವ ವೇಳೆ ಆ ರಂಗೋಲಿ(ಚೋಕೊ) ಒಳಗಡೆ ದೇವರನ್ನು ಕೂಡಿಸುವರು.

ಸಾಮಾನ್ಯವಾಗಿ ಪೂಜಾಸ್ಥಾನಗಳಲ್ಲಿ ದೇವರ ಎದುರಿನಲ್ಲಿ ಜನ ತುಳಿಯದಿರುವ ಹಾಗೂ ವಿಶೇಷ ಸ್ಥಳಗಳಲ್ಲಿ ಮಾತ್ರ ರಂಗೋಲಿ(ಚೋಕೊ) ಹಾಕುವರು. ಇದಕ್ಕೆ ಕಾರಣ ರಂಗೋಲಿಯ ಬಗೆಗೆ ಅವರಲ್ಲಿರುವ ಪಾವಿತ್ರ್ಯತೆ ಆಗಿದೆ. ಲಂಬಾಣಿಗರು ವರ್ಷಕ್ಕೊಮ್ಮೆ ತಮ್ಮ ಮನೆದೇವರು ದೇವತೆಗಳನ್ನು ಪೂಜಿಸುವ ಸಂದರ್ಭಗಳಲ್ಲಿ ಪೂರ್ವಿಕರನ್ನು ಆರಾಧಿಸುವಲ್ಲಿ ಹಾಗೂ ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ರಂಗೋಲಿ (ಚೋಕೊ) ಬರೆಯುತ್ತಾರೆ. ಆದರೆ ನಾಗರಿಕರಿಂದ ಎರವಲು ಪಡೆದ ರಂಗೋಲಿಯನ್ನು ಮನೆಯ ಅಂಗಳದಲ್ಲಿ ಹಾಕುತ್ತಾರೆ. ಇದರ ಬಗೆಗೆ ಪಾವಿತ್ರ್ಯತೆಯಿಲ್ಲ.

---

೨೪. ಡಾ. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ,** ಪು.ಸಂ. ೨೧೨.

ಅಂದರೆ ಈ ಚೋಕೊ ಎಂಬ ರಂಗೋಲಿಯು ಪವಿತ್ರ ಕಾರ್ಯಗಳಿಗೆ ಮಾತ್ರ ಬಳಕೆಯಾಗುವ ಪ್ರಧಾನ ಚಹರೆ ಆಗಿದೆ. ಈ ರೀತಿಯ ಚೋಕೊ ರಂಗೋಲಿಯನ್ನು ಗಂಡಸರು, ಹೆಂಗಸರು ಹಾಕುವರು. ಹೆಂಗಸರಿಗಿಂತ ಮನೆಯ ಹಿರಿಯ ವ್ಯಕ್ತಿ ಹಾಕುವರು. ಮಕ್ಕಳಿಗೆ ಅಮ್ಮ ಬಂದ ವೇಳೆಗೆ ಕೆಲವು ದಿನಗಳ ನಂತರ ಪೂಜೆ ಮಾಡುವರು. ಆಗ ಈ ರೀತಿಯ ರಂಗೋಲಿಯನ್ನು ಹಿರಿಯ ಹೆಂಗಸರು ಹಾಕುವರು. ಮದುವೆಯ ಸಂದರ್ಭದಲ್ಲಿ ಗಂಡು ಹೆಣ್ಣನ್ನು ಕೂಡಿಸುವಾಗ ಹಾಕುವರು. ಆಗ ಮದುಮಕ್ಕಳು ಅದರ ಮೇಲೆ ಕೂತು ಪರಸ್ಪರ ಗುಪ್ತವಾಗಿ ಸಿಹಿ ತಿನ್ನುವರು. ಇದಕ್ಕೆ ಲಂಬಾಣಿಗರಲ್ಲಿ ಕೋಳ್ಯಖಾಯೇರೊ ಎನ್ನುವರು.

ದೇವತಾಕಾರ್ಯ ಹಾಗೂ ವಿಶೇಷ ಪವಿತ್ರ ಕಾರ್ಯದ ಸಂದರ್ಭದಲ್ಲಿ ಪರಿಣತ ವ್ಯಕ್ತಿ ಅಥವಾ ಹಿರಿಯ ವ್ಯಕ್ತಿಯನ್ನು ಕರೆದು ಅವನಿಂದ ಚೋಕೊ(ರಂಗೋಲಿ) ಹಾಕಿಸುತ್ತಾರೆ. ಆಯಾ ದೇವರು ದೇವತೆಗಳಿಗೆ ಅನುಸಾರವಾಗಿ ಪೂಜಾಸ್ಥಾನಗಳಲ್ಲಿ ದಿಗ್ಬಂಧನ ರಂಗವನ್ನಿಟ್ಟು, ಕುಂಕುಮ, ಭಂಡಾರ, ಜೋಳದ ಹಿಟ್ಟನ್ನು ಉಪಯೋಗಿಸಿ ರಂಗೋಲಿ ಬರೆಯುತ್ತಾರೆ. ವೃತ್ತಾಕಾರದಲ್ಲಿ ಹಾಕಿ ಅದರೊಳಗಡೆ ಚಕ್ರದ ಆಕಾರದಲ್ಲಿ ಗೆರೆ ಹಾಕುವರು. ಮತ್ತೆ ಕೆಲವರು ನಕ್ಷತ್ರದ ರೀತಿಯಲ್ಲಿ ಬಿಡಿಸುವರು. ಹೀಗೆ ರಂಗೋಲಿ ಹೊಯ್ಯುವಾಗ ರೇಖೆಗಳು ವಕ್ರವಾಗಬಾರದೆಂದು ಕೆಲವೊಮ್ಮೆ ಅಳತೆಗೋಲು ಉಪಯೋಗಿಸುತ್ತಾರೆ. ಇದರಿಂದ ಸಮಪ್ರಮಾಣದ ರೇಖಾಚಿತ್ರಗಳನ್ನು ಬರೆಯಲು ಅನುಕೂಲವಾಗುತ್ತದೆ. ಪ್ರತಿ ರೇಖೆಗಳು ಪರಸ್ಪರ ಕತ್ತರಿಸುವಲ್ಲಿ ಒಂದೊಂದು ಲಿಂಬೆ ಹಣ್ಣು, ಉತ್ತತ್ತಿ, ಎಲೆ ಅಡಿಕೆ, ದಬ್ಬಣ, ಹೂ ಕಾಯಿಗಳು, ಬೇವಿನ ತೊಪ್ಪಲು, ಗೋಣಿ ಚೀಲ ಇಡುವರು. ಅಲ್ಲದೆ ಹಿರಿಯರಿಗೆ ಪೂಜೆ ಮಾಡುವಾಗ ವೃತ್ತಾಕಾರದಲ್ಲಿ ರಂಗೋಲಿ ಹಾಕಿ ಅದರಲ್ಲಿ ಬೆಂಕಿ ಕೆಂಡ ಹಾಕುವರು. ನಂತರ ಲೋಬಾನ, ಎಡೆ ಹಾಕಿ ಹಿರಿಯರಿಗೆ ಅರ್ಪಿಸುವ ಪದ್ಧತಿ ಇದೆ.

ಲಂಬಾಣಿಗರಲ್ಲಿ ದುಷ್ಟಶಕ್ತಿಗಳ ನಿವಾರಣೆಗಾಗಿಯೂ, ವ್ಯಕ್ತಿಯ ಸತ್ವಲ ಸಾಧನೆಗಾಗಿಯೂ ಈ ಬಗೆಯ ದಿಗ್ಬಂಧನ ರಂಗವನ್ನು ಹಾಕುವ ರೂಢಿ ಬೆಳೆದುಬಂದಿದೆ ಎನ್ನುತ್ತಾರೆ.[೨೫] ಈಗಲೂ ಲಂಬಾಣಿಗರಲ್ಲಿ ಈ ಪದ್ಧತಿ ರೂಢಿಯಲ್ಲಿದೆ. ಯಾರಿಗಾದರೂ ದೆವ್ವ, ಪಿಶಾಚಿ ಹತ್ತಿದ್ದರೆ ಅವರಿಗಾಗಿ ಕೆಲವೊಂದು ರಂಗನ್ನು ಹಾಕಿ ಕುಡಿಸುವರು. ಹೀಗಾಗಿ ಲಂಬಾಣಿಗರಲ್ಲಿ

---

೨೫. ಪ್ರೊ. ಎಚ್.ಜೆ. ಲಕ್ಕಪ್ಪಗೌಡ (ಪ್ರ.ಸಂ.), **ಕರ್ನಾಟಕದ ಬುಡಕಟ್ಟುಗಳು, ಸಂಪುಟ, ೩,** ಪು.ಸಂ. ೧೭೩.

ಮಹತ್ವದ ಸ್ಥಾನವನ್ನು ಈ ಚೋಕೊ(ರಂಗೋಲಿ) ಎಂಬ ಕಲೆಯು ಮಹತ್ವ ಪಡೆದುಕೊಂಡಿದೆ. ಇವುಗಳಲ್ಲದೆ ಅನೇಕ ಮಾದರಿಯ ಕಲೆಗಾರಿಕೆ ಈ ಸಮುದಾಯದ ಬದುಕಲ್ಲಿ ಮನೆ ಮಾಡಿಕೊಂಡಿದೆ.

ಈ ಮೇಲಿನ ಎಲ್ಲಾ ವಿವರಗಳನ್ನು ನೋಡಿದರೆ, ಕರಕುಶಲ ಕಲೆಗಳು ಲಂಬಾಣಿಗರಿಗೆ ಕೇವಲ ಬದುಕಿನ ಅನಿವಾರ್ಯತೆಯ ಕಾರಣಕ್ಕೆ ಹುಟ್ಟಿದ್ದಲ್ಲ ಎಂದು ತಿಳಿಯುತ್ತದೆ. ಅದು ಲಂಬಾಣಿಗಳ ಸ್ಮೃತಿಲೋಕದೊಂದಿಗೆ, ಅವರ ಪುರಾಣದೊಂದಿಗೆ, ಅವರ ಚರ್ಚೆಯೊಂದಿಗೆ ತಳಕು ಹಾಕಿಕೊಂಡಿದೆ. ಈ ಕಾರಣವೇ ಅದು ಅವರಲ್ಲಿ ಆಳವಾಗಿ ಬೇರುಬಿಟ್ಟಿದೆ.

ಬಟ್ಟೆ ಮಾಧ್ಯಮದಲ್ಲಿ ಇಂದು ಅನೇಕ ಕ್ರಾಂತಿಕಾರಕ ಬದಲಾವಣೆಗಳು ಸಂಭವಿಸಿವೆ. ಆದರೆ 'ಬಟ್ಟೆ' ಉಡುಪಿನಲ್ಲಿ ಇನ್ನೂ ಲಂಬಾಣಿಗರಲ್ಲಿ ತೀವ್ರ ಬದಲಾವಣೆಗಳು ನಡೆದಿಲ್ಲ. ಕಾರಣ ಅವರಲ್ಲಿ ಬಹುತೇಕರು ಗ್ರಾಮೀಣ ಪ್ರದೇಶವನ್ನು ಅವಲಂಬಿಸಿದವರು. ಅದರಲ್ಲೂ ಪ್ರತ್ಯೇಕವಾಗಿ ತಮ್ಮದೇ ತಾಂಡಾಗಳಲ್ಲಿ ಜೀವಿಸುತ್ತಿರುವವರು. ಹೀಗೆ ತಾಂಡಾ ವಾಸವು ಸಮಾಜದ ಬೇರೆ ಸಮುದಾಯದ ಜೊತೆ ಬೆರೆಯದೆ ವಿಶೇಷವಾಗಿ ಉಳಿಯಲು ಕಾರಣವಾಗಿದೆ.

ಲೋಹ ಮಾಧ್ಯಮದ ಕಲೆಗಳನ್ನು ನೋಡುತ್ತಿದ್ದರೆ, ಪ್ರಾಚೀನ ಕಾಲದಲ್ಲಿ ಲೋಹ ಮಾಧ್ಯಮವನ್ನು ಪಳಗಿಸುವವರು ಇವರಾಗಿದ್ದರೆ ಎಂಬ ಅನುಮಾನ ಬರುತ್ತದೆ. ಲಂಬಾಣಿಗರಲ್ಲಿಯೇ ಇರುವ ಒಂದು ವಿಶಿಷ್ಟ ಪಂಗಡ 'ಸನಾರ' ಎನ್ನುವ ಸಮುದಾಯವೂ ಇದನ್ನೇ ಬಿಂಬಿಸುತ್ತಿದೆ. ಸರ್ಕಾರ ಟಂಕಿಸಿದ ನಾಣ್ಯಗಳು ಕೂಡ ಇವರ ಸೌಂದರ್ಯದ ಸಾಧನವಾಗಿರುವುದನ್ನು ನೋಡಬಹುದು.

ಹೀಗೆ ಲಂಬಾಣಿ ಸಮುದಾಯದ ಸದ್ಯದ ಬದುಕಿನಲ್ಲಿ ಉಳಿದಿರುವ ಕಲಾ ಪ್ರಕಾರಗಳು ಅವರು ಪರಂಪರೆಯನ್ನು ಇಂದಿಗೂ ಉಳಿಸಿಕೊಂಡಿದ್ದಾರೆ ಎಂದು ಖುಷಿ ಪಡಬಹುದಾದರೆ, ಮತ್ತೊಂಡೆ ಇನ್ನೂ ಆಧುನಿಕತೆಗೆ ತೆರೆದುಕೊಳ್ಳದೆ ಹಿಂದುಳಿದಿದ್ದಾರೆಯೇ ಎಂಬ ಸಂಗತಿಯು ನಮ್ಮನ್ನು ಕಾಡುತ್ತದೆ.

ಹೀಗೆ ಕರಕುಶಲ ಕಲೆಗಳು ಕೂಡ ಆಯಾ ಸಮುದಾಯದ ಅನನ್ಯತೆಯನ್ನು ಉಳಿಸಿಕೊಂಡು ಬಂದಿದೆ. ಕಲಾ ಪ್ರಕಾರದ ವಿಶಿಷ್ಟತೆಯೂ ಆಯಾ ಸಮುದಾಯದ ಗುರುತುಗಳನ್ನು ಉಳಿಸಿದೆ. ಇಂದು ಲಂಬಾಣಿ ಸಮುದಾಯದ ಗುರುತುಗಳು ಉಳಿದುಕೊಂಡು ಬಂದಿರುವುದು ಕೂಡ ಈ ಬಗೆಯ ಕರಕುಶಲ ಕಲೆಯಿಂದಾಗಿಯೇ.

ಹಚ್ಚೆ ಕಲೆ ಎಲ್ಲಾ ಸಮುದಾಯಗಳಲ್ಲೂ ಇದೆ. ಆ ಹಚ್ಚೆ ಹೊಯ್ಯಿಸುವ ಚಿತ್ರಗಳಲ್ಲಿ ಆಯಾ ಸಮುದಾಯದ ಗುರುತುಗಳನ್ನು ಉಳಿಸಿಕೊಂಡು ಬಂದಿರುವುದನ್ನು ನೋಡ ಬಹುದಾಗಿದೆ.

ಪರಂಪರೆ ಮತ್ತು ಅನನ್ಯತೆ ಎಂಬುವು ಅವರ ಗುರುತುಗಳಾಗಿಯೇ ಇರಬೇಕೆ? ಗುರುತುಗಳು ಕೂಡ ಒಂದು ವೇಳೆ ಬಂಧನವಾಗುವುದಿಲ್ಲವೆ? ಎನ್ನುವ ಪ್ರಶ್ನೆಗಳನ್ನು ಹುಟ್ಟಿಸದೆ ಇರುವುದಿಲ್ಲ. ತಮ್ಮ ಎಲ್ಲಾ ಗುರುತುಗಳನ್ನು ಕಳಚಿಕೊಂಡು ಇತರೆಲ್ಲಾ ಸಮುದಾಯಗಳಂತೆ ಆದಾಗ, ಇವರದೇ ಆದ ವಿಶಿಷ್ಟತೆ ನಾಶವಾಗುವುದಿಲ್ಲವೆ ಎಂಬ ಪ್ರಶ್ನೆಯೂ ಕಾಡುತ್ತದೆ. ಇಂತಹ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

❑❑❑

## ಅಧ್ಯಾಯ : ನಾಲ್ಕು

# ಲಂಬಾಣಿ ಕರಕುಶಲ ಕಲೆಯ ಪ್ರಮುಖ ಕಲಾಕೇಂದ್ರಗಳು

ಅಧ್ಯಾಯ : ನಾಲ್ಕು

# ಲಂಬಾಣಿ ಕರಕುಶಲ ಕಲೆಯ ಪ್ರಮುಖ ಕಲಾಕೇಂದ್ರಗಳು

ಭಾರತದಲ್ಲಿ ಜನಸಮುದಾಯಗಳ ಕಲೆ, ಪರಂಪರೆ, ಸಂಸ್ಕೃತಿಯನ್ನು ಉಳಿಸುವ ನಾನಾ ಬಗೆಯ ಯೋಜನೆಗಳು ಬಂದಿವೆ. ಈ ಯೋಜನೆಗಳು ಸಮುದಾಯಗಳ ವಿಶಿಷ್ಟತೆಯನ್ನು, ಗುರುತುಗಳನ್ನು ಕಾಪಾಡಿಕೊಂಡು ಹೋಗುವ ಪ್ರಯತ್ನವನ್ನು ಮಾಡುತ್ತಿವೆ. ಈ ಕಾರಣಕ್ಕಾಗಿಯೇ ಭಾರತ ಸರ್ಕಾರದಲ್ಲಿ ಇಲಾಖೆಯೊಂದನ್ನು ತೆರೆದಿದ್ದಾರೆ. ಅವು ರಾಜ್ಯ ಸರಕಾರಗಳಲ್ಲಿಯೂ ಇವೆ. ಆದರೆ ಈ ಬಗೆಯ ಯೋಜನೆಗಳು ಆಯಾ ಸಮುದಾಯಗಳಿಗೆ ಎಷ್ಟರಮಟ್ಟಿಗೆ ಸಹಕಾರಿಯಾಗಿವೆ. ಈ ಯೋಜನೆಗಳನ್ನು ಬೆಳೆಸಿಕೊಂಡು ಆಯಾ ಸಮುದಾಯ ಎಷ್ಟು ಅಭಿವೃದ್ಧಿಯನ್ನು ಪಡೆದಿದೆ ಮುಂತಾಗಿ ನೋಡಬೇಕಾಗಿದೆ.

ಲಂಬಾಣಿ ಕರಕುಶಲ ಕಲೆಗಳನ್ನು ಸಂರಕ್ಷಿಸುವ ಸಲುವಾಗಿಯೇ ಇಂದು ಹಲವು ಎನ್.ಜಿ.ಓ.ಗಳು, ಸರಕಾರಿ ಸಂಸ್ಥೆಗಳು ಚಾಲ್ತಿಯಲ್ಲಿವೆ. ಇವುಗಳ ಸ್ವರೂಪ ಎಂತಹದ್ದು, ಇವು ಲಂಬಾಣಿ ಸಮುದಾಯವನ್ನು ಒಳಗೊಳ್ಳುವ ಸ್ವರೂಪ ಎಂತಹದ್ದು, ಇದು ಕೇವಲ ಸರಕಾರಿ ಹಣವನ್ನು ಪೋಲು ಮಾಡಲು ಮಾತ್ರ ಇರುವುದೋ ಅಥವಾ ಇದರಿಂದ ಸಮುದಾಯಕ್ಕೆ ಏನಾದರೂ ಒಳ್ಳೆಯದು ಆಗಿದೆಯೋ ಎಂದು ಹುಡುಕಬೇಕಿದೆ.

ಇಂತಹ ಪ್ರಾಥಮಿಕ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲು ಪ್ರಯತ್ನಿಸಲಾಗಿದೆ. ಇಲ್ಲಿ ಪೂರ್ವಗ್ರಹದಿಂದ ಅಧ್ಯಯನ ಮಾಡದೆ, ಆಶಾವಾದದಿಂದ ಈ ಅಧ್ಯಯನವನ್ನು ಮಾಡಲಾಗಿದೆ. ಕೊನೆಗೆ ಈ ಯೋಜನೆಯ ಸಾಧ್ಯಾಸಾಧ್ಯತೆಗಳ ಕುರಿತಂತೆ ಚರ್ಚಿಸಲಾಗಿದೆ.

ಭಾರತ ಮುಖ್ಯವಾಗಿ ಶ್ರಮಿಕರ ದೇಶ. ಇಲ್ಲಿ ಮೊದಲಿನಿಂದಲೂ ಯಂತ್ರಗಳಿಗಿಂತ ಕರಕುಶಲ ಕಲೆಗಳ ಮೂಲಕವೇ ತಮ್ಮ ಬದುಕನ್ನು ಕಟ್ಟಿಕೊಂಡ ಉದಾಹರಣೆಗಳಿವೆ.

ಇಂತಹ ಕಲೆಗಳಿಗೆ ದೊಡ್ಡ ಮಟ್ಟದ ರಾಜಕೀಯ ಶಕ್ತಿ ಬಂದದ್ದು ಗಾಂಧೀಜಿ ಅವರಿಂದ. ಅವರು ಚರಕವನ್ನು ಒಂದು ಸಂಕೇತವಾಗಿ ಬಳಸಿ ನೂಲುವುದನ್ನು ಜನಪ್ರಿಯಗೊಳಿಸಿದರು. ಅಂತೆಯೇ ಕರಕುಶಲ ಕಲೆಗಳು ಸ್ವಾವಲಂಬಿ ಬದುಕಿಗೆ ಸೋಪಾನ ಎಂದರು. ಹಾಗಾಗಿಯೇ ಅವರು ತಮ್ಮ ಹಿಂದ್ ಸ್ವರಾಜ್ ಕೃತಿಯಲ್ಲಿ ಗುಡಿಕೈಗಾರಿಕೆಗಳ ಮಹತ್ವವನ್ನು ಹೇಳಿ ಅನಗತ್ಯವಾಗಿ ಯಂತ್ರಗಳ ಬಳಕೆಯನ್ನು ವಿರೋಧಿಸಿದರು. ಇದು ಭಾರತದ ಕರಕುಶಲ ಕರ್ಮಿಗಳಿಗೆ ದೊಡ್ಡ ಮಟ್ಟದ ಪ್ರೋತ್ಸಾಹದಾಯಕ ಉತ್ಸಾಹವನ್ನು ತುಂಬಿತು ಎಂದೇ ಹೇಳಬಹುದು.

ಹೀಗೆ ಕರಕುಶಲ ಕಲೆಯನ್ನು ಮತ್ತು ಕಲಾಕೇಂದ್ರಗಳನ್ನು ಪುನರುಜ್ಜೀವನಗೊಳಿಸಿದ್ದಕ್ಕೆ ದೊಡ್ಡ ಚರಿತ್ರೆಯೇ ಇದೆ. ಅದನ್ನು ಈ ಅಧ್ಯಾಯದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಭಾರತದಂತಹ ದೇಶದಲ್ಲಿ ಕರಕುಶಲ ಕಲೆಗಳೇ ಇಲ್ಲಿನ ಮೂಲ ಸಂಸ್ಕೃತಿಯನ್ನು ಪೋಷಿಸಿವೆ. ಅಂತೆಯೇ ಭಾರತೀಯ ಕರಕುಶಲ ಕಲೆಗಳಿಗೆ ಉತ್ತೇಜನ ದೊರೆತಿದ್ದು ಕೂಡ ದೇಶ-ವಿದೇಶದ ಬೇಡಿಕೆಯಿಂದ. ಸರಕಾರಕ್ಕೆ ಕೂಡ ಇದು ಆದಾಯದ ಮೂಲವಾಯಿತು. ಮೊದಲ ಪಂಚವಾರ್ಷಿಕ ಯೋಜನೆಯಲ್ಲಿಯೇ ಖಾದಿ ಮತ್ತು ಗ್ರಾಮೀಣ ಕೈಗಾರಿಕಾ ನಿಗಮ, ಅಖಿಲ ಭಾರತ ಕೈಮಗ್ಗ ನಿಗಮ, ಕೇಂದ್ರ ರೇಷ್ಮೆ ನಿಗಮ, ತೆಂಗಿನ ನಾರಿನ ಉತ್ಪತ್ತಿ ನಿಗಮ ಹಾಗೂ ಸಣ್ಣ ಕೈಗಾರಿಕಾ ನಿಗಮಗಳು ಕೇಂದ್ರ ಸರಕಾರ ದಿಂದ, ಕೇಂದ್ರ ಹಾಗೂ ರಾಜ್ಯಗಳಲ್ಲಿ ಸ್ಥಾಪಿತವಾದವು. ಹೀಗೆ ಕರಕುಶಲ ಕೇಂದ್ರಗಳಿಗೆ ರಾಜಕೀಯ ಶಕ್ತಿ ಬರತೊಡಗಿತು.

ಆದರೆ ಮತ್ತೊಮ್ಮೆ ಕರಕುಶಲ ಕಲೆಗೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ಬೆಲೆ ಬಂದದ್ದು ಸ್ವಾತಂತ್ರ್ಯಾನಂತರವೇ. ೧೯೫೨ರಲ್ಲಿ ಕರಕುಶಲ ಕೈಗಾರಿಕೆಗಳ ಸಮಿತಿಗೆ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಅಧ್ಯಕ್ಷರಾಗಿ ಬಂದರು. ಅವರು ಕಲಾಕೃತಿಗಳನ್ನು ಗುರುತಿಸಿದ್ದಷ್ಟೇ ಅಲ್ಲ, ಕಲಾವಿದರಿಗೂ ಸ್ಥಾನಮಾನ ಗೌರವಗಳನ್ನು ತಂದುಕೊಡಲು ಶ್ರಮಿಸಿದರು. ಇದರಿಂದ ದೇಶಕ್ಕೂ ಮತ್ತು ಕಲಾವಿದರಿಗೂ ಆರ್ಥಿಕವಾಗಿ ಲಾಭವಾಯಿತು. ಮಂಗಳೂರಿನಲ್ಲಿ ಜನಿಸಿದ ಕನ್ನಡತಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಪರಕೀಯರಿಂದ ದೇಶ ವಿಮೋಚನೆಯಲ್ಲಿ ಸಕ್ರಿಯ ಪಾತ್ರ ವಹಿಸಿದರು. ಸ್ವಾತಂತ್ರ್ಯಾನಂತರ ರಾಜಕೀಯ ಬದುಕಿಗೆ ಮನಸ್ಸು ಮಾಡದೆ ಅಭಿಜಾತ ಕಲೆಯ ಪುನರುಜ್ಜೀವನಕ್ಕೆ ಶ್ರಮಿಸಿದರು. ಒಂದು ರೀತಿಯಲ್ಲಿ ಪರಂಪರೆಯ ವಿರೋಧಿಯಾದರೂ ಅವರು ಸ್ವದೇಶಿವಾದವನ್ನು ನಿಜವಾದ ರೀತಿಯಲ್ಲಿ ಅರ್ಥೈಸಿದರು.

ದೇಶೀಯ ಪದಾರ್ಥದ ತಯಾರಿಕೆ, ಬಳಕೆಗಳು ಸ್ವಾವಲಂಬನೆಯ ಜೊತೆ ರಾಷ್ಟ್ರೀಯತಾ ಭಾವನೆಯನ್ನು ಬೆಳೆಸುತ್ತದೆ. ಗಾಂಧೀಜಿ ಅವರ ಕನಸು ಸಹ ಇದೇ ಆಗಿತ್ತು. ಕಲಾವಿದರನ್ನು

ಕಲೆಯನ್ನು ಅರಸುತ್ತಾ ಕಮಲಾದೇವಿ ಅವರು ರಾಷ್ಟ್ರದ ಮೂಲೆ ಮೂಲೆಗಳನ್ನೆಲ್ಲಾ ಶೋಧಿಸಿದರು. ಅಜ್ಞಾತವಾಗಿ ಅಡಗಿದ್ದ ಕಲಾ ಸಂಪತ್ತನ್ನು ಬೆಳಕಿಗೆ ತಂದರು. ಭಾರತೀಯ ಕಲಾಕೃತಿಗಳ ತಂತ್ರಗಾರಿಕೆ, ರಚನೆ, ಕಲಾತ್ಮಕತೆ ಇತ್ಯಾದಿಗಳನ್ನು ಕುರಿತು ದೇಶ ವಿದೇಶಗಳಲ್ಲಿ ಉಪನ್ಯಾಸ ನೀಡಿದರು. ಕಾರ್ಯಾಗಾರಗಳನ್ನು ರೂಪಿಸಿ, ಕಲಾವಿದರಿಂದ ಪ್ರಾತ್ಯಕ್ಷಿಕೆಗಳನ್ನು ಕೊಡಿಸಿದರು.

ಕಲಾವಿದರು ನೆಲೆಸಿದ್ದ ಪ್ರದೇಶ ಎಂತಹ ಗುಡ್ಡಗಾಡಾಗಿರಲಿ, ಹೊಲಸು ತುಂಬಿದ ಪ್ರದೇಶವಾಗಿರಲಿ ಕಮಲಾದೇವಿ ಅವರು ಅಲ್ಲಿಗೇ ಹೋಗಿ ಕಲೆಯ ಬಗ್ಗೆ ಆಳವಾಗಿ ತಿಳಿಯುತ್ತಿದ್ದರು. ಕಲಾವಿದರ ಕೌಟುಂಬಿಕ ಹಿನ್ನೆಲೆ, ಸಾಮಾಜಿಕ ಸ್ಥಿತಿಗಳನ್ನು ತಿಳಿದು ಸಾಂತ್ವನ ಹೇಳಿ, ಧೈರ್ಯ, ಸ್ವಾಭಿಮಾನ ಹಾಗೂ ಕೃತಿಗಳ ಬಗ್ಗೆ ಹೆಮ್ಮೆ ಮೂಡಿಸುತ್ತಿದ್ದರು. ಕಲೆಗೆ, ಕಲಾವಿದರಿಗೆ ಗೌರವ ತಂದುಕೊಟ್ಟರು. ಕಲಾಕೃತಿ ರಚನೆಯಿಂದಲೂ ಜೀವನ ಸಾಗಿಸಬಹುದೆಂದು ತೋರಿಸಿ ಕೊಟ್ಟರು. ಕಮಲಾದೇವಿ ಅವರಿಗೆ ಮದ್ರಾಸ್‌ನ ರುಕ್ಮಿಣಿದೇವಿ ಅರುಂದೇಲ್, ಕರ್ನಾಟಕದ ಜಿ.ವೆಂಕಟಾಚಲಂ, ಮುಂಬಯಿಯ ಮುಲ್ಕರಾಜ್ ಆನಂದ್, ಮಧ್ಯಪ್ರದೇಶದಲ್ಲಿದ್ದ ವೆರಿಯರ್ ಎಲ್ವಿನ್ ಮುಂತಾದ ಅನೇಕ ಗಣ್ಯರ ನೆರವು ದೊರೆಯಿತು.

೧೯೬೪ರಲ್ಲಿ ವಿಶ್ವಕಲಾ ಪ್ರೇಮಿಗಳ ಸಹಕಾರದಿಂದ ವಿಶ್ವಕರಕುಶಲ ಕಲಾ ಸಮಿತಿ "ವರ್ಲ್ಡ್ ಕ್ರಾಫ್ಟ್ ಕೌನ್ಸಿಲ್" ಆರಂಭವಾಯಿತು. ನ್ಯೂಯಾರ್ಕ್ ನಗರದಲ್ಲಿ ನಡೆದ ಇದರ ಪ್ರಥಮ ಸಮ್ಮೇಳನಕ್ಕೆ ಕಮಲಾದೇವಿ ಅವರು ಉಪಾಧ್ಯಕ್ಷರಾಗಿದ್ದರು. ಅವರಿಗೆ ಆಫ್ರಿಕ, ಏಷ್ಯ ಖಂಡಗಳಲ್ಲಿ ಕರಕುಶಲ ಕಲೆಯ ಬಗ್ಗೆ ಅಭಿರುಚಿ ಬೆಳೆಸುವ ಕಾರ್ಯ ನೀಡಲಾಯಿತು. ಸಮಿತಿಯ ೩ನೇ ಸಭೆ ಅಮೆರಿಕದ ಪೆರುವಿನಲ್ಲಿ ನಡೆಯಿತು. ೧೯೬೦ರಲ್ಲಿ ಆಫ್ರಿಕಾದ ನೀಗ್ರೋ ಕಲೆ ಕುರಿತ ಸಮ್ಮೇಳನಕ್ಕೆ ಕಮಲಾದೇವಿ ಅವರು ಏಷ್ಯಾದ ಏಕೈಕ ಪ್ರತಿನಿಧಿ ಆಗಿದ್ದರು.

ಕಮಲಾದೇವಿ ಅವರು ಕಲೆ ಹಾಗೂ ರಂಗಭೂಮಿ ಕುರಿತು ಹತ್ತು ಪುಸ್ತಕಗಳನ್ನು ಬರೆದಿದ್ದಾರೆ. 'ದ ಟ್ರೈಬಲ್ ಆರ್ಟ್' ಎಂಬ ಅವರ ಸಂಶೋಧನಾ ಲೇಖನ ಗಮನಾರ್ಹವಾಗಿದೆ. ಅವರಿಗೆ ೧೯೫೫ರಲ್ಲಿ ಪದ್ಮಭೂಷಣ, ೧೯೬೬ರಲ್ಲಿ ಮ್ಯಾಗ್ಸೆಸೆ, ೧೯೭೦ರಲ್ಲಿ ಶಾಂತಿನಿಕೇತನದ ದೇಶಿಕೋತ್ತಮ ಪ್ರಶಸ್ತಿಗಳು ಲಭ್ಯವಾಗಿದ್ದವು. ಕಮಲಾದೇವಿ ಅವರ ಪ್ರಯತ್ನದಿಂದಾಗಿ ಕೇಂದ್ರ ಹಾಗೂ ಹಲವಾರು ರಾಜ್ಯಗಳಲ್ಲಿ ಕ್ರಾಫ್ಟ್ ಹಾಗೂ ಡಿಸೈನ್ ಸೆಂಟರ್ ಕರಕುಶಲ ಕಲಾಕೇಂದ್ರಗಳು ಆರಂಭವಾದವು. ಇನ್ನಿಲ್ಲದಂತೆ ನಶಿಸಿ ಹೋಗುತ್ತಿದ್ದ ಭಾರತೀಯ ಕರಕುಶಲ ಕಲೆಗೆ ಕಮಲಾದೇವಿ ಅವರು ಪುನರುಜ್ಜೀವನ ನೀಡಿದರು.

ರಾಷ್ಟ್ರೀಯ ಕರಕುಶಲ ಹಾಗೂ ಕೈಮಗ್ಗ ವಸ್ತು ಪ್ರದರ್ಶನಾಲಯ ೧೯೫೬ರಲ್ಲಿ ದೆಹಲಿಯಲ್ಲಿ ಅಖಿಲ ಭಾರತ ಕರಕುಶಲ ನಿಗಮದಿಂದ ಆರಂಭವಾಯಿತು. ಇದು ಕೇವಲ ಸಂಗ್ರಹ, ನಕಲು ಮಾಡುವಿಕೆ, ಪ್ರದರ್ಶನ ಇತ್ಯಾದಿಗಳಿಗಿಂತ ಪರಂಪರಾನುಗತವಾಗಿ ಬಂದಿದ್ದ ಕೃತಿನಿರ್ಮಾಣ ಕಾರ್ಯವು ಮುಂದುವರಿಯುವ ಕೊಂಡಿಯಂತೆ ರೂಪುಗೊಳ್ಳ ಬೇಕೆಂಬ ಆಶಯ ಉಳ್ಳದ್ದಾಗಿತ್ತು. ಎಂದರೆ ಗ್ರಾಮೀಣ ಪ್ರದೇಶದಿಂದ ಕಲಾವಿದರನ್ನು ಆಹ್ವಾನಿಸಿ ನುರಿತ ಹಿರಿಯ ಕಲಾವಿದರಿಂದ ಕ್ರಮಬದ್ಧ ಅಭ್ಯಾಸ ನೀಡಿ ಅಥವಾ ಕಾರ್ಯಾಗಾರ ಏರ್ಪಡಿಸಿ ಮತ್ತೆ ತಮ್ಮ ಪ್ರದೇಶದಲ್ಲಿ ಕಲೆಯನ್ನು ಮುಂದುವರಿಸುವಂತೆ ಪ್ರೋತ್ಸಾಹಿಸುವುದು ಮುಖ್ಯ ಉದ್ದೇಶವಾಗಿತ್ತು. ಕಲಾವಿದರ ಕೃತಿ ನಿರ್ಮಾಣಕ್ಕೆ ಬೇಕಾಗುವ ಮೂಲ ಪದಾರ್ಥ ನೀಡುವುದು, ಸಮೀಪದ ಪಟ್ಟಣ ಪ್ರದೇಶದಲ್ಲಿ ಕೃತಿಗಳ ಮಾರಾಟಕ್ಕೆ ಮಳಿಗೆಗಳನ್ನು ತೆರೆಯುವುದು ಸಹ ನಿಗಮದ ಕಾರ್ಯವಾಗಿತ್ತು. ಕೃತಿಕಾರನಿಗೆ ಮತ್ತು ಖಾಸಗಿ ವ್ಯಕ್ತಿಗಳಿಗೆ ಕೂಡ ಕೃತಿ ಮಾರಾಟಕ್ಕೆ ಅನುಕೂಲ ಮಾಡಿಕೊಟ್ಟಿತ್ತು. ಕರ್ನಾಟಕದಲ್ಲಿಯೂ ಕರಕುಶಲ ಕೇಂದ್ರಗಳು ಸ್ಥಾಪನೆಯಾದ ಬಗ್ಗೆ ಚರಿತ್ರೆ ಇದೆ.

ಕುಶಲಕರ್ಮಿಗಳನ್ನು ಆರ್ಥಿಕವಾಗಿ ಸಬಲೀಕರಿಸಲು ಮತ್ತು ಕರಕುಶಲತೆಯನ್ನು ವೃದ್ಧಿಸಲು DASTKAR ಸಂಸ್ಥೆಯು ೧೯೮೧ರಲ್ಲಿ ಸ್ಥಾಪನೆಯಾದ ಸರಕಾರೇತರ ಸಂಸ್ಥೆಯಾಗಿದೆ. ಮೊದಲು ಆರು ಜನ ಮಹಿಳೆಯರಿಂದ ಸ್ಥಾಪಿತವಾದ ಈ ಸಂಸ್ಥೆಗೆ ಲೈಲಾ ತಯ್ಯಾಬ್ಜಿ ಎಂಬ ಕರಕುಶಲಕರ್ಮಿ ಮಹಿಳೆ ಅಧ್ಯಕ್ಷರಾಗಿದ್ದಾರೆ. ಕೈಗಾರೀಕರಣ, ನಗರೀಕರಣ ಮತ್ತು ಜಾಗತೀಕರಣದ ಪ್ರಭಾವದಿಂದ ನಲುಗಿರುವ ದೇಸಿ ಕಲೆಗಳನ್ನು ಪುನರುಜ್ಜೀವನಗೊಳಿಸಿ, ದೇಸಿ ಕಲೆಗಳಿಗೆ ಮತ್ತು ಕುಶಲಕರ್ಮಿಗಳನ್ನು ಆರ್ಥಿಕ ಸ್ವಾವಲಂಬಿಗಳಾಗಿ ಮಾಡುವುದು ಈ ಸಂಸ್ಥೆಯ ಉದ್ದೇಶವಾಗಿದೆ. ಮಹಿಳಾ ಕುಶಲಕರ್ಮಿಗಳಿಗೆ ತಮ್ಮ ಪರಂಪರಾಗತ ಕಲೆಗಳನ್ನು ಜೀವಂತವಾಗಿಡುವುದನ್ನು ಕಲಿಸುತ್ತಲೇ ಅದರಿಂದ ಆದಾಯ ಗಳಿಕೆ ಮತ್ತು ಸ್ವಉದ್ಯೋಗ ಕಲ್ಪಿಸುವುದು ಇದರ ಮುಖ್ಯ ಉದ್ದೇಶವಾಗಿದೆ.

ಕುಶಲ ಕಲೆಗಳಿಗೆ ಮಾರುಕಟ್ಟೆ ಒದಗಿಸುವುದು, ಗ್ರಾಹಕ ಮತ್ತು ಕುಶಲಕರ್ಮಿಯ ಜೊತೆ ನೇರ ಸಂಪರ್ಕ ಸಾಧಿಸಿ ಉತ್ಪನ್ನಗಳನ್ನು ಮಾರಾಟ ಮಾಡಲು ಅನುಕೂಲಕರ ವಾಗುವಂತೆ, ಕುಶಲಕರ್ಮಿಗೆ ನಿರಂತರ ಆದಾಯ ಬರುವಂತೆ, ಕಲೆಯನ್ನು ವೃದ್ಧಿಸಿ ಹೊಸ ವಿನ್ಯಾಸವನ್ನು ಅಳವಡಿಸುವ ನಿಟ್ಟಿನಲ್ಲಿ ಈ ಸಂಸ್ಥೆಯು ಕೆಲಸ ನಿರ್ವಹಿಸುತ್ತಿದೆ. DASTKAR ಸಹಕಾರ ಸಂಘವನ್ನು ನಿರ್ಮಿಸಿ ಕುಶಲಕರ್ಮಿಗಳ ಉತ್ಪನ್ನಗಳಿಗೆ ನೇರ ಮಾರುಕಟ್ಟೆ ಒದಗಿಸಿದೆ. ಪ್ರಸ್ತುತ ಈ ಸಂಸ್ಥೆಯು ಭಾರತದ ೧೦೦ ನಗರಗಳಲ್ಲಿ ತನ್ನ ಸೇವೆಯನ್ನು ಕುಶಲಕರ್ಮಿಗಳಿಗಾಗಿ ಮೀಸಲಿರಿಸಿದೆ.

ಇತ್ತೀಚಿನ ದಿನಗಳಲ್ಲಿ ವಿಶ್ವದಾದ್ಯಂತ ಬೇಡಿಕೆ ಹೆಚ್ಚುತ್ತಿದ್ದು, ಭಾರತದ ಕುಶಲಕಲಾ ವಸ್ತುಗಳ ಬೇಡಿಕೆ ಹಾಗೂ ಆಸಕ್ತಿಯಿಂದಾಗಿ ಪುರಾತನ ಲಂಬಾಣಿ ಕಸೂತಿ ವಸ್ತುಗಳಿಗೆ ಉತ್ತಮ ಬೆಲೆ ದೊರೆಯುತ್ತಿದ್ದು, ಕಲೆಗೆ-ಕಲಾವಿದರಿಗೆ ಉತ್ತೇಜನ ದೊರೆತು ಹೊಸ ಹೊಸ ಆವಿಷ್ಕಾರಗಳಿಗೆ ಅವಕಾಶವಾಗುತ್ತಿದೆ. ಇವುಗಳ ಬೆಲೆಗಳು ಗಗನಮುಖಿ ಯಾಗುತ್ತಿದ್ದರೂ, ಮಾರಾಟಗಾರರಿಂದ ಬೇಡಿಕೆಯೂ ಹೆಚ್ಚಾಗುತ್ತಿದೆ. ವಿದೇಶಗಳಲ್ಲಿ ಈ ವಸ್ತುಗಳನ್ನು ಹೊಂದುವುದು ಅಭಿಮಾನ, ಕಲಾಭಿರುಚಿ ಮತ್ತು ಶ್ರೀಮಂತಿಕೆಯ ಸಂಕೇತವಾಗುತ್ತಿದೆ.

ಲಂಬಾಣಿ ಸ್ತ್ರೀಯರು ಪರಂಪರಾಗತವಾಗಿ ಮುಂದುವರೆಸಿಕೊಂಡು ಬಂದಿರುವ ಅದ್ಭುತ ಕಸೂತಿ ಕಲೆಗೆ ಮತ್ತು ಕಲಾತ್ಮಕ ವಸ್ತುಗಳಿಗೆ ಕಲಾ ಸಂಗ್ರಾಹಕರಿಂದ ಬಹಳಷ್ಟು ಬೇಡಿಕೆ ಇದೆ. ಗಾಢವಾದ ವರ್ಣಗಳು, ಅದ್ಭುತ ವರ್ಣ ಸಂಯೋಜನೆ, ಸೂಕ್ತ ಸ್ಥಳದಲ್ಲಿ, ಸೂಕ್ತ ರೀತಿಯಲ್ಲಿ ತೇಪೆ ಹಾಕಿದ ಕನ್ನಡಿಗಳು, ವಿಶಿಷ್ಟ ಹೊಲಿಗೆಗಳು, ವಿನ್ಯಾಸಗಳು ಇತ್ಯಾದಿಗಳಿಂದ ಅವರು ಸೃಷ್ಟಿಸುವ ಕಾಮನಬಿಲ್ಲಿನ ಮಾಯಾಲೋಕ ಎಂತಹವರನ್ನು ನಿಬ್ಬೆರಗಾಗಿಸುತ್ತದೆ. ಸಣ್ಣ ಸಣ್ಣ ಕನ್ನಡಿಗಳನ್ನು ಅಸಾಮಾನ್ಯ ರೀತಿಯಲ್ಲಿ ಹೊಲಿಗೆ ಹಾಕುವ ಕಲೆ ಲಂಬಾಣಿಗಳಿಗೆ ಮಾತ್ರ ಸಿದ್ಧಿಸಿರುವ ವಿಶಿಷ್ಟ ಕಲೆಯಾಗಿದೆ. ಪ್ರತಿ ಬಟ್ಟೆಯ ಚೂರು ಚೂರು ಕೂಡಿ ಒಂದು ಅದ್ಭುತ ಕಲಾಕೃತಿಯಾಗಿ ಮಾರ್ಪಡುವ ರೀತಿ ಲಂಬಾಣಿಗಳ ಕ್ರಿಯಾಶೀಲತೆ, ಕಲಾತ್ಮಕತೆ ಮತ್ತು ಪರಂಪರೆಯ ಪ್ರತೀಕಗಳಾಗಿವೆ.

**೪.೧. ಸಂಡೂರು ಕುಶಲ ಕಲಾಕೇಂದ್ರ**

"ಅಗಲ ಕಿರಿದಾದ ಅತಿ ಉದ್ದವಿರುವ ಕಣಿವೆಯಲ್ಲಿ ಎತ್ತರದ ಬೆಟ್ಟಗಳು ವಾಯುವ್ಯದಿಂದ ಆಗ್ನೇಯ ದಿಕ್ಕಿನವರೆಗೆ ಸಮಾನಾಂತರವಾಗಿವೆ. ಅವುಗಳಿಗೆ ಲಂಬವಾದ ಒಂದು ಸಣ್ಣ ನದಿ ಅವುಗಳ ಮಧ್ಯದ ಊರು ಸಂಡೂರು" ಎಂದು ೧೮೮೯ರಲ್ಲಿ ಭಾರತಕ್ಕೆ ಬಂದಿದ್ದ ಬ್ರಿಟಿಷ್ ಅಧಿಕಾರಿ ಬ್ರೂಸ್‌ಫೂಟ್ ಸಂಡೂರಿನ ಬಗ್ಗೆ ಉದ್ಧರಿಸುತ್ತಾನೆ. ೧೯೩೦ರಲ್ಲಿ ಇಲ್ಲಿಗೆ ಭೇಟಿ ನೀಡಿದ ಮಹಾತ್ಮಗಾಂಧಿ 'ಸಂಡೂರು ಒಂದು ಓಯಸಿಸ್', ಸೆಪ್ಟೆಂಬರ್‌ನಲ್ಲಿ ಅದರ ಸೌಂದರ್ಯ ನೋಡು ಎಂದು ಹೇಳುತ್ತಾರೆ. ಈ ಮಾತುಗಳನ್ನು ನೆನೆಯುತ್ತ ಈಗಿನ ಸಂಡೂರನ್ನು ಪ್ರವೇಶಿಸಿದರೆ, ಈ ಮಾತುಗಳು ಆಗಿನ ಕಾಲಕ್ಕೆ ಮಾತ್ರ ಸತ್ಯ ಎನ್ನುವಂತಹ ಭೌಗೋಳಿಕ ಪರಿಸರ ಈಗಿದೆ. ಸಂಡೂರು ಬಳ್ಳಾರಿ ಜಿಲ್ಲೆಯ ತಾಲೂಕು ಕೇಂದ್ರ. ಬಳ್ಳಾರಿಯಿಂದ ನೈರುತ್ಯಕ್ಕೆ ಸುಮಾರು ೫೪ ಕಿ.ಮೀ. ದೂರದಲ್ಲಿದೆ. ಬೆಂಗಳೂರಿನಿಂದ ವಾಯುವ್ಯದಲ್ಲಿ ೩೫೪ ಕಿ.ಮೀ ಅಂತರವಿದೆ. ತಾಲೂಕಿನ ಉತ್ತರ ಮತ್ತು ಪಶ್ಚಿಮಕ್ಕೆ





ಸಂಡೂರು ಕುಶಲ ಕಲಾಕೇಂದ್ರ, ಸಡೂರು




ಶ್ರೀಮತಿ ಮಹಾಲಕ್ಷ್ಮೀ ಕನ್ನಡಿ ಮತ್ತು ಕಸೂತಿ ಕೇಂದ್ರ, ಸಂಡೂರು




ಕಸೂತಿ ಕೆಲಸದಲ್ಲಿ ನಿರತರಾಗಿರುವ ಸಂಡೂರು ಕುಶಲ ಕಲಾ ಕೇಂದ್ರದ ಕಲಾವಿದೆಯರು





ಕಸೂತಿ ಕೆಲಸದಲ್ಲಿ ನಿರತರಾಗಿರುವ ಸಂಡೂರು ಕುಶಲ ಕಲಾ ಕೇಂದ್ರದ ಕಲಾವಿದೆಯರು



ಕಸೂತಿ ಕಲೆಗೆ ಅಂತಿಮ ರೂಪ ನಿಡುತ್ತಿರುವ ಮಹಿಳೆಯರು



ಕಸೂತಿ ವಿನ್ಯಾಸಕ್ಕಾಗಿ ರೇಖೆ ಹಾಕುತ್ತಿರುವುದು

ಹೊಸಪೇಟೆ, ದಕ್ಷಿಣಕ್ಕೆ ಕೂಡ್ಲಿಗಿ, ಪೂರ್ವಕ್ಕೆ ಬಳ್ಳಾರಿ ಹಾಗೂ ಮೊಳಕಾಲ್ಮೂರು(ಚಿತ್ರದುರ್ಗ ಜಿಲ್ಲೆ) ತಾಲೂಕುಗಳಿವೆ. "ಸಂಡೂರು ಬಳ್ಳಾರಿ ಜಿಲ್ಲೆಯ ಮಲೆನಾಡು ಹಾಗೂ ಈ ಜಿಲ್ಲೆಯ ಪುಟ್ಟ ಕಾಶ್ಮೀರ. ಬೆಟ್ಟ ಗುಡ್ಡಗಳಿಂದಾವೃತವಾದ ಸುಂದರ ನಾಡು. ಅದು ಅತಿ ಹೆಚ್ಚು ಮಳೆ ಬೀಳುವ ಪ್ರದೇಶವಾಗಿದ್ದು ಉತ್ತಮ ನೆಲ ಜಲ ಪಡೆದುಕೊಂಡಿದೆ ಎಂದು ಈ ತಾಲೂಕನ್ನು ಪರಿಚಯಿಸುವಾಗ ಬಿಟ್ಟು ಬಿಡದೆ ಉಲ್ಲೇಖಿಸಲಾಗುತ್ತದೆ. ಇಂತಹ ರಮ್ಯ ಕಲ್ಪನೆ ಈಗಿನ ಸಂಡೂರಿನೊಂದಿಗೆ ಹೊಂದಿಕೊಳ್ಳಲಾರದು. ಸಂಡೂರನ್ನು ಒಳಗೊಂಡ ಬಳ್ಳಾರಿ ಜಿಲ್ಲೆಯು ಪೂರ್ವಭಾಗಕ್ಕೆ ಆಂಧ್ರಪ್ರದೇಶದ ಅನಂತಪುರ ಹಾಗೂ ಕರ್ನೂಲ್, ಪಶ್ಚಿಮಕ್ಕೆ ಧಾರವಾಡ, ದಕ್ಷಿಣಕ್ಕೆ ಚಿತ್ರದುರ್ಗ, ಉತ್ತರಕ್ಕೆ ರಾಯಚೂರು ಜಿಲ್ಲೆಗಳು ಗಡಿಗಳಾಗಿವೆ.

೧೯೮೪ರಲ್ಲಿ ಸ್ಥಾಪನೆಯಾದ ಸಂಡೂರು ಕುಶಲ ಕಲಾಕೇಂದ್ರವನ್ನು ಆರಂಭದಲ್ಲಿ ಸಂಡೂರು ಮ್ಯಾಂಗನೀಸ್ ಅಂಡ್ ಐರನ್ ಓರ್ ಲಿಮಿಟೆಡ್ ಸಂಸ್ಥೆಯು ಆರ್ಥಿಕವಾಗಿ ಉತ್ತೇಜಿಸುತ್ತ, ಪ್ರಾಯೋಜಿಸುತ್ತ ಬಂದಿದೆ. ಸುಮಾರು ೨೦ ವರ್ಷಗಳಿಂದ SMIORE ಸಂಸ್ಥೆಯು ಸಂಡೂರಿನ ಸುತ್ತಮುತ್ತ ಇರುವ ಲಂಬಾಣಿ ತಾಂಡಾಗಳ ಅಭಿವೃದ್ಧಿಗಾಗಿ ಮತ್ತು ಈ ಬುಡಕಟ್ಟಿನ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸಲು ಶ್ರಮಿಸುತ್ತಿದೆ. SKKK ಇಂದು ಸ್ವತಂತ್ರ ಸಂಸ್ಥೆಯಾಗಿದ್ದು, ತನ್ನದೇ ಆದ ಸಂಪನ್ಮೂಲ ಹೊಂದಿದೆ. ಇದರ ಕಠಿಣ ಪರಿಶ್ರಮದಿಂದ ಸಾವಿರಾರು ಕುಶಲಕರ್ಮಿಗಳ ಆರ್ಥಿಕಮಟ್ಟವನ್ನು ಗಣನೀಯ ಪ್ರಮಾಣದಲ್ಲಿ ಹೆಚ್ಚಿಸಲು ಪ್ರಮುಖ ಪಾತ್ರ ವಹಿಸಿದೆ. ಇದರ ಉತ್ಪನ್ನಗಳು ದೇಶದ ಮೂಲೆ ಮೂಲೆಗಳಲ್ಲಿ ಹೆಸರುವಾಸಿಯಾಗಿವೆ. ಕೇಂದ್ರದಲ್ಲಿ ಕೆಲಸ ಮಾಡುವ ೩೦೦ಕ್ಕೂ ಹೆಚ್ಚು ಕುಶಲಕರ್ಮಿಗಳು ತಮ್ಮ ಮಾಸಿಕ ಆದಾಯದ ಜೊತೆ ಇತರೆ ಭತ್ಯೆ ಪಡೆಯುತ್ತಿದ್ದಾರೆ. SKKK ಸ್ವತಂತ್ರ ಸಂಸ್ಥೆಯಾಗಿದ್ದು, ಖಾದಿ ಮತ್ತು ಗ್ರಾಮೀಣ ಕೈಗಾರಿಕ ಆಯೋಗದಿಂದ ಮಾನ್ಯತೆ ಪಡೆದಿದೆ. ಹಾಗೆಯೇ ಭಾರತ ಸರಕಾರದ ಜವಳಿ ಸಚಿವಾಲಯದ ಪ್ರಾಯೋಜಕತ್ವದಲ್ಲಿ ತನ್ನ ಅನೇಕ ಕೆಲಸಗಳನ್ನು ನಿರ್ವಹಿಸುತ್ತಿದೆ. ಇದಲ್ಲದೆ, FICCI, NABARD, Dastkar, Zilla Panchayt Bellary ಮತ್ತಿತರ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳಿಂದ ಮಾನ್ಯತೆ ಪಡೆದಿದೆ.

ಸಂಡೂರು ಲಂಬಾಣಿ ಕಸೂತಿ ಎಂದೇ ಕರ್ನಾಟಕ ರಾಜ್ಯದಲ್ಲಿ ಹೆಸರುವಾಸಿಯಾಗಿರುವ ಈ ಕಸೂತಿ ಕೇಂದ್ರವು ಲಂಬಾಣಿ ಎಂಬ ಅಲೆಮಾರಿ ಬುಡಕಟ್ಟು ಮಹಿಳೆಯರ ಸೂಜಿಕಲೆಯಾಗಿದೆ. ಲಂಬಾಣಿ ಬುಡಕಟ್ಟಿನ ಸಂಸ್ಕೃತಿ, ಆಚರಣೆ, ಸಂಪ್ರದಾಯಗಳನ್ನು ಪ್ರತಿನಿಧಿಸುವ ಈ ಕಲೆಯನ್ನು ಲಂಬಾಣಿ ಭಾಷೆಯಲ್ಲಿ 'ಖಿಲಣ, ಕಾಮಕರೇರೂ ಅಥವಾ

ತೂನ್' ಎನ್ನಲಾಗುತ್ತದೆ. ಈ ಕಲೆಯು ಲಂಬಾಣಿಯರ ಗಾದೆ, ಒಗಟು, ಹಾಡು ಮತ್ತು ಜನಪದ ಕಥೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ತಲೆಮಾರುಗಳಿಂದ ಈ ಕಲೆಯು ತಾಯಿಯಿಂದ ಮಗಳಿಗೆ, ಮಗಳಿಂದ ಮಕ್ಕಳಿಗೆ ವರ್ಗಾವಣೆಯಾಗುತ್ತಲೇ ಬಂದಿದೆ. ಕನ್ನಡಿಯ ಚೂರುಗಳು, ನಾಣ್ಯಗಳು, ಕವಡೆ, ಚಿಪ್ಪುಗಳು ಮತ್ತು ಅಲ್ಯೂಮಿನಿಯಮ್‌ನಿಂದ ಮಾಡಿದ ಆಭರಣಗಳನ್ನು ಬಳಸಿ ಉಡುಪಿನ ಮೇಲೆ ಬಣ್ಣ ಬಣ್ಣದ ದಾರಗಳಿಂದ ಹೊಲೆಯುವ ಸೂಜಿ ಕಲೆಯಾಗಿದೆ. ವಿವಿಧ ಬಣ್ಣದ ಬಟ್ಟೆ ಚೂರುಗಳನ್ನು ಒಂದುಗೂಡಿಸಿ ಉಡುಪನ್ನು ತಯಾರಿಸಿ ಅವುಗಳ ಮೇಲೆ ಮಾಡಲಾಗುವ ಕಸೂತಿಯು ವಿವಿಧ ವಿನ್ಯಾಸಗಳಲ್ಲಿ ಲಭ್ಯವಿದೆ. ಚೌಕಾಕಾರದ, ದುಂಡಾಕಾರದ ಕನ್ನಡಿ ಅಥವಾ ಗಾಜಿನ ಚೂರುಗಳು, ಕವಡೆಗಳು, ಚಿಪ್ಪುಗಳು, ಮಣಿಗಳು ಮತ್ತು ಬಿಳಿ ಬಣ್ಣದ ತಗಡಿನ ಆಭರಣಗಳು ಈ ಕಲೆಯ ವಿಶಿಷ್ಟವಾಗಿದೆ.

ಸಂಡೂರಿನ ಸುಶೀಲಾ ನಗರ ತಾಂಡದ ಶ್ರೀಮತಿ ಶಾಂತ ಬಾಯಿ, ಶ್ರೀಮತಿ ಗೌರಿ ಬಾಯಿ ಮತ್ತು ಶ್ರೀಮತಿ ಪಾರ್ವತಿ ಬಾಯಿ ಎಂಬ ಮೂವರು DASTKARನ ಅಧ್ಯಕ್ಷರಾದ ಲೈಲಾ ತಯ್ಯಾಬ್ಜಿಯವರ ಮಾರ್ಗದರ್ಶನದಲ್ಲಿ ಮಹಿಳೆಯರು ತಮ್ಮದೇ ಕರಕುಶಲ ತಂಡವನ್ನು ರಚಿಸಿದ್ದಾರೆ. ಈ ತಂಡವನ್ನು ಸ್ವೀಡನ್‌ನಲ್ಲಿ ಸೆಪ್ಟೆಂಬರ್ ೨೦೦೩ರಲ್ಲಿ ಕಸೂತಿಯ ಬಗ್ಗೆ ನೆರವೇರಿದ ಅಂತಾರಾಷ್ಟ್ರೀಯ ಕಸೂತಿ ಪ್ರದರ್ಶನದಲ್ಲಿ ತಮ್ಮ ಉತ್ಪನ್ನಗಳನ್ನು ಪ್ರದರ್ಶಿಸುವ ಅವಕಾಶ ಕಲ್ಪಿಸಿದೆ.

ಈ ಕರಕುಶಲ ತಂಡವು ೯ನೇ ತಂಡವಾಗಿದ್ದು ಇದರ ಬಣ್ಣದ ಆಯ್ಕೆ, ಕಸೂತಿಯ ಗುಣಮಟ್ಟವನ್ನು ಪ್ರದರ್ಶಿಸುವ ಈ ಅಪರೂಪದ ಅವಕಾಶವು ಲಂಬಾಣಿ ಮಹಿಳೆಯರನ್ನು ಸ್ವಾವಲಂಬನೆಯತ್ತ ಕೊಂಡೊಯ್ಯಲು ಮತ್ತು ದೇಸಿ ಕಲೆಗಳನ್ನು ಪುನರುಜ್ಜೀವನಗೊಳಿಸಲು ಮತ್ತಷ್ಟು ಸಹಾಯಕಾರಿಯಾಗಿದೆ. ಲಂಬಾಣಿ ಮಹಿಳೆಯರಿಗೆ ಕಸೂತಿಯು ಜೀವನದ ಅವಿಭಾಜ್ಯವಾಗಿದ್ದು, ಸ್ವೀಡನ್‌ನಲ್ಲಿ ನಡೆದ ಪ್ರದರ್ಶನವು ಇವರ ದಿನಂಪ್ರತಿ ಮತ್ತು ಮದುವೆ ಸಂದರ್ಭದ ಉಡುಗೆಗಳನ್ನು ಮಾರುವ ಅವಕಾಶ ಸಿಕ್ಕಿದ್ದು ಅವರ ತಲೆಮಾರುಗಳಿಂದ ಸಾಗಿ ಬಂದ ಕಲೆಗೆ ಸಂದ ಗೌರವವಾಗಿದೆ.

ಶ್ರೀ ವೀರಣ್ಣ, ಕಾರ್ಯದರ್ಶಿಗಳು ಮತ್ತು ಫಹೀಮ್ ಖಾನ್ ಮ್ಯಾನೇಜರ್, ಇವರು ಸೆಪ್ಟೆಂಬರ್ ೨೦೦೩ ನ್ಯೂಯಾರ್ಕ್‌ನಲ್ಲಿ ನಡೆದ ಈ ಅಂತಾರಾಷ್ಟ್ರೀಯ ಪ್ರದರ್ಶನದಲ್ಲಿ ಭಾಗವಹಿಸಿದ್ದರು. ಈ ಪ್ರದರ್ಶನವನ್ನು ಅಮೇರಿಕದ ಸರಕಾರೇತರ ಸಂಸ್ಥೆಯೊಂದು ಆಯೋಜಿಸಿತ್ತು. ಶ್ರೀಮತಿ ಶಾಂತಬಾಯಿಯವರು ಏಶಿಯನ್ ಹೆರಿಟೇಜ್ ಫೌಂಡೇಶನ್, ನವದೆಹಲಿ, ೨೦೦೪ರಲ್ಲಿ ಸ್ಪೇನ್‌ನ ಬಾರ್ಸಿಲೋನದಲ್ಲಿ ಆಯೋಜಿಸಿದ್ದ ಕರಕುಶಲ ಪ್ರದರ್ಶನದಲ್ಲಿ

ಭಾಗವಹಿಸಿದ್ದರು. ಶ್ರೀ ನೂರುಲ್ಲ, ಡೆಪ್ಯೂಟಿ ಮ್ಯಾನೇಜರ್, ಇವರನ್ನು ಬೆಂಗಳೂರಿನ ಸಂಸ್ಥೆಯು ೨೦೦೫ರಲ್ಲಿ ಪೋಲ್ಯಾಂಡ್‌ನಲ್ಲಿ ನೆರವೇರಿಸಿದ ಕಲಾಪ್ರದರ್ಶನಕ್ಕೆ ಆಹ್ವಾನಿಸಿತ್ತು.

ಶ್ರೀಮತಿ ಗೌರಿ ಬಾಯಿಯವರನ್ನು ೨೦೦೫ರಲ್ಲಿ ಲಂಡನ್‌ನಲ್ಲಿರುವ ಟ್ರಫಲ್ಗಾರ್ ಸ್ಕೇರ್‌ನಲ್ಲಿ ನಡೆದ ಕರಕುಶಲ ಪ್ರದರ್ಶನಕ್ಕೆ ಆಹ್ವಾನ ನೀಡಿತ್ತು. ಶ್ರೀಮತಿ ಗೌರಿಬಾಯಿ ಮತ್ತು ಶ್ರೀ ವೀರಣ್ಣ ಇವರನ್ನು ೨೦೦೬ರಲ್ಲಿ ಬರ್ಮಿಂಗ್‌ಹ್ಯಾಮ್ ಗಿಫ್ಟ್ ಟ್ರೇಡ್ ಫೇರ್‌ಗೆ ವಿಶೇಷ ಆಹ್ವಾನಿತರನ್ನಾಗಿ ಬರಮಾಡಿಕೊಂಡಿತ್ತು. ಸಂಡೂರಿನ ಕುಶಲ ಕಲಾಕೇಂದ್ರದಲ್ಲಿ ೧೨ ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಿರುವ ಶ್ರೀಮತಿ ಶಾಂತ ಬಾಯಿಯವರಿಗೆ ೨೦೦೧ರಲ್ಲಿ National Master Crafts Person award, ೨೦೦೪ರಲ್ಲಿ Crafts Council of Karnataka ಸಂಸ್ಥೆಯು ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ ನೀಡಿ ಗೌರವಿಸಿದೆ. ಶ್ರೀಮತಿ ಗೌರಿ ಬಾಯಿ ಇವರಿಗೆ ಭಾರತ ಸರಕಾರದ ಕೃಷಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವಾಲಯವು National Excellence awardನಿಂದ ಗೌರವಿಸಿದೆ.

ತನ್ನ ವೈಶಿಷ್ಟ್ಯತೆಗಾಗಿ ಮತ್ತು ವಿಶಿಷ್ಟ ವಿನ್ಯಾಸಕ್ಕಾಗಿ ಸಂಡೂರು ಲಂಬಾಣಿ ಕಸೂತಿಯು ಜಾಗತಿಕ ಮಟ್ಟದಲ್ಲಿ ಹೆಸರುವಾಸಿಯಾಗಿದೆ. ಈ ಕಸೂತಿ ಕಲೆಯು ಜಾಗತಿಕ ಮಟ್ಟದಲ್ಲಿ ತನ್ನ ಛಾಪನ್ನು ಮೂಡಿಸಿದೆ. ಭಾರತವೆಂದರೆ ವೈವಿಧ್ಯತೆಯಲ್ಲಿ ಏಕತೆ, ಭೌಗೋಳಿಕ ವೈವಿಧ್ಯತೆಗಳಿಂದಾಗಿ ಪ್ರತಿ ಪ್ರದೇಶದ ಮಣ್ಣು, ನೀರು, ಗಾಳಿ, ಬಿಸಿಲು, ಜನರ, ಕಲೆ, ಭಾಷೆಗಳು ತನ್ನದೇ ವೈಶಿಷ್ಟ್ಯತೆಯನ್ನು ಪಡೆದಿವೆ. ಇದು ಆ ಪ್ರದೇಶಕ್ಕೆ ಮಾತ್ರ ಸೀಮಿತವಾದ ಅಪೂರ್ವ ವಸ್ತುಗಳ ಸೃಷ್ಟಿಗೆ ಕಾರಣವಾಗಿದ್ದು, ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಅವುಗಳಿಗೆ ಹೆಚ್ಚುತ್ತಿರುವ ಮೌಲ್ಯ ಹಾಗೂ ಬೇಡಿಕೆಯಿಂದ ಅದೇ ಹೆಸರಿನ ಖೋಟಾ ನಕಲಿ ವಸ್ತುಗಳನ್ನು ಸೃಷ್ಟಿಸುವ ಹುನ್ನಾರವನ್ನು ಮುಂದುವರಿದ ರಾಷ್ಟ್ರಗಳ ಬಹುರಾಷ್ಟ್ರೀಯ ಕಂಪನಿಗಳಿದ್ದು, ಇದರ ವಿರುದ್ಧ ಪೇಟೆಂಟ್ ಪಡೆದು Geogrophical Indication ಮಾನ್ಯತೆ ಪಡೆದಾಗ ಆ ಹೆಸರಿನ ಅದೇ ವಸ್ತುಗಳನ್ನು ಆ ಪ್ರದೇಶದವರಲ್ಲದೇ ಬೇರೆಯವರು ಉತ್ಪಾದಿಸಿ ಮಾರುವಂತಿಲ್ಲ.

ಈ ಹಿನ್ನೆಲೆಯಲ್ಲಿ ದಿನಾಂಕ ೩.೯.೨೦೧೦ರಂದು ಭಾರತದ (Registrar of Geogrophical ಇನ್ನು ಮುಂದೆ, ಸಂಡೂರಿನ ಕುಶಲ ಕೇಂದ್ರದಲ್ಲಿ ತಯಾರಾಗುವ ಕಸೂತಿಯ ಬಟ್ಟೆಗಳು ಅಂತಾರಾಷ್ಟ್ರೀಯ ಮಟ್ಟದ ಗುಣಮಟ್ಟ ಹೊಂದಿರುವ ಉತ್ಪನ್ನವಾಗಿದೆ.

ಸುಮಾರು ೩೦೦ ಲಂಬಾಣಿ ಮಹಿಳೆಯರು ಮಾಡುವ ಕಸೂತಿಯು ಅಂತಾರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡುವ ಮತ್ತು ಅದರಿಂದ ಬರುವ

ಲಾಭದಲ್ಲಿ ತಮ್ಮ ಆರ್ಥಿಕ ಮಟ್ಟವನ್ನು ಸುಧಾರಿಸಿಕೊಳ್ಳುವ ಅವಕಾಶವನ್ನು ತಮ್ಮದಾಗಿಸಿಕೊಂಡಿವೆ. ಕರ್ನಾಟಕ ರಾಜ್ಯ ಕುಶಲಕಲೆ ಅಭಿವೃದ್ಧಿ ನಿಗಮ ನಿಯಮಿತವು ಲಂಬಾಣಿ ಕಸೂತಿಯನ್ನು 'ಕಾವೇರಿ' ಎಂಬ ಹೆಸರಿನಲ್ಲಿ ಮಾರಾಟ ಮಾಡುತ್ತಿದೆ. ಜಿ.ಐ(Geographical Indications) ಪಟ್ಟಿಗೆ ಸೇರಿದ ಕರ್ನಾಟಕದ ೨೮ನೇ ಉತ್ಪನ್ನವಾಗಿದೆ.

**ಈ ಕಸೂತಿಯ ಲಕ್ಷಣಗಳು**

೧. ವಿವಿಧ ಬಟ್ಟೆಯ ಚೂರುಗಳನ್ನು ಜೋಡಿಸಿ ಕೈ ಹೊಲಿಗೆಯಿಂದಲೇ ತಯಾರಿಸುವ ಉಡುಪಿನ ಮೇಲೆ ಮಾಡುವ ಕಲೆಯು ಬಳ್ಳಾರಿ ಜಿಲ್ಲೆಯ ಸಂಡೂರಿನಲ್ಲಿ ಹೆಚ್ಚು ಪ್ರಚಲಿತವಾಗಿದೆ.

೨. ಹೆಚ್ಚಾಗಿ ಮಹಿಳಾ ಉಡುಪುಗಳ ಮೇಲೆ ಕಸೂತಿ ಮಾಡಲಾಗಿದೆ. ಕುಪ್ಪಸವನ್ನು "ಚೋಲಿ" ಎಂದು, ಸೆರಗನ್ನು "ಓಡ್ನಿ" ಎಂದು, ಮೊಣಕಾಲಿನವರೆಗೆ ಧರಿಸಲಾಗುವ ಲಂಗವನ್ನು "ಲೆಹಂಗ' ಎಂದು ಕರೆಯಲಾಗುತ್ತದೆ.

೩. ಕಸೂತಿ ಮಾಡಿದ ಉಡುಗೆಯ ಬಣ್ಣವು ಲಂಬಾಣಿಯರ ಜೀವನ ಶೈಲಿಯನ್ನು ಪ್ರತಿನಿಧಿಸುತ್ತದೆ. ಕೆಂಪು ಬಣ್ಣದ ಉಡುಗೆ ಮದುವೆಯ ಸೂಚಕವಾದರೆ, ಹಳದಿ ಬಣ್ಣವು ಲಂಬಾಣಿ ಮಹಿಳೆಯರ ಅಸ್ಮಿತೆ ಮತ್ತು ಸಾಮರ್ಥ್ಯವನ್ನು ಸೂಚಿಸುತ್ತದೆ.

೪. ಚಿಕ್ಕ ಚಿಕ್ಕ ಬಟ್ಟೆಗಳ ತುಂಡುಗಳಿಂದ ಮಾಡಲಾಗಿರುವ ಈ ಕಸೂತಿಯು ಸಂಕೀರ್ಣ ರೂಪದ್ದಾಗಿದೆ.

೫. ಕವಡೆ, ನಾಣ್ಯ, ಗುಂಡಿ, ಮಣಿ, ಮತ್ತು ಕನ್ನಡಿಯ ಚೂರುಗಳನ್ನು ಬಳಸಿ ಕಸೂತಿಯನ್ನು ಹೆಚ್ಚು ಅಲಂಕೃತಗೊಳಿಸಲಾಗುತ್ತದೆ.

**ಭೌಗೋಳಿಕ ಗುರುತುಗಳು**

**ಸಂಡೂರಿನ ಲಂಬಾಣಿ ಕಸೂತಿ ಸಾಮಗ್ರಿಗಳ ವಿವರ:** ಸಂಡೂರು ಲಂಬಾಣಿ ಕಸೂತಿಯು ಲಂಬಾಣಿ ಮಹಿಳೆಯರ ವಿಶಿಷ್ಟ ಕರಕುಶಲ ಕಲೆಯಾಗಿದ್ದು, ಇದಕ್ಕೆ ಬಳಸಲಾಗುವ ಬಟ್ಟೆಯು ಲಂಬಾಣಿ ಬುಡಕಟ್ಟಿನ ಬದುಕಿನ ವ್ಯಾಮೋಹ, ಪ್ರೀತಿಯ ದ್ಯೋತಕವಾಗಿದೆ. ಪುರುಷರು ಸಾಮಾನ್ಯ ಉಡುಪು ಧರಿಸಿದರೆ, ಮಹಿಳೆಯರು ಬಣ್ಣ ಬಣ್ಣದ ತುಂಡುಬಟ್ಟೆಗಳನ್ನು ಹೊಲಿದು ಅವುಗಳ ಮೇಲೆ ಹಿತ್ತಾಳೆ, ಬೆಳ್ಳಿ, ಮುಂತಾದ ಆಲಂಕಾರಿಕ ವಸ್ತುಗಳನ್ನು ಪೋಣಿಸಿ ಕಸೂತಿ ಮಾಡುತ್ತಾರೆ. ಅವರ ಉಡುಪಿನ ಬಣ್ಣವು ಪೂರ್ವಜರ ಮೇಲಿನ ಗೌರವ ಮತ್ತು ಅವಿನಾಭಾವ ಸಂಬಂಧವನ್ನು ಸಾರುತ್ತದೆ. ಚೂರು ಬಟ್ಟೆಗಳನ್ನು ಹೊಲಿದು, ಉಡುಪನ್ನಾಗಿ ತಯಾರಿಸಿ, ಅವುಗಳ ಮೇಲೆ ಮಾಡುವ ಕಸೂತಿಯನ್ನು

"ತೇಪೆ ಕೆಲಸ" ಅಥವಾ "ತುಂಡು ಕೃತಿ" ಎಂದು ಹೇಳಬಹುದು. ತುಂಡು ಬಟ್ಟೆಯನ್ನು ಹೊಲಿದು ರಜಾಯಿಯನ್ನು ಹೊಲಿಯುವ ಲಂಬಾಣಿ ಮಹಿಳೆಯರು ತಮ್ಮ ಬದುಕಿನ ಆನಂದದ ಕ್ಷಣಗಳನ್ನು ಈ 'ತೇಪೆ ರಜಾಯಿ'ಯನ್ನು ಹೊಲಿಯುವುದರಲ್ಲಿ ಕಳೆಯುತ್ತಾರೆ. ರಜಾಯಿಗಳನ್ನು ಹೊಲಿಯಲು ಗುಂಪಾಗಿ ಸೇರುವ ಮಹಿಳೆಯರು ತಮ್ಮ ಸುಖ ದುಃಖವನ್ನು ಕನಸುಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ.

**ವಿಧಾನಗಳು**

ಉಡುಪಿನ ಅಂಚಿಗೆ ತ್ರಿಭುಜಾಕಾರದ ಆಲಂಕಾರಿಕ ವಸ್ತುಗಳನ್ನು ಹೊಲಿಯುವ ಪ್ರಕಾರವನ್ನು 'ಕಟ್ಟ' ಎನ್ನುತ್ತಾರೆ. ಕಸೂತಿ ಮಾಡಿದ ಉಡುಪನ್ನು ಮಹಿಳೆಯರೇ ಬಳಸುವುದಲ್ಲದೇ, ಕೆಲವು ಉಡುಪುಗಳನ್ನು ಹಾಸಿಗೆಗಳಿಗೆ, ಕುಷನ್ ಕವರುಗಳಿಗೆ, ಚೀಲಗಳಿಗೆ, ತೋರಣಗಳಿಗೆ ಬಳಸುತ್ತಾರೆ. ವಧುವಿನ ಧಾರೆ ಸೀರೆ ಲಂಬಾಣಿ ಮಹಿಳೆಯರ ಅತಿ ಆಲಂಕಾರಿಕ ಉಡುಗೆಯಾಗಿದೆ. ಲೆಹಂಗ, ಚೋಲಿ ಮತ್ತು ಓಡ್ನಿಯನ್ನು ಶ್ರೀಮಂತವಾಗಿ ಅಲಂಕರಿಸಿ ಹೊಲಿಯುತ್ತಾರೆ. ವಧುವಿನ ಈ ಉಡುಪನ್ನು ತಯಾರಿಸಲು ಕನಿಷ್ಠ ಒಂದು ವರ್ಷ ಬೇಕಾಗುತ್ತದೆ. ವಧುವಿನ ತಂದೆ, ತಾಯಿ, ತಮ್ಮ ಮಗಳ ಮದುವೆಯಲ್ಲಿ ಮೂರು ಲೆಹಂಗ, ಚೀಲ ಮತ್ತಿತರ ಕಸೂತಿ ಸಾಮಗ್ರಿಗಳನ್ನು ವರದಕ್ಷಿಣೆಯ ರೂಪದಲ್ಲಿ ಕೊಡುವುದು ವಾಡಿಕೆಯಾಗಿದೆ. ಲಂಬಾಣಿ ಮಹಿಳೆಯರ ಉಡುಪುಗಳನ್ನು ಈ ಕೆಳಕಂಡಂತೆ ವರ್ಗೀಕರಿಸ ಬಹುದು.

**ಮದುವೆ ಉಡುಪುಗಳು**

ವಧುವಿನ ಉಡುಪನ್ನು ಲಂಬಾಣಿ ಭಾಷೆಯಲ್ಲಿ 'ತಾಂಗಡಿ' ಎಂದು ಕರೆಯತ್ತಾರೆ. ಮದುವೆಯ ಉಡುಪುಗಳು ಅವರವರ ಆರ್ಥಿಕ ಸೌಲಭ್ಯ ಮತ್ತು ಸಾಮಾಜಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಹೊಲಿಯಲಾಗುತ್ತದೆ. ಲಂಬಾಣಿ ಕಸೂತಿಯು ಬಹುತೇಕ ಜ್ಯಾಮಿತಿಯ ರೂಪದಲ್ಲಿದ್ದು, ಬಣ್ಣ ಹಚ್ಚಿದ ಹತ್ತಿ ಬಟ್ಟೆಗಳನ್ನು ಹೆಚ್ಚಾಗಿ ಬಳಸುತ್ತಾರೆ. ಕೆಲವು ಉಡುಪುಗಳನ್ನು ಪಾಲಿಯೆಸ್ಟರ್ ಬಟ್ಟೆಯಲ್ಲೂ ಹೊಲಿಯುವುದುಂಟು.

**ಸಾಂಡಿಯ ಮತ್ತು ಸಿಂಗಡಿ**

ಲಂಬಾಣಿಗರ ಸಾಮಾಜಿಕ ಜೀವನದಲ್ಲಿ ಎತ್ತು ಪ್ರಮುಖ ಪಾತ್ರ ವಹಿಸುವ ಪ್ರಾಣಿಯಾಗಿದೆ. ಹಬ್ಬಹರಿದಿನಗಳಲ್ಲಿ ಮತ್ತು ವಿಶೇಷ ಸಂದರ್ಭದಲ್ಲಿ ಎತ್ತುಗಳನ್ನು ಅಲಂಕರಿಸಲಾಗುತ್ತದೆ. ಎತ್ತುಗಳಿಗಾಗಿಯೇ ಪ್ರತ್ಯೇಕ ಆಭರಣಗಳನ್ನು ತಯಾರಿಸುತ್ತಾರೆ. ಇಂತಹ ಆಭರಣಗಳನ್ನು ಸಾಂಡಿಯ ಮತ್ತು ಸಿಂಗಡಿ ಎನ್ನುತ್ತಾರೆ. ಸಾಂಡಿಯ ಆಭರಣಗಳನ್ನು ಎತ್ತಿನ ಹಣೆ,

ತಲೆಯನ್ನು ಸಿಂಗಾರಿಸಲು ಬಳಸಿದರೆ, ನಾಲ್ಕು ಆಯತಾಕಾರದ ಬಟ್ಟೆಗಳನ್ನು ಜೋಡಿಸಿ ಅವುಗಳಿಗೆ ಚೌಕಾಕಾರದ ಗಾಜನ್ನು ಬಟ್ಟೆಯ ಮಧ್ಯ ಭಾಗದಲ್ಲಿ ಹೊಲಿದು, ಎತ್ತಿನ ಕೊಂಬುಗಳ ಮಧ್ಯೆ ಇಳಿ ಬಿಡುತ್ತಾರೆ. ಸಾಂಡಿಯ ಆಭರಣಗಳನ್ನು ಚಿಪ್ಪುಗಳಿಂದ, ಗಾಜಿನ ತುಣುಕುಗಳಿಂದ ತಯಾರಿಸಲಾಗುತ್ತದೆ.

**ಕಲ್ಚಿ**

ಹೆಗಲಿಗೆ ನೇತು ಹಾಕಿಕೊಳ್ಳಲು ಅನುಕೂಲವಾಗುವಂತೆ ಉದ್ದವಾದ ದಾರವನ್ನು ಹೊಂದಿರುವ ಕಲ್ಚಿಯು ಬಹು ಉಪಯೋಗಿ ಚೀಲವಾಗಿದೆ. ಇದರಿಂದ ಅನೇಕ ಉಪಯೋಗಗಳಿದ್ದು, ಸಾಮಾನ್ಯವಾಗಿ ಹೊಲಕ್ಕೆ ಹೋಗುವಾಗ ರೊಟ್ಟಿ ಇಟ್ಟುಕೊಂಡು ಹೋಗಲು ಬಳಸುತ್ತಾರೆ.

ಇದಲ್ಲದೆ, ಮದುವೆಯ ಸಂದರ್ಭದಲ್ಲಿ ವರನ ಮದುವೆ ಬಟ್ಟೆಗಳು, ಸಾಮಗ್ರಿಗಳು ಮತ್ತಿತರ ವಸ್ತುಗಳನ್ನು ಇಡುತ್ತಾರೆ. ಮದುವೆ ಉಡುಪಿಗಾಗಿ ಬಳಸುವ ಕಲ್ಚಿಯು ದೊಡ್ಡ ಗಾತ್ರದ್ದಾಗಿರುತ್ತದೆ. ಒಂದೇ ಅಳತೆಯ ಎರಡು ಬಟ್ಟೆಗಳಿಂದ ಹೊಲಿಯಲಾಗುವ ಕಲ್ಚಿಯ ಮೇಲೆ ಸಮಾನ ಅಂತರದಲ್ಲಿ ಸಮಾನ ಗಾತ್ರದ ಚುಕ್ಕಿಗಳನ್ನು ಹೊಲಿಯಲಾಗುವ ಕಸೂತಿಯನ್ನು 'ಡೋರನಾಕಿ' ಎನ್ನುತ್ತಾರೆ. ಅತಿ ಹೆಚ್ಚು ಹೊಲಿಗೆಗಳಿರುವ ಮತ್ತು ಅತಿ ಹೆಚ್ಚು ಕಸೂತಿ ಮಾಡಲಾಗಿರುವ ಕಲ್ಚಿಯ ಹೊಲಿಗೆ ಪ್ರಕಾರಕ್ಕೆ 'ಜಾಲಿಗದ್ದಾರ್' ಎನ್ನಲಾಗುತ್ತದೆ. ಕಲ್ಚಿಯ ಮೇಲೆ ಚಿಪ್ಪುಗಳನ್ನು ಹೆಚ್ಚಾಗಿ ಹೊಲಿಯುತ್ತಾರೆ.

**ಟೋಪೆ**

ಚೌಕಾಕಾರದ ಬಟ್ಟೆಯ ನಾಲ್ಕು ಮೂಲೆಗಳಿಗೆ ಪಟ್ಟಿ ಹೊಲೆದು ಒಂದು ದೊಡ್ಡ ಗಾತ್ರದ ಚೀಲವನ್ನು ಮಾಡಲಾಗುವ ಟೋಪೆಯನ್ನು ವರನು ವಧುವಿನ ಮನೆಗೆ ಹೋಗುವಾಗ ಕೊಂಡೊಯ್ಯುತ್ತಾನೆ. ಇದರಲ್ಲಿ 'ಬಲಿಯ' ಎಂದು ಕರೆಯಲಾಗುವ ೫ ಬಳೆಗಳನ್ನು ವಧುವಿಗೆ ಕೊಡುವುದು ಮದುವೆ ಸಂಪ್ರದಾಯವಾಗಿದೆ. 'ಬಲಿಯ'ವನ್ನು ವಧು ತನ್ನ ಮೊಣಕೈ ಮತ್ತು ಮೇಲ್ತೋಳಿಗೆ ತೊಡಿಸಿಕೊಳ್ಳುತ್ತಾಳೆ. ಮದುವೆಯಾಗದಿರುವ ಹುಡುಗಿಯರು ಮತ್ತು ವಿಧವೆಯರು ಮೇಲ್ತೋಳಿನ ಮೇಲೆ ಬಲಿಯವನ್ನು ತೊಡುವುದಿಲ್ಲ.

**ತೋಪರ್‌ಗಾಲೇರ್ ಪೊಟ್ಲ**

ವಧುವು ಹಸೆಮಣೆ ಏರುವಾಗ ತೆಂಗಿನಕಾಯಿ ಮತ್ತು ಮುಹೂರ್ತಕ್ಕೆ ಬೇಕಾದ ಅವಶ್ಯಕ ಪುಜಾ ಸಾಮಗ್ರಿಗಳನ್ನು ತರಲು ಹೊಲಿಯಲಾಗುವ ವಿಶೇಷ ಚೀಲ. ಗಾತ್ರದಲ್ಲಿ

ಚಿಕ್ಕದಾಗಿದ್ದು ಇದರ ತಳವು ಚೌಕಾಕಾರವಾಗಿರುತ್ತದೆ ಮತ್ತು ಇದರ ಹಿಡಿ ಚಿಕ್ಕದಾಗಿದೆ. ಕಲ್ಚಿ ಮಾದರಿಯಲ್ಲಿ ಇದರ ಮೇಲೆ ಕಸೂತಿ ಮಾಡಲಾಗಿರುತ್ತದೆ.

**ಸರಾಪೇರ್ ಕೋತ್ಲಿ**

ವರನು ಬಳಸುವ ಈ ಚೀಲದಲ್ಲಿ ವಧುವಿನ ಊರಿನ ಹಿರಿಯ ಮತ್ತು ಪ್ರಮುಖ ವ್ಯಕ್ತಿಗೆ ಕೊಡಲಾಗುವ ಹೊಗೆಸೊಪ್ಪು ಮತ್ತು ವೀಳ್ಯ ತರುತ್ತಾನೆ. ಇದು ವರನು ವಧುವಿನ ಊರಿನ ಹಿರಿಯರಿಗೆ ಕೊಡುವ ಮದುವೆ ಉಡುಗೊರೆಯಾಗಿದೆ. ಈ ಚೀಲದಲ್ಲಿ ಎಲೆ, ಅಡಿಕೆ, ಸುಣ್ಣ, ಬೀಡಿ, ತಂಬಾಕಿನ ಪರಿಕರಗಳು ಇರುತ್ತವೆ. ಮದುಮಗ ಊರಿನ ಹಿರಿಯ ವ್ಯಕ್ತಿಗಳಿಗೆ ಇವುಗಳನ್ನು ನೀಡಿ ಕಾಲಿಗೆ ನಮಸ್ಕರಿಸುವ ಮಹತ್ವದ ಪದ್ಧತಿಯು ಇವರಲ್ಲಿದೆ.

**ದಾಂತ್ನಿ**

ಆಯತಾಕಾರದ ವಿನ್ಯಾಸದಲ್ಲಿರುವ ಈ ಚಿಕ್ಕ ಚೀಲವನ್ನು ಹಲ್ಲುಜ್ಜಲು ಬೇಕಾಗುವ ಬೇವಿನ ಕಡ್ಡಿಗಳನ್ನು ಇಡಲು ಬಳಸುತ್ತಾರೆ. ದಾಂತ್ನಿಯು ವಧುವು ವರನ ಮನೆಗೆ ತರುವ ಸಾಮಗ್ರಿಯಾಗಿದೆ. ವಧುವು ವರನ ಮನೆಗೆ ಬಂದ ಮೊದಲ ಬೆಳಗ್ಗೆ ವರನನ್ನು ಸ್ನಾನದ ಪಾತ್ರೆಯ ಮುಂದೆ ಕೂರಿಸಿ ಮನೆಯ ಯಜಮಾನನಿಂದ ಮೊದಲ್ಗೊಂಡು ಇತರೆ ಹಿರಿಯರಿಗೆ ಕೊಡುತ್ತಾಳೆ.

**ಲಂಬಾಣಿ ಕಸೂತಿಯ ಮೂಲ**

ಲಂಬಾಣಿ ಕಸೂತಿಯು ಪುರಾತನ ಕಾಲದಿಂದಲೂ ಈ ಸಮುದಾಯದ ಮಹಿಳೆಯರ ಕಸುಬಾಗಿದೆ. ಅಲೆಮಾರಿ ಸಮುದಾಯವು ತಮ್ಮ ಸೌಂದರ್ಯಪ್ರಜ್ಞೆಯನ್ನು ಹಾಡುಗಳಲ್ಲಿ, ಉಡುಪುಗಳಲ್ಲಿ, ನೃತ್ಯಗಳಲ್ಲಿ ವ್ಯಕ್ತಪಡಿಸಿದೆ. ಅವರ ಸೌಂದರ್ಯಪ್ರಜ್ಞೆಯು ಅವರ ಉಡುಪುಗಳಲ್ಲಿ, ಸಾರಿಗೆ ವಿಧಾನಗಳಲ್ಲಿ ಮತ್ತು ಬಳಸುವ ಸಾಮಗ್ರಿಗಳಲ್ಲಿ ವಿಶದವಾಗಿದೆ. ಸೂಜಿ ಮತ್ತು ದಾರ ಕೇವಲ ಬಟ್ಟೆ ಹೊಲಿಯಲು ಉಪಯೋಗಿಸುತ್ತಲೇ, ಅವುಗಳ ಬಳಕೆ ತಮ್ಮ ಆಚಾರ ಮತ್ತು ಸಂಪ್ರದಾಯಗಳಲ್ಲಿ ಒಂದಾಗಿಸಿಕೊಂಡಿದ್ದಾರೆ. ಸಿಂಗರಿಸಿದ ಮತ್ತು ಕಸೂತಿ ಮಾಡಿದ ಸಾಮಗ್ರಿಗಳು ಸಹ ಲಂಬಾಣಿ ಜನಾಂಗದವರ ಜೀವನದಲ್ಲಿ ಪ್ರಮುಖ ಪಾತ್ರ ವಹಿಸಿವೆ. ಹೀಗಾಗಿ ಲಂಬಾಣಿ ಜನಾಂಗವು ಅವರು ಧರಿಸುವ ಬಣ್ಣದ ಉಡುಪುಗಳಿಂದ, ವಿಶಿಷ್ಟ ಆಭರಣಗಳಿಂದ, ಬಳೆಗಳಿಂದ ಭಾರತದಲ್ಲಿ ಮಹತ್ವದ ಬುಡಕಟ್ಟಾಗಿ ಪ್ರಸಿದ್ಧರಾಗಿದ್ದಾರೆ.

ಲಂಬಾಣಿ ಕಸೂತಿಯಲ್ಲಿ ಬಳಸಲಾಗುವ ಗಾಜಿನ ಚೂರುಗಳು, ಚಿಪ್ಪುಗಳು, ಮಣಿಗಳು, ಅಲ್ಯೂಮಿನಿಯಮ್ ಲೋಹ ಮತ್ತಿತರ ಪರಿಕರಗಳನ್ನು ಅವರೇ ತಯಾರಿಸುತ್ತಾರೆ.

ಕರ್ನಾಟಕದಲ್ಲಿರುವ ಬಹುತೇಕ ಲಂಬಾಣಿ ಜನಾಂಗದವರು ವಾಸಿಸುವ ಪ್ರದೇಶಗಳನ್ನು 'ತಾಂಡಾ' ಎಂದು ಕರೆಯುತ್ತಾರೆ. ತಾಂಡಾಗಳು ಸಾಮಾನ್ಯವಾಗಿ ಊರಿನ ಹೊರಗಿದ್ದು ಸಾಮಾಜಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳಿಂದ ದೂರವೇ ಉಳಿದಿರುತ್ತವೆ. ಸಂಡೂರಿನಲ್ಲಿರುವ ಲಂಬಾಣಿ ಮಹಿಳೆಯರು ಮಾಡಿದ ಕಸೂತಿ ಉತ್ಪಾದನೆಗಳನ್ನು ಕುಶಲ ಕಲಾಕೇಂದ್ರವು ಮಾರಾಟ ಮಾಡುವ ಮತ್ತು ರಾಜ್ಯದ ಬೇರೆ ಊರುಗಳಿಗೆ ಸಾಗಿಸುವ ಕೆಲಸ ಮಾಡುತ್ತಿದ್ದು ಆರ್ಥಿಕವಾಗಿ ಮಹಿಳೆಯರಿಗೆ ಸಹಾಯ ಮಾಡುತ್ತಿದೆ. ಕರಕುಶಲ ಕರ್ಮಿಗಳಿಗೆ, ಮಹಿಳೆಯರಿಗೆ ಮತ್ತು ಲಂಬಾಣಿ ಬುಡಕಟ್ಟಿನ ಕಲೆಯನ್ನು ಪ್ರೋತ್ಸಾಹಿಸುವ ಕೆಲಸ ಮಾಡುತ್ತಿದೆ. ಬಹುತೇಕ ಮಹಿಳೆಯರಿಗೆ ಜೀವನ ನಿರ್ವಹಣೆಗೆ ಪೂರಕವಾಗಿ ಸಹಾಯ ಮಾಡುತ್ತಿದೆ.

**ಕಸೂತಿ ಉತ್ಪನ್ನಗಳ ಮಾರುಕಟ್ಟೆ**

ಈ ಉತ್ಪನ್ನಗಳನ್ನು ದಸ್ತಕಾರ್, ನವದೆಹಲಿಯ 'ಕರಕುಶಲ ಅಭಿವೃದ್ಧಿ ಆಯುಕ್ತರ ಇಲಾಖೆ' ಆಯೋಜಿಸುವ ಪ್ರದರ್ಶನ ಮಳಿಗೆಗಳು ಅಥವಾ ಮೇಳಗಳಲ್ಲಿ ಮಾರಾಟ ಮಾಡಲಾಗುತ್ತದೆ. ಅಲ್ಲದೇ 'ರಫ್ತು ಉತ್ತೇಜನ ಮಂಡಳಿ' ಆಯೋಜಿಸುವ ಅಂತಾರಾಷ್ಟ್ರೀಯ ಪ್ರದರ್ಶನಗಳಲ್ಲೂ ಮಾರಾಟ ಮಾಡಲಾಗುತ್ತದೆ. ೧೯೯೬-೨೦೦೦ರಲ್ಲಿ ದೆಹಲಿಯ ಪ್ರಗತಿ ಮೈದಾನದಲ್ಲಿ ನಡೆದ ಮೇಳಗಳಲ್ಲಿ ಈ ಸಂಸ್ಥೆಗಳು ಭಾಗವಹಿಸಿ ಮಾರಾಟ ಮಾಡಿದವು.

ಬೆಂಗಳೂರು, ಮುಂಬೈ, ಕಲ್ಕತ್ತಾ, ಚೆನ್ನೈ ಮುಂತಾದ ಕಡೆ ಇರುವ ವಿಶೇಷ ಮಳಿಗೆಗಳು, ಬಾಟಿಕ್ ಶಾಪ್‌ಗಳಲ್ಲಿ ಈ ಉತ್ಪನ್ನಗಳು ನಿರಂತರವಾಗಿ ಮಾರಲ್ಪಡುತ್ತವೆ. ಸಂಡೂರಿನ 'ಸಂಡೂರು ಕುಶಲಕಲಾ ಕೇಂದ್ರ'ವು ಈ ಉತ್ಪನ್ನಗಳನ್ನು ನ್ಯೂಜಿಲ್ಯಾಂಡ್, ಜಪಾನ್, ಇಂಗ್ಲೆಂಡ್, ಬೆಲ್ಜಿಯಂ, ಜರ್ಮನಿ, ಆಸ್ಟ್ರೇಲಿಯಾ, ಅಮೆರಿಕಾ, ಸ್ಪೇನ್ ಮುಂತಾದ ರಾಷ್ಟ್ರಗಳಿಗೆ ರಫ್ತು ಮಾಡುತ್ತಿದೆ.

ಸಂಡೂರಿನ ಕುಶಲಕಲಾ ಕೇಂದ್ರವು ಹಲವು ಪ್ರಥಮಗಳನ್ನು ಸಾಧಿಸಿದ್ದು, ರಾಷ್ಟ್ರೀಯ, ಅಂತರಾಷ್ಟ್ರೀಯ ಗುಣಮಟ್ಟ ಪ್ರಶಸ್ತಿಗಳನ್ನು ತನ್ನ ಮುಡಿಗೇರಿಸಿಕೊಂಡಿದೆ. ಅವುಗಳಲ್ಲಿ ಪ್ರಮುಖವಾದುದೆಂದರೆ "೨೦೦೪ರ ಯುನೆಸ್ಕೋ ಉನ್ನತ ಗುಣಮಟ್ಟದ ಮುದ್ರೆ" ಪಡೆದಿರುವುದು, ಈ ಕೇಂದ್ರ ಉತ್ಪಾದಿಸುವ ಕುಶನ್ ಕವರ್‌ಗಳು, ಹೊದಿಕೆಗಳು ಇನ್ನಿತರ ಗೃಹಾಲಂಕಾರ ಸಾಮಗ್ರಿಗಳಿಗಾಗಿ ದಕ್ಷಿಣ ಏಷ್ಯಾದ ಸಂಸ್ಥೆಗಳಿಗೆ ನೀಡುವ ಮಾನ್ಯತೆಯನ್ನು ಈ ಕೇಂದ್ರ ೨೦೦೪ರಲ್ಲೇ ಪಡೆದುಕೊಂಡಿದೆ. ಅಲ್ಲದೇ ಕೇಂದ್ರದ ಕಲಾವಿದ ಶಾಂತಾ ಬಾಯಿಗೆ '೨೦೦೧ರ ನ್ಯಾಷನಲ್ ಮಾಸ್ಟರ್ ಕ್ರಾಫ್ಟ್ ಪರ್ಸನ್' ಪ್ರಶಸ್ತಿ, ೨೦೦೪ರ



## ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು

### ಸಂಡೂರು ಕುಶಲ ಕಲಾ ಕೇಂದ್ರವು ಪಡೆದ ಪ್ರಶಸ್ತಿ ಪತ್ರಗಳು

SANTA FE INTERNATIONAL

# FOLK ART MARKET

**IN APPRECIATION OF**

*Sandur Kushala Kala Kendra*

**OFFICIAL PARTICIPANT OF THE**
**2008 SANTA FE INTERNATIONAL FOLK ART MARKET**

| | | | |
|---|---|---|---|
| Charlene Cerny<br>Executive Director<br>**Santa Fe International Folk Art Market** | Tom Aageson<br>Director<br>**Museum of New Mexico Foundation** | Stuart Ashman<br>Cabinet Secretary<br>**New Mexico Department of Cultural Affairs** | Joyce Ice<br>Director<br>**Museum of International Folk Art** |







UNESCO - CCI 2004

## Seal of Excellence for

### Handicrafts Products in South Asia






Awarded to

Product : *Hand Embroidered Cotton Set*

Producer : *Sandur Kushalakala Kendra*

Country : *India*

The SEAL is awarded in recognition of demonstrated excellence and standard setting high quality in craftsmanship, creative and successful alliance of traditional skills and innovative application of indigenous material, traditional technique and endogenous design, expression of culture identity and traditional aesthetic value, and respect of the environment.

| | | | |
|---|---|---|---|
| Mr Indrasen Vencatachellum,<br>Chief of the Section of Arts<br>Paris | Mrs Tinoo Joshi<br>Development Commissioner<br>(Handicrafts) | Mrs Vijaya Rajan<br>President<br>WCC, Asia Pacific Region | Mr Ashoke Chatterjee<br>President<br>Crafts Council of India |



ಸಂಡೂರು ಕಲಾಕೇಂದ್ರದ ಕಸೂತಿ ಕಲೆ













ವಿವಿಧ ವಿನ್ಯಾಸದ ಬ್ಯಾಗ್‌ಗಳು



## ಸಂಡೂರು ಕುಶಲಕಲಾ ಕೇಂದ್ರದ ವಸ್ತುವೈವಿಧ್ಯಗಳು











ವಿವಿಧ ವಿನ್ಯಾಸದ ಝೋಲಣಾ (ಚೀಲ)



## ಸಂಡೂರು ಕುಶಲಕಲಾ ಕೇಂದ್ರದ ವಸ್ತುವೈವಿಧ್ಯಗಳು





ವಾಲ್ ಹ್ಯಾಂಗಿಂಗ್



ವಿವಿಧ ವಿನ್ಯಾಸದ ಬೇಲ್ಟ್‌ಗಳು



ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು

## ಸಂಡೂರು ಕಲಾಕೇಂದ್ರದ ಕಸೂತಿ ಕಲ



ಪರ್ಸ್



ಬ್ಯಾಗ್



ಮೋಬೈಲ್ ಕವಚ





ಪೆನ್ನ ಕವಚ



ಬ್ಯಾಗ್



ಸಂಡೂರು ಕುಶಲಕಲಾ ಕೇಂದ್ರದ ವಸ್ತುವೈವಿಧ್ಯಗಳು







ವಿವಿಧ ವಿನ್ಯಾಸದ ಹೆಣ್ಣು ಮಕ್ಕಳ ಕೈಚೀಲಗಳು



ಸಂಡೂರು ಕುಶಲಕಲಾ ಕೇಂದ್ರದ ವಸ್ತುವೈವಿಧ್ಯಗಳು









ವಿವಿಧ ವಿನ್ಯಾಸದ ಬ್ಯಾಗ್‌ಗಳು

ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು



ಸಂಡೂರು ಕುಶಲಕಲಾ ಕೇಂದ್ರದ ವಸ್ತುವೈವಿಧ್ಯಗಳು







ವಿವಿಧ ವಿನ್ಯಾಸದ ತಲೆದಿಂಬಿನ ಕವಚಗಳು



ಸಂಡೂರು ಕುಶಲಕಲಾ ಕೇಂದ್ರದ ವಸ್ತುವೈವಿಧ್ಯಗಳು













ವಿವಿಧ ವಿನ್ಯಾಸದ ವಾಲ್ ಹ್ಯಾಂಗಿಂಗ್‌ಗಳು



## ಸಂಡೂರು ಕುಶಲಕಲಾ ಕೇಂದ್ರದ ವಸ್ತುವೈವಿಧ್ಯಗಳು









ವಿವಿಧ ವಿನ್ಯಾಸದ ಲಂಗಗಳು (ಪೇಟಿಯಾ)



ಸಂಡೂರು ಕುಶಲಕಲಾ ಕೇಂದ್ರದ ವಸ್ತುವೈವಿಧ್ಯಗಳು







ಲಂಬಾಣಿ ವೇಷ ಭೂಷಣದಲ್ಲಿರುವ ಮಕ್ಕಳು

ವಿಶ್ವಕರ್ಮ ಪ್ರಶಸ್ತಿ, 'ನ್ಯಾಷನಲ್ ಎಕ್ಸಲೆನ್ಸ್ ಅವಾರ್ಡ್' ಪಡೆದಿರುವುದಲ್ಲದೇ ಇವರೆಲ್ಲರ ನೆರವಿನಿಂದ "ಕ್ರಾಫ್ಟ್ ಮಾರ್ಕ್" ಮನ್ನಣೆಯನ್ನು ಪಡೆದಿದೆ.

ಸಂಡೂರು ಲಂಬಾಣಿ ಕಸೂತಿಯ ಪ್ರತಿ ಹೊಲಿಗೆಯು ದೇಶಿಕಲೆಯ ಕಥೆಯನ್ನು ಸಾರುತ್ತದೆ. ಉದ್ದ ಹೊಲಿಗೆ, ಚಿಕ್ಕ ಹೊಲಿಗೆ, ಸರಪಳಿ ಹೊಲಿಗೆಯನ್ನು ಒಳಗೊಂಡ ವಿವಿಧ ವಿನ್ಯಾಸಗಳು, ಜ್ಯಾಮಿತಿಯ ವಿವಿಧ ರೂಪಗಳು ಕಸೂತಿಯಲ್ಲಿ ಕಾಣಸಿಗುತ್ತವೆ. ಕಸೂತಿಯಲ್ಲಿ ಬಳಸಲಾಗುವ ಕನ್ನಡಿ ಚೂರುಗಳು, ಮಣಿಗಳು, ಚಿಪ್ಪುಗಳು, ದಟ್ಟಬಣ್ಣದ ಬಟ್ಟೆಗಳು ಲಂಬಾಣಿಯರ ಸ್ವಭಾವ, ಅವರ ಜೀವನ ಶೈಲಿ, ಸೌಂದರ್ಯಪ್ರಜ್ಞೆಯನ್ನು ಬಿಂಬಿಸುತ್ತವೆ. ಕಸೂತಿಯು ಲಂಬಾಣಿ ಜನಾಂಗದ ವ್ಯಕ್ತಿತ್ವದ ಬಿಂಬವಾಗಿದೆ. ತಮಗಾಗಿ, ತಮ್ಮ ಬಂಧುಗಳಿಗಾಗಿ ಬಣ್ಣದ ಬಟ್ಟೆಗಳನ್ನು ಹೊಲಿದು ಅವುಗಳನ್ನು ಸಂಭ್ರಮದಿಂದ ತೊಡುವವರ ಜೀವನ, ಕಸೂತಿ ಮಾಡಿದ ವಸ್ತ್ರಗಳು ಕನ್ನಡಿಯಂತೆ ಹೊಳೆಯಲಿ ಎನ್ನುವ ಅವ್ಯಕ್ತ ಹಾರೈಕೆಯಿದೆ. ಅವರ ಸಂಸ್ಕೃತಿ, ಧಾರ್ಮಿಕ ಮತ್ತು ಬದುಕಿನ ಭರವಸೆಗಳನ್ನು ಕಸೂತಿಯಲ್ಲಿ ಹೆಣೆದು ತೃಪ್ತರಾಗುವ ಲಂಬಾಣಿಯರು ಕಸೂತಿಯನ್ನು ಜೀವನದ ಅವಿಭಾಜ್ಯ ಅಂಗವೆಂದು ಪರಿಗಣಿಸುತ್ತಾರೆ.

**ಉತ್ಪಾದನಾ ವಿಧಾನ**

ಸಂಡೂರು ಲಂಬಾಣಿ ಕಸೂತಿಯು ಕೈಮಗ್ಗದ ಬಟ್ಟೆಯ ಮೇಲೆ ಮಾಡುವ ಕಸೂತಿಯಾಗಿದೆ. ಗಾಜಿನ ಚೂರು, ಚಿಪ್ಪು, ಮಣಿಗಳು, ಕವಡೆ ಮತ್ತಿತರ ವಸ್ತುಗಳು ಲಂಬಾಣಿ ಸಂಪ್ರದಾಯದ ಕಸೂತಿಯ ಪ್ರಮುಖ ಸಾಮಗ್ರಿಗಳಾಗಿವೆ.

**ಮೇಲ್ವಿಚಾರಕರು**

ಕೇಂದ್ರದಲ್ಲಿ ಕಸೂತಿ ಕಲೆಯನ್ನು ನೋಡಲಿಕ್ಕೆ ಬಸಂತಿ, ಶಾರದ ಮುಂತಾದವರು ಮೇಲ್ವಿಚಾರಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಮೊದಲು ಆರ್ಡರನ್ನು ಸ್ವೀಕರಿಸಿ ಕಟಿಂಗ್ ಕೊಡುವರು, ಆಗ ಯಾವ ಬಣ್ಣ, ಡಿಸೈನ್ ಕಲರ್ ಕಾಂಬಿನೇಶನ್ ಮುಂತಾದವನ್ನು ಮೇಲ್ವಿಚಾರಕರಿಗೆ ಹೇಳುವರು. ಆಗ ಇವರು ಆರ್ಡರ್‌ಗಳು ಹೇಳಿದಂತೆ ಎಫ್‌ಡಿ, ಎಫ್.ಒ, ಐಡಿ, ಜಿ. ಈ ರೀತಿಯ ಕೋಡನ್ನು ಬರೆಸುವರು. ಅದೇ ರೀತಿ ಇವರು ಗುರುತು ಮಾಡಿ ಕುಷನ್‌ಕವರ್, ಬ್ಯಾಗು, ಮೊಬೈಲ್ ಕೇಸ್, ಜ್ಯುವೆಲ್ಲರೀಸ್ ಮುಂತಾದವನ್ನು ಪುಸ್ತಕದಲ್ಲಿ ಬರೆಸುವರು. ಆಮೇಲೆ ಮಾದರಿ ಕೊಟ್ಟಿರುವರು. ಅದೇ ರೀತಿ ಗುರುತು ಮಾಡಿ ತಾಂಡಾದ ಮೇಲ್ವಿಚಾರಕರಾದ ಬಸಂತಿ, ಶಾರದ ಅವರು ಪ್ರತಿಯೊಂದು ತಾಂಡಾಕ್ಕೆ ಹೋಗಿ ಕೆಲಸ ಕೊಡುವರು. ಅಲ್ಲಿ ತಾಂಡಾದ ಮೇಲ್ವಿಚಾರಕರು ವಾರಕ್ಕೆ ಒಂದು ಸಾರಿ ಬಂದು, ಕೊಟ್ಟ ಕೆಲಸವನ್ನು ಕೇಂದ್ರಕ್ಕೆ ಒಪ್ಪಿಸುವರು. ಆಗ ನಾವು ಅವರಿಗೆ ಮಾದರಿ ನೀಡಿ, ಕೆಲಸ ಯಾವ ತರಹ ಬರಬೇಕು, ಯಾವ ದಿನಾಂಕದಂದು ಕೇಂದ್ರಕ್ಕೆ

ಬರಬೇಕು ಯಾವುದು ಮೊದಲು, ಯಾವುದು ಕೊನೆ ಎಲ್ಲವನ್ನು ಮೇಲ್ವಿಚಾರಕರು ಅವರೇ ಹೇಳಿ ಕಳುಹಿಸುತ್ತಾರೆ. ಅವರು ಕಸೂತಿ ಕೆಲಸ ಮಾಡುವ ಮಹಿಳೆಯರಲ್ಲಿ ಹೋಗಿ ಸರಿಯಾದ ಮಾಹಿತಿ ನೀಡಿ ವ್ಯವಸ್ಥಿತವಾಗಿ ಕೆಲಸ ಮಾಡಿಸುವರು.

ಹೀಗಾಗಿ ಈ ದಿನಾಂಕದಂದು ಅಂತಹ ಕೆಲಸ ಆಗಬೇಕೆಂದು ಕೇಂದ್ರದಿಂದ ಹೇಳಿ ಕಳುಹಿಸುವರು. ಅವರು ವಾರಕ್ಕೆ ಒಂದು ಬಾರಿ ಬಂದು ಕೇಂದ್ರಕ್ಕೆ ವರದಿ ಒಪ್ಪಿಸುವರು. ಅವರು ಮಾಡಿದ ಕೆಲಸದ ಗುಣಮಟ್ಟವನ್ನು ಶಾಂತಿಬಾಯಿ ಪರಿಶೀಲಿಸುವರು. ಅವರು ಪರಿಶೀಲಿಸಿದ ನಂತರ ಮೇಲ್ವಿಚಾರಕರ ಹತ್ತಿರ ಬರುತ್ತದೆ. ಕಸೂತಿ ಕಲಾಕಾರರ ಒಬ್ಬೊಬ್ಬರ ಹೆಸರಿಗೆ ಪಾಸ್‌ಬುಕ್ ಇರುತ್ತವೆ. ಆ ಬುಕ್‌ನಲ್ಲಿ ಒಂದೊಂದು ಕೋಡ್‌ಗೂ ಒಂದೊಂದು ಬೆಲೆ ಇರುತ್ತವೆ. ಪಿ.ಆರ್. ಮೊಬೈಲ್ ಕೇಸ್, ಕುಷನ್‌ಕವರ್ ಮುಂತಾದವುಗಳಿಗೆ ಬೇರೆ ಬೇರೆ ಬೆಲೆಗಳಿರುತ್ತವೆ. ಕೆಲವು ವೇಳೆ ಗುಣಮಟ್ಟ ಸರಿಯಾಗಿಲ್ಲದ್ದನ್ನು ಮರಳಿ ಕಳುಹಿಸುವರು. ಸರಿಯಾಗಿ ಕೆಲಸ ಆದವುಗಳನ್ನು ಮಾತ್ರ ಮೇಲ್ವಿಚಾರಕರ ಹತ್ತಿರ ಕಳುಹಿಸಲಾಗುವುದು. ಪ್ರತಿಯೊಂದು ತಾಂಡದವರ ಹೆಸರಿನಲ್ಲಿ ಒಂದೊಂದು ದಾಖಲೆ ಪುಸ್ತಕ ಇರುತ್ತದೆ. ಅದರಲ್ಲಿ ಅವರು ಪಡೆದ ಹಣದ ವಿವರವನ್ನು ಬರೆದಿರುವರು.

ಸರಿಯಾಗಿ ಮಾಡಿದ ಕೆಲಸಕ್ಕೆ ಪೂರ್ಣ ಬೆಲೆ ಕೊಡುವರು. ಒಂದು ವೇಳೆ ಅಪೂರ್ಣ, ತಿರಸ್ಕಾರ ಆದವುಗಳಿಗೆ ಅರ್ಧ ಪ್ರಮಾಣದ ಬೆಲೆಯನ್ನು ನಿಗದಿಪಡಿಸುವರು. ಕೆಲಸದ ಗುಣಮಟ್ಟದ ಮೇಲೆ ಕೆಲಸಗಾರರಿಗೆ ಹಣ ನಿಗದಿಪಡಿಸುವರು. ಒಬ್ಬೊಬ್ಬರಿಗೆ ನಾಲ್ಕು ಅಥವಾ ಐದು ತಾಂಡಾಗಳ ಜವಾಬ್ದಾರಿಯನ್ನು ಹಿರಿಯ ಮೇಲ್ವಿಚಾರಕರಿಗೆ ನೀಡುವರು. ಹೀಗೆ ವಾರ ವಾರ ವ್ಯವಹಾರ ನಡೆದು ತಿಂಗಳ ೨೫ನೇ ತಾರೀಕು ಬಿಲ್ ಪಾವತಿ ಮಾಡುವರು. ರಿಜಿಸ್ಟರ್ ಬಿಲ್ ಮಾಡಿದ ಮೇಲೆ ಹತ್ತನೇ ತಾರೀಕಿಗೆ ಸಂಬಳ ಪಡೆಯುವರು. ರೇಷನ್ ಕಾರ್ಡ್ ನೋಂದಣಿ ಮಾಡಿ, ಅವರಿಗೆ ಆಹಾರ ಸಾಮಗ್ರಿಗಳನ್ನು ನೀಡುವರು. ಕಸೂತಿ ಕಲೆಗಾರರ ಸಂಬಳದಲ್ಲಿ ೧೧೫ ರೂಪಾಯಿಗಳನ್ನು ಕಡಿತಗೊಳಿಸಿ ರಿಯಾಯಿತಿಯ ದರದಲ್ಲಿ ಎರಡು ಸಾವಿರ ರೂಪಾಯಿ ರೇಷನ್ ಕೊಡಲಾಗುತ್ತದೆ. ಆರುನೂರು ರೂಪಾಯಿ ಕಸೂತಿ ಕೆಸಲ ಮಾಡಿದರೆ ಅವರಿಗೆ ಪೂರ್ಣ ಪ್ರಮಾಣದ ಆಹಾರ ಸಾಮಗ್ರಿ ವಿತರಿಸುವರು. ಐದು ನೂರು ರೂಪಾಯಿ ದುಡಿದರೆ ಅರ್ಧ ಪ್ರಮಾಣದ ರೇಷನ್ ನೀಡುವರು.

ಈ ಕೇಂದ್ರದಲ್ಲಿ ಕುಷನ್ ಕವರ್, ಬ್ಯಾಗ್ಸ್, ಮೊಬೈಲ್ ಕೇಸ್, ಬೆಲ್‌ಕವರ್, ಕುಡ್ತಾ, ಸೀರೆ ಇವುಗಳೆಲ್ಲವೂ ಜಪಾನ್, ನೆದರ್‌ಲ್ಯಾಂಡ್‌ಗಳಿಗೆ ರಫ್ತು ಮಾಡುವರು. ಈ ಕಲೆಯ ಕುರಿತು ಕಲಾಪ್ರದರ್ಶನಗಳಿರುತ್ತವೆ. ತಿಂಗಳಿಗೆ ಎರಡರಿಂದ ಮೂರು ಲಕ್ಷ ರೂಪಾಯಿ ವಸ್ತುಗಳು ಉತ್ಪಾದನೆ ಆಗುತ್ತಿವೆ. ಫ್ಯಾಬ್ ಇಂಡಿಯಾ, ನೆದರ್‌ಲ್ಯಾಂಡ್, ಜಪಾನ್,

ದೆಹಲಿ, ಬಾಂಬೆ ಮುಂತಾದ ಕಡೆ ರಫ್ತು ಮಾಡುವರು. ಯಾವ ಭಾಗದಲ್ಲಿ ಯಾವ ಪರಿಕರಕ್ಕೆ ಹೆಚ್ಚು ಮಾರುಕಟ್ಟೆ ಸಿಗುತ್ತದೆಯೋ ಅದನ್ನು ಹೆಚ್ಚು ತಯಾರಿಸುವರು. ಇಲ್ಲಿ ಉತ್ಪಾದನೆಯಾಗುವ ಪರಿಕರಗಳಿಗೆ ಹೊರಗಡೆ ತುಂಬಾ ಬೇಡಿಕೆಯಿದೆ.

ಇಲ್ಲಿ ಕಸೂತಿ ಕೆಲಸ ಮಾಡಲು ಕುಶಲ ಕಲಾವಿದರು ಸಾಕಾಗುತ್ತಿಲ್ಲ. ಏಕೆಂದರೆ ಹೊರಗಡೆ ದಿನಕ್ಕೆ ನೂರು ರೂಪಾಯಿಯಿಂದ ಎರಡು ನೂರು ರೂಪಾಯಿಗಳವರೆಗೆ ಕೂಲಿ ಸಿಗುವುದರಿಂದ ಕೇಂದ್ರಕ್ಕೆ ಹೆಚ್ಚು ಕಲಾವಿದರು ಬರುವುದಿಲ್ಲ. ಹೀಗಾಗಿ ತುರ್ತು ವೇಳೆಗೆ ಕೆಲವೊಂದು ಆರ್ಡರ್‌ಗಳು ಬಂದರೆ ಹೇಳಿದ ತಕ್ಷಣ ಕೆಲಸ ಮಾಡಿ ಮುಗಿಸುವರು. ಜಪಾನ್ ದೇಶದಿಂದ ವರ್ಷಕ್ಕೆ ಮೂರು ಸಲ ಆರ್ಡರ್ ಬರುತ್ತದೆ. ಫಿಯಾರ್ಟು, ಮೊಬೈಲ್ ಕೇಸ್, ಬುಕ್‌ಕವರ್, ಹೇರ್‌ಬ್ಯಾಂಡ್, ಶಲ್ಜಿ, ಜಪಾನ್‌ನವರು ಹೇಳಿದ ಹಾಗೆ ಸರಿಯಾದ ಮಾದರಿಯಲ್ಲಿ ಕೆಲಸ ಮಾಡಿಕೊಡಬೇಕು. ಸಣ್ಣಪುಟ್ಟ ಮಾದರಿಯ ಪರಿಕರಗಳ ಬಗೆಗೆ ಆರ್ಡರ್ ಜಪಾನ್ ದೇಶದಿಂದ ಬರುತ್ತವೆ.

ಫ್ಯಾಬ್ ಇಂಡಿಯಾ ಕಂಪನಿಯದು ಕುಡ್ತಾ ಆರ್ಡರ್ ಬರುತ್ತದೆ. ಅವರ ಕಡೆಯಿಂದಲೇ ಸ್ಟಿಚ್ ಆಗಿ ಬಂದಿರುತ್ತವೆ. ಇಲ್ಲಿ ಕಸೂತಿ ಮಾಡಿ ಕಳುಹಿಸುವರು. ಇಲ್ಲಿ ಸ್ಯಾಂಪಲ್ ಪೀಸ್‌ಗಳ ಆಧಾರದ ಮೇಲೆ ಆರ್ಡರ್ ಬರುತ್ತದೆ. ಪ್ರದರ್ಶನಕ್ಕೆ ಹೋದರೆ ಐದರಿಂದ ಆರು ಲಕ್ಷ ರೂಪಾಯಿಯ ವಸ್ತುಗಳನ್ನು ಒಯ್ಯುವರು. ಅಲ್ಲಿ ಹತ್ತು ದಿನಕ್ಕೆ ವ್ಯಾಪಾರಿ ಮಳಿಗೆಯ ಬೆಲೆ ಮೂವತ್ತರಿಂದ ಮೂವತ್ತೈದು ಸಾವಿರಗಳಿರುತ್ತವೆ. ಅಲ್ಲಿ ನಾಲ್ಕು ಲಕ್ಷ ವ್ಯಾಪಾರವಾಗುತ್ತವೆ. ಪ್ರದೇಶಗಳ ಆಧಾರದ ಮೇಲೆ ಪರಿಕರಗಳು ಮಾರಾಟವಾಗುತ್ತವೆ.

ಇಳಕಲ್ ಸೀರೆಗಳ ಮೇಲೆ ಡಿಸೈನ್ ಮಾಡಿ ಮಾರಾಟ ಮಾಡುವರು. ಇವುಗಳ ಬೇಡಿಕೆ ಮಾರುಕಟ್ಟೆಯಲ್ಲಿ ಅಧಿಕವಾಗಿದೆ. ಲಂಬಾಣಿ ಕಲೆ ಅವರಿಗೆ ರಕ್ತಗತವಾಗಿ ಬಂದಿರುವ ಕಲೆಯಾಗಿದೆ. ಹೀಗಾಗಿ ಈ ಕಲಾಮಾದರಿಯನ್ನು ಬೆಳೆಸಬೇಕು, ಇದರಿಂದ ಹಲವು ಜನರಿಗೆ ಉದ್ಯೋಗ ನೀಡಬೇಕು ಎಂಬ ಹಿನ್ನೆಲೆಯಲ್ಲಿ ಮಹಾಲಕ್ಷ್ಮೀ ಅವರು ಈ ಕೇಂದ್ರಕ್ಕೆ ಅಡಿಪಾಯ ಹಾಕಿದರು. ಬಟ್ಟೆಯನ್ನು ತಮಿಳುನಾಡಿನ ಈರೋಡ್‌ನಿಂದ ತರಿಸುವರು. ಅವಕ್ಕೆ ಬೇಕಾದ ಎಲ್ಲ ಬಣ್ಣಗಳನ್ನು ಇಲ್ಲಿಯೇ ತಯಾರಿಸುವರು.

**ಸಾಧನಗಳು ಮತ್ತು ಸಾಮಗ್ರಿಗಳು**

ಕಸೂತಿಗೆ ಪ್ರಮುಖವಾಗಿ ಕೈಮಗ್ಗದ ಬಟ್ಟೆ, ಸೂಜಿ, ದಾರ, ಕತ್ತರಿ ಇತ್ಯಾದಿ ಸಾಮಗ್ರಿಗಳು ಬೇಕಾಗುತ್ತವೆ. ಬ್ಲೀಚಿಂಗ್ ಮಾಡದೇ ಇರುವ ನೂಲನ್ನು ಬಣ್ಣದಲ್ಲಿ ಅದ್ದಿ ಕಸೂತಿಗೆ ಅನುಕೂಲವಾಗುವಂತೆ ತಯಾರು ಮಾಡಲಾಗುತ್ತದೆ. ನೂಲಿಗೆ ಬಣ್ಣ ಹಾಕುವ ಆಧುನಿಕ ಯಂತ್ರಗಳು ಸಂಡೂರಿನ ಕುಶಲಕಲಾ ಕೇಂದ್ರದಲ್ಲಿ ಸುಸಜ್ಜಿತವಾಗಿ ಅಳವಡಿಸಲಾಗಿದೆ.

ಹತ್ತಿ ಬಟ್ಟೆಯನ್ನು ಹದವಾಗಿ ಬಣ್ಣದಲ್ಲಿ ಅದ್ದುವ ಯಂತ್ರಗಳೂ ಸಹ ಕೇಂದ್ರದಲ್ಲಿವೆ. ಇಲ್ಲಿ ಪ್ರಸ್ತುತವಾಗಿ ಕೈಮಗ್ಗದ ಬಟ್ಟೆಯನ್ನು ಐದು ಬಣ್ಣಗಳಲ್ಲಿ ತಯಾರಾಗುವಂತೆ ಮಾಡುವ ಎಲ್ಲ ಸಾಧನಗಳಿವೆ. ರಾಸಾಯನಿಕ ಬಣ್ಣಗಳನ್ನು ಸಾಧ್ಯವಾದಷ್ಟು ಕಡಿಮೆ ಉಪಯೋಗಿಸಿ, ನೈಸರ್ಗಿಕವಾದ ಹಣ್ಣು ಮತ್ತು ತರಕಾರಿಗಳನ್ನು ಹೆಚ್ಚಾಗಿ ಉಪಯೋಗಿಸಿ ಕೇಂದ್ರವು ಈ ಕೆಳಕಂಡ ಬಣ್ಣಗಳಲ್ಲಿ ಬಟ್ಟೆಯನ್ನು ಕಸೂತಿಗಾಗಿ ತಯಾರು ಮಾಡುತ್ತದೆ.

೧. ಹಿಟ್ಟು, ಸಕ್ಕರೆ ಮತ್ತು ಬೆಣ್ಣೆಯಿಂದ ತಯಾರು ಮಾಡಿದ ನೀಲಿ ಬಣ್ಣದ ಕೇಕ್ ಬಳಸಿ ನೀಲಿ ಬಣ್ಣವನ್ನು ತಯಾರಿಸುವುದು.

೨. ದಾಳಿಂಬೆ ಹಣ್ಣಿನ ಸಿಪ್ಪೆಯಿಂದ ಹಳದಿ ಬಣ್ಣವನ್ನು ತಯಾರು ಮಾಡಲಾಗುತ್ತಿದೆ.

೩. ಕಂದು ಬಣ್ಣದ ಕೇಕ್ ಬಳಸಿ ನೂಲಿಗೆ ಹಳದಿ ಬಣ್ಣವನ್ನು ಒದಗಿಸಲಾಗುತ್ತದೆ.

೪. ಬಂಗಾರದ ಹಳದಿ ಬಣ್ಣವನ್ನು ಅಂತವೋ ಬೀಜವನ್ನು ಬಳಸಿ ತಯಾರು ಮಾಡಲಾಗುತ್ತದೆ.

೫. ದಾಳಿಂಬೆ ಮತ್ತು ಹಸಿರು ಎಲೆಗಳನ್ನು ಬಳಸಿ ಹಸಿರು ಬಣ್ಣವನ್ನು ಮಾಡಲಾಗುತ್ತದೆ.

೬. ಹರ್ದ ಎಂಬ ಹೂವು ಮತ್ತು ದಾಳಿಂಬೆ ಹಣ್ಣನ್ನು ಬಳಸಿ ಕಪ್ಪು ಬಣ್ಣವನ್ನು ತಯಾರು ಮಾಡುತ್ತಾರೆ.

ಹೀಗೆ ತಯಾರು ಮಾಡಲಾಗುವ ಬಣ್ಣಗಳ ಕಚ್ಚಾ ಸಾಮಗ್ರಿಗಳನ್ನು ಮೊದಲು ನೀರಿನಲ್ಲಿ ಬೇಯಿಸಲಾಗುತ್ತದೆ. ಹೂವುಗಳನ್ನು ೨೦ ನಿಮಿಷದವರೆಗೆ ಬೇಯಿಸಲಾಗುತ್ತದೆ. ಬೇರುಗಳನ್ನು, ಗಿಡಮೂಲಿಕೆಗಳನ್ನು ರಾತ್ರಿಯಿಡೀ ನೆನೆಸಿಟ್ಟು ೩೦ ನಿಮಿಷಗಳವರೆಗೆ ಬೇಯಿಸಲಾಗುತ್ತದೆ. ಈ ಪ್ರಕ್ರಿಯೆಯು ಹದವಾದ ಬಣ್ಣ ಉತ್ಪತ್ತಿಯಾಗುವವರೆಗೂ ೩ ಸಾರಿ ಪುನರಾವರ್ತನೆಯಾಗುತ್ತದೆ. ನಂತರ ಬಟ್ಟೆಯನ್ನು ಬೇಯಿಸಿ, ಅಡಿಗೆ ಸೋಡ ಮತ್ತು ಸೋಪಿನ ಎಣ್ಣೆಯಿಂದ ಬಟ್ಟೆಯ ಕೊಳೆಯನ್ನು ತೆಗೆಯಲಾಗುತ್ತದೆ. ಇದರ ನಂತರ ಬಟ್ಟೆಯು ಕಸೂತಿಗಾಗಿ ಸಿದ್ಧವಾಗುತ್ತದೆ. ಬಟ್ಟೆಯನ್ನು ಬಣ್ಣದಲ್ಲಿ ಅದ್ದುವಾಗ ಹೆಚ್ಚಾಗಿ ನೀರಿನ ಬಳಕೆ ಮಾಡುವುದರಿಂದ ಬಟ್ಟೆಯು ಸರಾಗವಾಗಿ ಮೀಯುತ್ತದೆ. ಅಷ್ಟೇ ಅಲ್ಲದೆ, ಬಟ್ಟೆಗೆ ಶಾಖವನ್ನು ಕೊಟ್ಟಾಗ ನಿರೀಕ್ಷಿತ ಬಣ್ಣ ಪಡೆಯುತ್ತದೆ. ಬಣ್ಣ ಹಚ್ಚಿದ ಬಟ್ಟೆಯನ್ನು ನೆರಳಿನಲ್ಲಿ ಒಣಗಿಸುತ್ತಾರೆ. ಸಂಡೂರು ಕುಶಲ ಕಲಾಕೇಂದ್ರವು ಒಂದು ವಿಶಿಷ್ಟವಾದ ಮಾದರಿಯನ್ನು ಅಳವಡಿಸಿದ್ದು, ಈ ಮಾದರಿಯಿಂದಾಗಿ ಸಂಡೂರಿನ ಲಂಬಾಣಿ ಕಸೂತಿಯು ಹೆಚ್ಚು ಮನ್ನಣೆ ಪಡೆದಿದೆ. ಆ ಮಾದರಿಯೆಂದರೆ ಕಸೂತಿಗೆ ಸಿದ್ಧವಾಗಿರುವ ಬಟ್ಟೆಯ ಮೇಲೆ ಮಾಡುವ ಮುದ್ರಣ ಅಥವಾ ಅಚ್ಚು. ಮುದ್ರಣಕ್ಕಾಗಿ ಕೇಂದ್ರವು ಹಲಗೆಗಳ ಮೇಲೆ





ಬಣ್ಣದ ಮನೆ



ಬಣ್ಣ ಹಾಕುತ್ತಿರುವುದು




ಬಣ್ಣದ ಮನೆ





ವಿವಿಧ ಬಣ್ಣದ ಧಾರಗಳು ಸಂಗ್ರಹ





ಬಣ್ಣ ಹಾಕುತ್ತಿರುವುದು



ವಿವಿಧ ವಿನ್ಯಾಸದ ಅಚ್ಚುಗಳು





ನೈಸರ್ಗಿಕ ಬಣ್ಣಗಳ ಕಚ್ಚಾ ಸಾಮಗ್ರಿಗಳು

ಚಿತ್ರಗಳನ್ನು ಕೆತ್ತಿ ಅಂತಹ ಚಿತ್ರಗಳನ್ನು ಬಟ್ಟೆಗಳ ಮೇಲೆ ಮುದ್ರಿಸುವುದು. ಇಂತಹ ಹಲಗೆಗಳನ್ನು ಹಂಪಿಯಲ್ಲಿ ವಾಸಿಸುತ್ತಿರುವ ಲಂಬಾಣಿ ಸಮುದಾಯದಿಂದ ಕೊಂಡು ಕೊಳ್ಳುತ್ತಾರೆ.

ಈ ವಿಧಾನವಲ್ಲದೆ ಕೇಂದ್ರವು ಮತ್ತೊಂದು ವಿಧಾನವನ್ನೂ ಸಹ ಅಳವಡಿಸಿಕೊಂಡಿದೆ. ಅದೆಂದರೆ ತೂರಿ ಅಥವಾ ವಾಡ್ಕಿ ವಿಧಾನದಲ್ಲಿ ಚುಕ್ಕೆಗಳನ್ನು ಮುದ್ರಿಸುವುದಾಗಿದೆ. ಈ ವಿಧಾನದಲ್ಲಿ ಮೊದಲೇ ಚುಕ್ಕೆಗಳನ್ನು ಬಿಡಿಸಿರುವ ಹಲಗೆಯನ್ನು ಬಟ್ಟೆಯ ಮೇಲೆ ಇಟ್ಟು ಅದಕ್ಕೆ ಬಣ್ಣ ತುಂಬುವುದು. ನಮೂನೆಗಳ ಆಯ್ಕೆಯು ಬಟ್ಟೆಯ ಗುಣಮಟ್ಟವನ್ನು ಆಧರಿಸಿದೆ. ವಿವಿಧ ನಮೂನೆಗಳನ್ನು ಅಯ್ಕೆ ಮಾಡುವ ಮುಂಚೆ, ಬಟ್ಟೆಯ ಗುಣಮಟ್ಟ ಮತ್ತು ಅದರ ಬಣ್ಣವನ್ನು, ಅದರ ಉಪಯೋಗ ಮತ್ತು ಜೀವಿತಾವಧಿಯನ್ನು ಲೆಕ್ಕ ಹಾಕಿ, ಅಗತ್ಯ ಆಕಾರದಲ್ಲಿ ತುಂಡರಿಸಿದ ನಂತರ ಕಸೂತಿಗೆ ಕಳುಹಿಸಲಾಗುತ್ತದೆ. ಹೊಲಿಗೆಯ ಶೈಲಿಯು ಬಟ್ಟೆಯ ನಮೂನೆಗಳನ್ನು ಆಧರಿಸಿದೆ. ಹೊಲಿಗೆಯ ನಡುವಿನ ಅಂತರ, ಬಳಸುವ ದಾರ ಮುಂತಾದವುಗಳನ್ನು ಪಟ್ಟಿ ಮಾಡಲಾಗುವುದು. ಹೀಗೆ ಪಟ್ಟಿ ಮಾಡಿದ ಸಾಮಗ್ರಿಗಳನ್ನು ಮಾತ್ರ ಉಪಯೋಗಿಸಲು ಸೂಚಿಸಿ ಲಂಬಾಣಿ ಮಹಿಳೆಯರಿಗೆ ಕಸೂತಿ ಮಾಡಲು ಕೊಡಲಾಗುತ್ತದೆ. ಕಲೆಗಾರರು ತಮ್ಮ ವಿವೇಚನೆ ಬಳಸಿ ತಮ್ಮದೇ ನಮೂನೆಗಳನ್ನು ತಯಾರು ಮಾಡಲು ಪ್ರೋತ್ಸಾಹಿಸಲಾಗುತ್ತದೆ.

ಕೇಂದ್ರವು ಸಂಡೂರಿನ ಸುತ್ತಮುತ್ತವಿರುವ ೧೦ ತಾಂಡಾಗಳಲ್ಲಿನ ಲಂಬಾಣಿ ಮಹಿಳೆಯರನ್ನು ಕಸೂತಿ ಕೆಲಸಕ್ಕೆ ಬಳಸಿಕೊಳ್ಳುತ್ತಿದೆ. ತಲೆಮಾರುಗಳಿಂದ ಮಾಡಲಾಗುತ್ತಿರುವ ಕಸೂತಿ ಕೆಲಸವನ್ನು ಜೀವಂತವಾಗಿರಿಸಲು ಕೈಗೊಳ್ಳಬೇಕಾದ ಪ್ರತಿಯೊಂದು ಕ್ರಮವನ್ನು ಅನುಸರಿಸುತ್ತಿದೆ. ಸುಮಾರು ೧೫೦-೨೦೦ ಮಹಿಳೆಯರು ಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದಾರೆ. ಕೆಲವರು ಮನೆಯಲ್ಲಿಯೇ ಕಸೂತಿ ಮಾಡಿದರೆ, ಇನ್ನು ಕೆಲವರು ದಿನವಿಡೀ ಕೇಂದ್ರದಲ್ಲಿದ್ದು, ಹೊಸ ನಮೂನೆಗಳ ಬಗ್ಗೆ, ಬಣ್ಣಗಳ ಬಗ್ಗೆ, ಹೊಲಿಗೆಯ ಬಗ್ಗೆ ನಡೆಯುವ ಕಾರ್ಯಾಗಾರಗಳಲ್ಲಿ ಭಾಗವಹಿಸಿ ಕಸೂತಿಯನ್ನು ಸಹ ಮಾಡುತ್ತಾರೆ.

| ಕ್ರಸಂ. | ತಾಂಡದ ಹೆಸರು | ತಾಲೂಕು | ಜಿಲ್ಲೆ | ಕಲಾವಿದರ ಸಂಖ್ಯೆ |
|---|---|---|---|---|
| ೧. | ಸುಶೀಲಾ ನಗರ | ಸಂಡೂರು | ಬಳ್ಳಾರಿ | ೪೯ |
| ೨. | ಕಡ್ಡಿರಾಂಪುರ | ಹೊಸಪೇಟೆ | ಬಳ್ಳಾರಿ | ೧೫ |
| ೩. | ಅನಂತಶಯನಗುಡಿ | ಹೊಸಪೇಟೆ | ಬಳ್ಳಾರಿ | ೦೮ |
| ೪. | ಸೀತಾರಾಮ ತಾಂಡಾ | ಹೊಸಪೇಟೆ | ಬಳ್ಳಾರಿ | ೧೦ |
| ೫. | ಆನೇಕಲ್ ತಾಂಡಾ | ಹಗರಿಬೊಮ್ಮನಹಳ್ಳಿ | ಬಳ್ಳಾರಿ | ೧೧ |

| | | | | |
|---|---|---|---|---|
| ೬ | ಮರಿಯಮ್ಮನಹಳ್ಳಿ ತಾಂಡಾ | ಹಗರಿಬೊಮ್ಮನಹಳ್ಳಿ | ಬಳ್ಳಾರಿ | ೩೧ |
| ೭ | ಕೋಗಳಿ ತಾಂಡಾ | ಹಗರಿಬೊಮ್ಮನಹಳ್ಳಿ | ಬಳ್ಳಾರಿ | ೨೧ |
| ೮. | ಬಂಡೆ ಬಸಾಪುರ | ಕೂಡ್ಲಿಗಿ | ಬಳ್ಳಾರಿ | ೧೧ |
| ೯. | ಮೋತಿಕಲ್ ತಾಂಡಾ | ಕೂಡ್ಲಿಗಿ | ಬಳ್ಳಾರಿ | ೧೫ |
| ೧೦. | ಡುಂಗಾವತಿ ತಾಂಡಾ | ಹಡಗಲಿ | ಬಳ್ಳಾರಿ | ೧೦ |
| | | | ಒಟ್ಟು | ೧೮೧ |

ಪ್ರತಿ ತಾಂಡಾಗೆ ಒಬ್ಬರಂತೆ ೧೦ ಜನ ಮೇಲ್ವಿಚಾರಕರನ್ನು ನೇಮಿಸಲಾಗಿದೆ. ಇವರು ವಾರಕ್ಕೊಮ್ಮೆ ಮಹಿಳೆಯರಿಗೆ ಕಸೂತಿ ಕೆಲಸದ ದುಡಿಮೆ, ಹೊಸ ಕಸೂತಿ ಕೆಲಸದ ಜವಾಬ್ದಾರಿ ವಹಿಸುತ್ತಾರೆ. ಕಸೂತಿಯ ಗುಣಮಟ್ಟವನ್ನು ಪರೀಕ್ಷಿಸಲು ಕೇಂದ್ರವು ತನ್ನದೇ ಆದ ವಿನ್ಯಾಸ ಮತ್ತು ತಾಂತ್ರಿಕ ತಂಡವನ್ನು ಕಳುಹಿಸಿಕೊಡುತ್ತದೆ. ಕಸೂತಿಯಾದ ನಂತರ, ಹೊಲಿಗೆ ಮಾಡಲು ಕೇಂದ್ರದಲ್ಲಿ ಅನೇಕ ದರ್ಜಿಗಳಿದ್ದಾರೆ. ಪಾಳಿ ಪ್ರಕಾರ ಕೆಲಸ ಮಾಡುವ ದರ್ಜಿಗಳನ್ನು ಅವರ ಅನುಭವ ಮತ್ತು ಕುಶಲತೆಯ ಆಧಾರದ ಮೇಲೆ ಹಲವು ಗುಂಪುಗಳ ನಾಯಕರನ್ನಾಗಿ ನೇಮಿಸಲಾಗುತ್ತದೆ ಮತ್ತು ಹೊಲಿಗೆಯ ಸಂಪೂರ್ಣ ಜವಾಬ್ದಾರಿಯನ್ನು ಹೊರಿಸಲಾಗುತ್ತದೆ. ಬಟ್ಟೆಯನ್ನು ಹೊಲಿದ ನಂತರ ಮತ್ತೊಮ್ಮೆ, ಕೊನೆಯದಾಗಿ ಮಣಿ ಮತ್ತು ಚಿಪ್ಪುಗಳನ್ನು ಹೊಲಿಯಲಾಗುತ್ತದೆ.

**ಅನುಸರಿಸಲಾಗುವ ವಿಧಾನಗಳು**

ಉಡುಪನ್ನು ಹೆಚ್ಚು ಅಲಂಕಾರಗೊಳಿಸಲು ಲಂಬಾಣಿ ಮಹಿಳೆಯರು ಈ ಕೆಳಕಂಡ ವಿಧಾನಗಳನ್ನು ಅನುಸರಿಸುತ್ತಾರೆ.

೧. ವಿವಿಧ ರೀತಿಯ ಹೊಲಿಗೆಯ ಪ್ರಕಾರಗಳು.

೨. ತಂಡುಬಟ್ಟೆಗಳಿಂದ ತಯಾರಾದ ಉಡುಪಿನ ಮೇಲೆ ಹೊಲಿದು ಅದಕ್ಕೆ ವಿಶೇಷ ಅಲಂಕಾರ ಕೊಡುವುದು, ತಲೆದಿಂಬು, ರಜಾಯಿ, ಗೋಡೆಯ ಮೇಲೆ ತೂಗುಹಾಕುವ ಆಲಂಕಾರಿಕ ವಸ್ತುಗಳು, ಪರದೆಗಳು ಮತ್ತು ಕೈಚೀಲಗಳ ಮೇಲೆ ತುಂಡುಬಟ್ಟೆಯ ಕೆಲಸ ಮಾಡುತ್ತಾರೆ.

೩. ಉಡುಪಿನ ಅಂಚನ್ನು ಹೊಲಿಯುವುದರಲ್ಲಿ ಮತ್ತು ಅಂಚನ್ನು ಹೆಚ್ಚು ಸಿಂಗರಿಸುವಲ್ಲಿ ಲಂಬಾಣಿಯರು ವಿಶೇಷ ಗಮನ ಕೊಡುತ್ತಾರೆ.

೪. ವಿವಿಧ ರೀತಿಯ ಆಲಂಕಾರಿಕ ಸಾಮಗ್ರಿಗಳ ಬಳಕೆ.

೫. ನಾಣ್ಯಗಳನ್ನು ಕಸೂತಿಯಲ್ಲಿ ಬಳಸುವ ವಿಧಾನ ತಲೆಮಾರುಗಳಿಂದ ನಡೆದುಕೊಂಡು ಬಂದಿದೆ. ೨೫ ಪೈಸೆ, ೫೦ ಪೈಸೆ, ೧ ರೂಪಾಯಿ, ೩ ಪೈಸೆ, ನಯಾ ಪೈಸೆ, ನಾಣ್ಯಗಳನ್ನು ಕಸೂತಿಯಲ್ಲಿ ಬಳಸುತ್ತಾರೆ. ಆಧುನಿಕತೆ ಹೆಚ್ಚಿದಂತೆಲ್ಲ ನಾಣ್ಯಗಳ ಬಳಕೆ ಸ್ವಲ್ಪ ಕಡಿಮೆಯಾಗಿದೆ.

೬. ಬಟ್ಟೆಯನ್ನು ದುಂಡಗೆ ಚಿಕ್ಕ ಚೆಂಡಿನಂತೆ ಹೊಲಿದು, ಓಡ್ನಿಯ(ವೇಲ್) ಅಂಚಿನಲ್ಲಿ ಜೋತು ಬೀಳುವ ಹಾಗೆ ಹೊಲೆಯುತ್ತಾರೆ.

೭. ಆಭರಣಗಳನ್ನು ಕಸೂತಿಯಲ್ಲಿ ಬಳಸುವುದು ಲಂಬಾಣಿ ಮಹಿಳೆಯರ ಮತ್ತೊಂದು ವೈಶಿಷ್ಟ್ಯ. ಅಲ್ಯೂಮಿನಿಯಮ್ ಆಭರಣಗಳನ್ನು ಸ್ಥಳೀಯ ಅಕ್ಕಸಾಲಿಗರಿಂದ ಮಾಡಿಸಿ ಅವುಗಳನ್ನು ಕಸೂತಿಯಲ್ಲಿ ಬಳಸುತ್ತಾರೆ.

೮. ಪರಿ ಎಂದು ಕರೆಯಲಾಗುವ ಆಭರಣವನ್ನು ಉಡುಪಿನ ಅಂಚಿಗೆ ಬಳಸುತ್ತಾರೆ.

೯. ಹಿತ್ತಾಳೆ ಗೆಜ್ಜೆಗಳನ್ನು ಸಹ ಕಸೂತಿಯಲ್ಲಿ ಬಳಸಲಾಗುತ್ತದೆ.

೧೦. ಕವಡೆಗಳನ್ನು ಸೊಂಟಕ್ಕೆ ಬೆಲ್ಟಿನ(ಸೊಂಟಪಟ್ಟಿ) ರೂಪದಲ್ಲಿ ಕಟ್ಟಿಕೊಳ್ಳುತ್ತಾರೆ.

೧೧. ಗುಂಡಿಗಳನ್ನು ಕುಪ್ಪಸದಲ್ಲಿ ಹೊಲಿಯುವುದು.

**ಗುಣಮಟ್ಟ ಪರಿಶೀಲನಾ ಸಮಿತಿ**

ಸಂಡೂರು ಕುಶಲ ಕಲಾಕೇಂದ್ರ, ಕರ್ನಾಟಕ ಕುಶಲಕಲೆ ಅಭಿವೃದ್ಧಿ ನಿಗಮ ನಿಯಮಿತ ಮತ್ತು ಜವಳಿ ಸಮಿತಿಯ ಸದಸ್ಯರು ಕಸೂತಿಯ ಗುಣಮಟ್ಟ ನಿರ್ದರಿಸಲು ಕೆಲವು ನಿಯಮಾವಳಿಗಳನ್ನು ರೂಪಿಸಿದೆ. ಈ ನಿಯಮಾವಳಿಗಳಿಗೆ ಮುಂಬಯಿಯಲ್ಲಿರುವ ಜವಳಿ ಸಮಿತಿಯು ಕಾಲಕಾಲಕ್ಕೆ ಸಲಹೆ ನೀಡುತ್ತದೆ. ಸಂಡೂರಿನ ಕೇಂದ್ರವು ತನ್ನ ಸಮಿತಿಯಲ್ಲಿ ಈ ಕೆಳಕಂಡ ಸದಸ್ಯರನ್ನು ಹೊಂದಿದೆ.

೧. ಸಂಡೂರಿನ ಇಬ್ಬರು ನಿಪುಣ ಲಂಬಾಣಿ ನೇಕಾರರು.

೨. ಕೇಂದ್ರದ ಒಬ್ಬ ಪ್ರತಿನಿಧಿ.

೩. ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮದ ಪ್ರತಿನಿಧಿ.

೪. ಮುಂಬಯಿಯ ಜವಳಿ ಸಮಿತಿಯ ಸದಸ್ಯ.

೫. ಸರಕಾರೇತರ ಸಂಸ್ಥೆಯ ಪ್ರತಿನಿಧಿ.

**ಸಂಡೂರು ಕುಶಲಾ ಕಲಾಕೇಂದ್ರ ಈ ಕೆಳಗಿನ ಸಂಸ್ಥೆಗಳ ಮಾನ್ಯತೆ ಪಡೆದಿದೆ.**

೧. ಖಾದಿ ಮತ್ತು ಗ್ರಾಮೋದ್ಯೋಗ ಸಮಿತಿ(K.V.I.C).

೨. ಕರಕುಶಲ ಅಭಿವೃದ್ಧಿ ಕಮೀಶನರ್, ಜವಳಿ ಮಂತ್ರಾಲಯ, ಭಾರತ ಸರ್ಕಾರ.

೩. ಭಾರತೀಯ ವಾಣಿಜ್ಯ ಉದ್ಯಮಗಳ ಛೇಂಬರ್‌ಗಳ ಸಂಘಟನೆ(F.I.C.C.I).

೪. ನಬಾರ್ಡ್(NABARAD).

೫. ದಸ್ತಕಾರ್(DASTKAR) ದೆಹಲಿಯ ಲಾಭೋದ್ದೇಶರಹಿತ ಸಂಘಟನೆ.

೬. ಜಿಲ್ಲಾ ಪಂಚಾಯತ್, ಬಳ್ಳಾರಿ.

ಅಲ್ಲದೆ ವಿವಿಧ ಅಂತಾರಾಷ್ಟ್ರೀಯ ಸಂಘಸಂಸ್ಥೆಗಳೊಂದಿಗೂ ಇದು ಸಹಯೋಗ ಹೊಂದಿದ್ದು, ದೇಶ ವಿದೇಶಗಳಲ್ಲಿ ಮಾರುಕಟ್ಟೆ ಪ್ರದರ್ಶನಗಳನ್ನು ಏರ್ಪಡಿಸುತ್ತದೆ. ಅವುಗಳೆಂದರೆ,

೧. ಜಪಾನ್‌ನಸಿಸಂ(SISAM) ಎಂಬ ಪ್ರದರ್ಶನಗಳನ್ನು ಆಯೋಜಿಸುವ ಸಂಸ್ಥೆ.

೨. ನೆದರ್‌ಲ್ಯಾಂಡ್ಸ್‌ನ-IXX - ಇದು Jolijn Fiddelaers ಎಂಬ ಪ್ರಸಿದ್ಧ ಮಹಿಳೆಯ ಬ್ರಾಂಡ್ ಆಗಿದ್ದು ಸ್ವತಂತ್ರ ವಸ್ತುವಿನ್ಯಾಸಗಾರ್ತಿಯಾಗಿರುವ ಇವರು ಸಂಡೂರು ಕುಶಲ ಕಲಾಕೇಂದ್ರದ ಸಹಯೋಗದಲ್ಲಿ ಕೆಲಸ ಮಾಡುತ್ತಿದ್ದಾರೆ.

೩. ಅಮೆರಿಕಾದ ವೆಸ್ಟ್ ಎಲ್ಮ್(West-Elm) - ಇದು ವಿಶ್ವದ ಅತಿದೊಡ್ಡ ವಸ್ತ್ರ ಮಾರಾಟ ಸಂಸ್ಥೆಯಾಗಿದ್ದು, ಇದು ಸಂಡೂರು ಕುಶಲ ಕಲಾಕೇಂದ್ರದ ಪ್ರಮುಖ ಯೋಜನೆಯಾಗಿದೆ. ದೆಹಲಿಯ(WECCA) ತಂಡ ಈ ಎರಡು ಸಂಸ್ಥೆಗಳನ್ನು ಪರಿಚಯಿಸಿದ್ದು, ಎರಡೂ ಇದರ ಲಾಭ ಪಡೆಯುತ್ತಿವೆ.

**೪.೨. ಬಿಜಾಪುರ 'ಸಬಲಾ'**

**ಬಿಜಾಪುರದ ಸಾಂಸ್ಕೃತಿಕ ಹಿನ್ನೆಲೆ**

ಇತಿಹಾಸ, ಸಾಹಿತ್ಯ, ಕಲೆ ಹಾಗೂ ಸಂಸ್ಕೃತಿಗಳನ್ನು ಅವಲೋಕಿಸಿದಾಗ ಬಿಜಾಪುರ ಜಿಲ್ಲೆಯು ಜಗತ್ತಿನ ನಕಾಶೆಯಲ್ಲಿ ಸ್ಥಾನ ಗಳಿಸಿದ್ದು ತಿಳಿದುಬರುತ್ತದೆ. ಇಲ್ಲಿ ಜಗತ್ಪ್ರಸಿದ್ಧವಾದ ಗೋಲಗುಮ್ಮಟ, ಹಿಂದೂ-ಅರೇಬಿಕ್ ಶೈಲಿಯ ವಾಸ್ತುಶಿಲ್ಪದ ಕಟ್ಟಡಗಳಿವೆ. ಭಾರತದ ಮೊದಲ ಕ್ರಾಂತಿಕಾರಕ ವಿಚಾರವಾದಿಯೆಂದು ಗುರುತಿಸಲ್ಪಟ್ಟ ಬಸವೇಶ್ವರರ ಜನ್ಮಭೂಮಿಯೂ ಈ ಜಿಲ್ಲೆಯಲ್ಲಿ ಆಗಿದೆ. ಬಿಜಾಪುರ ಜಿಲ್ಲೆಯನ್ನು ಚಾಲುಕ್ಯರು, ರಾಷ್ಟ್ರಕೂಟರು, ಆದಿಲ್‌ಶಾಹಿ ಮುಂತಾದ ಅರಸು ಮನೆತನಗಳು ಆಳಿವೆ.

ಬಿಜಾಪುರ ಜಿಲ್ಲೆಯು ಕೃಷ್ಣಾ ಹಾಗೂ ಭೀಮಾ ನದಿಗಳ ನಡುವೆ ನೆಲೆಗೊಂಡಿದೆ. ಮಧ್ಯದಲ್ಲಿ ಡೋಣಿ ನದಿ ಹರಿಯುತ್ತದೆ. ಇಲ್ಲಿನ ಫಲವತ್ತಾದ ಕಪ್ಪುಮಣ್ಣಿನಲ್ಲಿ ಜೋಳ, ಗೋಧಿ, ಕುಸುಬೆ, ಸೂರ್ಯಕಾಂತಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಮರಡಿ ನೆಲದಲ್ಲಿ ಬೆಳೆಯುವ ಮಧುರವಾದ ದ್ರಾಕ್ಷಿ ಹಾಗೂ ದಾಳಿಂಬೆ, ಬಾರೆಹಣ್ಣು ಪರದೇಶಗಳಿಗೆ

ರಫ್ತಾಗುತ್ತವೆ. ೧೧-೧೨ನೇ ಶತಮಾನದಲ್ಲಿ ಇದು ವಿಜಾಪೂರವೆಂದು ಉಲ್ಲೇಖಿತವಾಗಿದೆ. ಬಿಜಾಪುರವು ಕಲ್ಯಾಣಿ ಚಾಲುಕ್ಯರ ಮತ್ತು ಸೇವುಣರ ಪ್ರಾದೇಶಿಕ ರಾಜಧಾನಿಯಾಗಿತ್ತು. ಮುಂದೆ ಆದಿಲ್‌ಶಾಹಿ ಸುಲ್ತಾನರ ರಾಜಧಾನಿಯಾಯ್ತು. ಆಗ ಅದನ್ನು ಬಿಜ್ಜಪುರ, ವಿದ್ಯಾಪುರ, ಬದ್ಯಾಪುರ, ಮಹ್ಮದೀಪುರ ಎಂಬ ವಿವಿಧ ಹೆಸರುಗಳಿಂದ ಕರೆಯಲಾಗುತ್ತಿತ್ತು. ಇಷ್ಟಾದರೂ ಪ್ರಸ್ತುತ ಅದು ಬಿಜಾಪುರವೆಂದು ಹೆಸರು ಪಡೆದಿದೆ.

ಬಿಜಾಪುರ ಜಿಲ್ಲೆಯಲ್ಲಿ ಬಸವನ ಬಾಗೇವಾಡಿ, ಸಿಂದಗಿ, ಇಂಡಿ, ಬಿಜಾಪುರ, ಮುದ್ದೇಬಿಹಾಳ - ಹೀಗೆ ಒಟ್ಟು ಐದು ತಾಲೂಕುಗಳಿವೆ. ಜಿಲ್ಲೆಯಲ್ಲಿ ಒಟ್ಟು ೬೪೮ ಹಳ್ಳಿಗಳಿವೆ.

ಇತಿಹಾಸ ಸಂಶೋಧಕರು ಖೇಡ, ಇಂಗಳೇಶ್ವರ, ಸಾಲವಾಡಗಿ, ಕೊಲ್ಹಾರ, ನಿಂಬಾಳ, ತದ್ದೇವಾಡಿ, ಇಂಚಗೇರಿಗಳನ್ನು ಇತಿಹಾಸಪೂರ್ವದ ನೆಲೆಗಳೆಂದು ಗುರುತಿಸಿದ್ದಾರೆ. ೨ನೇ ಶತಮಾನದಲ್ಲಿ ಭಾರತಕ್ಕೆ ಆಗಮಿಸಿದ್ದ ಈಜಿಪ್ತಿನ ಟಾಲೆಮಿ ಇಂಡಿ ಹಾಗೂ ಕಲಕೇರಿಗಳನ್ನು ಪುರಾತನ ಸ್ಥಳಗಳೆಂದು ದಾಖಲಿಸಿದ್ದಾನೆ. ವಿಜಾಪುರ ಜಿಲ್ಲೆಯನ್ನು ಭೌಗೋಳಿಕವಾಗಿ ಭೀಮಾ ಕಣಿವೆ, ಮಧ್ಯದ ಪ್ರಸ್ಥಭೂಮಿ, ಡೋಣಿ ಕಣಿವೆ, ಬಿಜಾಪುರ ನಗರ ಪ್ರದೇಶ ಮತ್ತು ಕೃಷ್ಣಾನದಿ ಪ್ರದೇಶವೆಂದು ವಿಂಗಡಿಸಬಹುದು.

ಕೃಷ್ಣಾನದಿಗೆ ಆಲಮಟ್ಟಿಯಲ್ಲಿ ನಿರ್ಮಿಸಿದ ಅಣೆಕಟ್ಟೆಯಿಂದ ಬಿಜಾಪುರ, ರಾಯಚೂರು ಮತ್ತು ಕಲಬುರ್ಗಿ ಜಿಲ್ಲೆಯ ಲಕ್ಷಾಂತರ ಎಕರೆ ಭೂಮಿಗೆ ನೀರಾವರಿ ಸೌಲಭ್ಯವುಂಟಾಗಿದೆ. ಜಿಲ್ಲೆಯ ಪ್ರಸ್ಥಭೂಮಿಯು ಜ್ವಾಲಾಮುಖಿಯ ಲಾವಾರಸದಿಂದ ಉಂಟಾಗಿದೆ. ಇಲ್ಲಿ ಪದರು ಕಲ್ಲುಗಳು ದೊರೆಯುತ್ತವೆ.

ಬಿಜಾಪುರ ಜಿಲ್ಲೆಯು ಸಾಹಿತ್ಯ ಕ್ಷೇತ್ರಕ್ಕೆ ಅನುಪಮ ಕೊಡುಗೆ ನೀಡಿದೆ. ಅಗ್ಗಳ, ಅದೃಶ್ಯಕವಿ ಹಳೆಗನ್ನಡ ಕಾವ್ಯ ರಚಿಸಿದ್ದಾರೆ. ಬಸವಣ್ಣ ಹಾಗೂ ಶರಣರು ವಚನಸಾಹಿತ್ಯ ಕೃಷಿಗೈದು ವಿಶ್ವಸಾಹಿತ್ಯಕ್ಕೆ ಕೊಡುಗೆ ನೀಡಿದ್ದಾರೆ. ಹರ್ಡೇಕರ ಮಂಜಪ್ಪ, ಮಧುರಚೆನ್ನ, ಸಿಂಪಿಲಿಂಗಣ್ಣ ಮುಂತಾದ ಕವಿಮಾನ್ಯರು ಅಧುನಿಕ ಸಾಹಿತ್ಯ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದ್ದಾರೆ. ಜಿಲ್ಲೆಯಲ್ಲಿ ವಿವಿಧ ಕೋಮುಗಳ ಜನರಿದ್ದರೂ ಅವರಲ್ಲಿ ಭಾವೈಕ್ಯತೆ ಇದೆ. ಇಲ್ಲಿ ಪುರಾತನ ವಾಸ್ತು ವೈವಿಧ್ಯದಿಂದ ಕೂಡಿದ ದೇವಾಲಯ, ಮಸೀದಿ, ಜೈನ ಮಂದಿರ ಹಾಗೂ ಚರ್ಚುಗಳಿವೆ. ಆಲಮಟ್ಟಿ ಅಣೆಕಟ್ಟೆಯಲ್ಲಿ ಸಂಗ್ರಹವಾದ ಜಲಸಾಗರ ಹಾಗೂ ಗಾರ್ಡನ್‌ಗಳು ನಯನ ಮನೋಹರವಾಗಿವೆ. ನಮ್ಮ ಮಕ್ಕಳಿಗೆ ಜಿಲ್ಲೆಯ ಬಗ್ಗೆ ಸಮಗ್ರ ಮಾಹಿತಿ ಪಡೆದುಕೊಳ್ಳಲು ಅವರು ಅವುಗಳನ್ನು ಕಣ್ಣಾರೆ ನೋಡಬೇಕು. ಸೌಂದರ್ಯವನ್ನು ಸವಿಯಬೇಕು. ಅವರ ಮನಸ್ಸು ಪ್ರಸನ್ನವಾಗಬೇಕು. ಅವರ ಜ್ಞಾನ ಭಂಡಾರ ಬೆಳೆಯಬೇಕು.



## ಸಬಲಾ ಕೇಂದ್ರದ ಕರಕುಶಲ ವಸ್ತುವೈವಿಧ್ಯಗಳು



ಸಬಲಾ ಸಂಸ್ಥೆಯ ಸಂಸ್ಥಾಪಕಿ ಮಲ್ಲಮ್ಮ ಯಳವಾರ



ಕಸೂತಿ ಕಲಾವಿದರು



ಕಸೂತಿ ವಿನ್ಯಾಸದ ಕಾರ್ಯಗಾರ ಆಯೋಜಕರು N.I.F.T



U.K ತಂಡ ಸಂಸ್ಥೆಗೆ ಬೇಟಿ ನಿಡಿದ್ದು



U.S.A ತಂಡ ಕಸೂತಿ ವಿಕ್ಷಿಸುತ್ತಿರುವುದು



U.K ತಂಡ ಸಂಸ್ಥೆಯ ಮಳಿಗೆ ವಿಕ್ಷಿಸುತ್ತಿರುವುದು



## ಸಬಲಾ ಕೇಂದ್ರದ ಕರಕುಶಲ ವಸ್ತುವೈವಿಧ್ಯಗಳು





ಕೆಲಸದಲ್ಲಿ ನಿರತ ಮಹಿಳೆಯರು



ಸಬಲಾದ ಮಳಿಗೆ



ಸಬಲಾ ಕೇಂದ್ರದ ಕರಕುಶಲ ವಸ್ತುವೈವಿಧ್ಯಗಳು



ಆಹೇರಿ ತಾಂಡಾದ ಮಹಿಳೆಯರು (ಬಿಜಾಪುರ)



ಕಸೂತಿ ಕಲಾವಿದರು



ಸೋಮಿಬಾಯಿ ಚವ್ಹಾಣ

**ಬಿಜಾಪುರ ಪರಿಸರದ ಬಂಜಾರ ಸಮುದಾಯ**

ಬಂಜಾರ ಜನಾಂಗವು ಮೂಲತಃ ಯುರೋಪಿನ ರೋಮನ್ ಅಲೆಮಾರಿಗಳ ಸಂತತಿಯವರು ಎಂಬ ನಂಬಿಕೆಯಿದೆ. ಸಾವಿರಾರು ವರ್ಷಗಳ ಹಿಂದೆ, ಆಫ್ಘಾನಿಸ್ತಾನದ ಗುಡ್ಡಗಾಡಿನಿಂದ ಹಿಡಿದು ಉತ್ತರ ಭಾರತದ ರಾಜಸ್ಥಾನದ ಮರಳುಗಾಡಿನವರೆಗೆ ಅಲೆದಾಡುತ್ತಿದ್ದ ರೋಮನ್ ಅಲೆಮಾರಿಗಳು, ಕ್ರಮೇಣ ದಕ್ಷಿಣ ಭಾರತಕ್ಕೆ ವಲಸೆ ಬಂದಿರಬಹುದು ಎಂದು ಅಂದಾಜಿಸಲಾಗಿದೆ. ಬ್ರಿಟಿಷರು ಈ ಬುಡಕಟ್ಟಿಗೆ 'ಬಂಜಾರ' ಎಂಬ ಹೆಸರಿನಿಂದ ಕರೆದರೆ, ಇವರನ್ನು ಲಂಬಾಡಿ ಮತ್ತು ಗೋರ್‌ಮಾಟಿ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. ಗಾಂಧೀಜಿಯವರು ಉಪ್ಪಿನ ಸತ್ಯಾಗ್ರಹ ಕೈಗೊಳ್ಳುವವರೆಗೂ, ಉಪ್ಪು ಮಾರಿ ಜೀವನ ನಿರ್ವಹಣೆ ಮಾಡುತ್ತಿದ್ದ ಲಂಬಾಣಿಯರು, ಕಾಲಕ್ರಮೇಣ ಕೂಲಿ ಮತ್ತು ಕಟ್ಟಡ ಕೆಲಸವನ್ನು ಮಾಡುತ್ತ ನೆರೆಹೊರೆಯ ಊರುಗಳಿಗೆ ವಲಸೆ ಹೋದರು. ಲಂಬಾಣಿ ಬುಡಕಟ್ಟು ವಲಸೆ ಹೋಗುವುದನ್ನು ತಡೆಯಲು, 'ಸಬಲ' ಸಂಸ್ಥೆಯು ಇವರ ಪಾರಂಪರಿಕ ಕರಕುಶಲತೆಯನ್ನೇ ಇವರ ಜೀವನೋಪಾಯವಾಗುವಂತೆ ಕೆಲ ಪ್ರಯತ್ನಗಳನ್ನು ಕೈಗೊಂಡಿದೆ.

**ಬಂಜಾರ ಕರಕುಶಲತೆ**

ಜಾಗತೀಕರಣ ಮತ್ತು ಉದಾರೀಕರಣ ನೀತಿಗಳು ಭಾರತೀಯ ಸಮಾಜದ ಪಾರಂಪರಿಕ ನಾಗರಿಕತೆಗೆ ಮತ್ತು ಸಂಸ್ಕೃತಿಗೆ ದೊಡ್ಡ ಸವಾಲನ್ನು ಒಡ್ಡಿದೆ. ಜಾಗತೀಕರಣವು ದೇಸಿಯತೆಯನ್ನು ಆಧುನಿಕತೆಯ ಸೋಗಿನಲ್ಲಿ ಹರಿದು ಮುಕ್ಕುತ್ತಿದೆ. ಬಂಜಾರ ಕರಕುಶಲತೆಯೂ ಸಹ ಜಾಗತೀಕರಣದ ಪ್ರಭಾವದಿಂದ ಯಜುರ್ವೇದ, ಅಥರ್ವಣ ವೇದಗಳಲ್ಲಿಯೂ ಉಲ್ಲೇಖಿಸ ಲಾಗಿರುವ ಬಂಜಾರ ಕಸೂತಿಯನ್ನು ಇತ್ತೀಚೆಗೆ "ಕ್ಷೀಣಿಸುತ್ತಿರುವ ಕಲೆ"ಯೆಂದು ಘೋಷಿಸ ಲಾಗಿದೆ. ಇಂತಹ ಪಾರಂಪರಿಕ ಐತಿಹಾಸಿಕ ಸಾಂಸ್ಕೃತಿಕ ಕಲೆಯನ್ನು ಪುನರುಜ್ಜೀವನಗೊಳಿಸುವ ಉದ್ದೇಶದಿಂದ ಸಬಲ ಸಂಸ್ಥೆಯು ಅನೇಕ ಕಾರ್ಯಕ್ರಮಗಳನ್ನು ರೂಪಿಸಿದೆ. ಬಂಜಾರ ಕಸೂತಿಯಲ್ಲಿ ಗಾಜಿನ ಬಳಕೆಯು ವಿಶಿಷ್ಟವಾಗಿದೆ. ಕ್ರೂರ ಪ್ರಾಣಿಗಳಿಂದ ತಮ್ಮನ್ನು ರಕ್ಷಿಸಲು ಬಂಜಾರ ಜನಾಂಗದವರು ಉಡುಗೆಗಳಲ್ಲಿ ಗಾಜಿನ ಚೂರುಗಳನ್ನು ಹೊಲಿಯುವುದು ಇದಕ್ಕೆ ಸಾಕ್ಷಿಯಾಗಿದೆ. ಕಾಡಿನಲ್ಲಿ ವಾಸಿಸುತ್ತಿದ್ದ ಬಂಜಾರರು ತಮ್ಮ ಪ್ರಾಣರಕ್ಷಣೆಗಾಗಿ ತಮ್ಮ ಉಡುಪನ್ನು ಆಧರಿಸುತ್ತಿದ್ದುದು ಮಾನವನ ಅದ್ಭುತಪ್ರಜ್ಞೆಗೆ ದ್ಯೋತಕವಾಗಿದೆ. ಪ್ರಾಣಿಗಳು ಗಾಜಿನ ಪ್ರತಿಫಲನವನ್ನು ಕಂಡು ಓಡುತ್ತಿದ್ದುದರಿಂದ, ಗಾಜು ಬಂಜಾರ ಜನಾಂಗದ ಜೀವರಕ್ಷಕವಾಗಿದೆ.

ಸಬಲಾ ಸಂಸ್ಥೆಯು ಬಂಜಾರ ಉಡುಪುಗಳಿಗೆ ಆಧುನಿಕಯುಗದ ರೂಪ ತೊಡಿಸಿ, ಅವುಗಳನ್ನು ಮಾರುಕಟ್ಟೆಗೆ ತರುವಲ್ಲಿ ಯೋಜನೆ ರೂಪಿಸಿದೆ. ಇವುಗಳಲ್ಲಿ ತಲೆದಿಂಬಿನ ಕವರುಗಳು, ಬೆಡ್ ಶೀಟುಗಳು, ಕೈಚೀಲ ಮುಂತಾದವು ಹೆಚ್ಚಾಗಿ ಮಾರಾಟವಾಗುತ್ತಿವೆ.

**ಸಬಲಾ ಸಂಸ್ಥೆಯ ಹಿನ್ನೆಲೆ**

ಮಹಿಳಾ ಸಬಲೀಕರಣದ ಉದ್ದೇಶ ಹೊಂದಿರುವ ಸಬಲಾ ಸಂಸ್ಥೆಯು ಉತ್ತರ ಕರ್ನಾಟಕದ ಬಿಜಾಪುರದಲ್ಲಿ ೧೯೮೬ರಿಂದ ಕಾರ್ಯ ನಿರ್ವಹಿಸುತ್ತಿದೆ. ವಿಧವೆಯರು, ಅನಾಥ ಮಕ್ಕಳು, ಅಂಗವಿಕಲರು ಮತ್ತು ಆರ್ಥಿಕವಾಗಿ ಹಿಂದುಳಿದ ಮಹಿಳೆಯರು ಏಳಿಗೆಗಾಗಿ ಶ್ರಮಿಸುತ್ತಿದೆ. ಆಲಮಟ್ಟಿ ಅಣೆಕಟ್ಟಿನಿಂದ ನಿರಾಶ್ರಿತಗೊಂಡ ಅನೇಕರಿಗೆ ಪುನರ್ವಸತಿ ಕಲ್ಪಿಸುವಲ್ಲಿ ಯಶಸ್ವಿಯಾಗಿದೆ. ಕುಶಲಕರ್ಮಿ ಮಹಿಳೆಯರಿಗೆ ದುಡಿಮೆಯ ಅವಕಾಶಗಳನ್ನು ಒದಗಿಸಿದೆ. ಪ್ರಸ್ತುತ ೩೦೦ ಲಂಬಾಣಿ ಮಹಿಳೆಯರನ್ನು ಮತ್ತು ಕೊಳಗೇರಿ ಮಹಿಳೆಯರನ್ನು ನಿರಂತರವಾಗಿ ಪ್ರೋತ್ಸಾಹಿಸುತ್ತ ಬಂದಿದೆ. ಸಮಾಜದ ನಿರ್ಲಕ್ಷ್ಯಕ್ಕೆ ಒಳಪಟ್ಟ ಮಹಿಳೆಯರು, ಬಡವರು, ನಿರಾಶ್ರಿತರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಪ್ರಯತ್ನಿಸುತ್ತಿದೆ. ಶಿಕ್ಷಣದ ಬಗ್ಗೆ ಕಾಳಜಿ ಹೊಂದಿರುವ ಸಬಲವು, ಅಸಂಘಟಿತ ವಲಯದ ಕಾರ್ಮಿಕರ ಪ್ರಗತಿಗಾಗಿ ಮತ್ತು ಅವರ ಹಕ್ಕುಗಳ ರಕ್ಷಣೆಗಾಗಿ ಹೋರಾಡುತ್ತಿದೆ.

**ಪ್ರಶಸ್ತಿಗಳು**

ಸಬಲಾದ ರೂವಾರಿಯಾದ ಮಲ್ಲಮ್ಮ ಯಳವಾರ ಅವರ ನಿರಂತರ ಶ್ರಮ ಜನರ ಮನ್ನಣೆಯನ್ನು ಗಳಿಸಿದೆ. ಅವರಿಗೆ ಹಲವಾರು ಪ್ರಶಸ್ತಿಗಳು ಲಭಿಸಿವೆ. ಶ್ರೀಲಂಕಾದ ಕೊಲಂಬೊ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಲಭಿಸಿದೆ. ಜಾನಕಿದೇವಿ ಬಜಾಜ್ ಪುರಸ್ಕಾರ, ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿ, ವೀರವನಿತೆ ಪ್ರಶಸ್ತಿ, ಜನಪದ ರತ್ನ ಪ್ರಶಸ್ತಿ, ಉತ್ತಮ ಸಾಧಕಿ ಪ್ರಶಸ್ತಿ ಲಭಿಸಿವೆ. ಮಹಿಳೆಯರ ವಿಶೇಷ ಕಾಳಜಿ ಮತ್ತು ಸ್ತ್ರೀತನದ ಬಗ್ಗೆ ಅತೀವ ಒಳನೋಟವಿರುವುದು ಸಬಲವು ಸಮಾನ - ಮನಸ್ಕರಿರುವ ಸದಸ್ಯರಿಂದ ರಚಿಸಲ್ಪಟ್ಟಿದೆ. ಮಲ್ಲಮ್ಮ ಯಳವಾರರ ನಾಯಕತ್ವದಲ್ಲಿ ಸಮುದಾಯಗಳನ್ನು ಒಗ್ಗೂಡಿಸುವ, ಮಹಿಳೆಯರನ್ನು ಸಬಲೀಕರಿಸುವ, ಸಮಾಜದಲ್ಲಿ ಅರಿವು ಮೂಡಿಸುವ ಕೆಲಸ ಮಾಡುತ್ತಿದೆ.

ಕುಶಲಕರ್ಮಿಗಳನ್ನು ಸಂಘಟಿಸುವುದು, ಕುಶಲ ತರಬೇತಿ, ಮಾರಾಟ ಕಲೆ, ಮಹಿಳಾ ಸ್ವಸಹಾಯ ಸಂಘಗಳ ರಚನೆ, ಸಹಕಾರ ಸಂಘಗಳ ರಚನೆ, ನಿರಾಶ್ರಿತರಿಗೆ ಪುನರ್ವಸತಿ ಮತ್ತು ಕಾನೂನು ಅರಿವು ಕಾರ್ಯಕ್ರಮಗಳನ್ನು ಕೈಗೊಂಡಿದೆ. ಸಬಲಾವು ಸ್ಥಾಪಿಸಿರುವ ಕುಶಲ ಕೇಂದ್ರವು ಕಸೂತಿಯಲ್ಲಿ ಬಳಸಲಾಗುವ ಮಣಿಗಳನ್ನು, ಚಿಪ್ಪುಗಳನ್ನು, ಗಾಜುಗಳನ್ನು ಬಣ್ಣದ ದಾರವನ್ನು ಮತ್ತಿತರೆ ಸಾಮಗ್ರಿಗಳನ್ನು ಮಾರಾಟ ಮಾಡುವುದಲ್ಲದೆ, ಕಸೂತಿ ಉತ್ಪನ್ನಗಳಿಗೆ ಮಾರುಕಟ್ಟೆ ಒದಗಿಸುವ ನಿಟ್ಟಿನಲ್ಲಿ ಶ್ರಮಿಸಿದೆ. ಬಾಲ ಕಾರ್ಮಿಕಪದ್ಧತಿ, ಬಾಲ್ಯವಿವಾಹ, ಮತ್ತಿತರ ಸಾಮಾಜಿಕ ಪಿಡುಗುಗಳನ್ನು ನಿಯಂತ್ರಿಸುವುದರಲ್ಲಿಯೂ ಮಹತ್ವದ ಪಾತ್ರ ವಹಿಸಿದೆ.

ಸ್ವಸಹಾಯ ಗುಂಪುಗಳನ್ನು ರಚಿಸಿ, ಮಹಿಳೆಯರಿಗೆ ಆರ್ಥಿಕವಾಗಿ ಸಬಲರಾಗುವ ಅವಕಾಶಗಳನ್ನು ಒದಗಿಸುವಲ್ಲಿ ಯಶಸ್ವಿಯಾಗಿದೆ. ವಾರಕ್ಕೊಮ್ಮೆ ಸಭೆ, ಚರ್ಚೆ, ಗೋಷ್ಠಿಗಳನ್ನು

# ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು



ಸಬಲಾ ಕೇಂದ್ರದ ಕರಕುಶಲ ವಸ್ತುವೈವಿಧ್ಯಗಳು







ವಿವಿಧ ವಿನ್ಯಾಸದ ವಾಲ್ ಹ್ಯಾಂಗಿಂಗ್‌ಗಳು



## ಸಬಲಾ ಕೇಂದ್ರದ ಕರಕುಶಲ ವಸ್ತುವೈವಿದ್ಯಗಳು

ವಿವಿಧ ವಿನ್ಯಾಸದ ಕೈಚೀಲಗಳು



ಸಬಲಾ ಕೇಂದ್ರದ ಕರಕುಶಲ ವಸ್ತುವೈವಿಧ್ಯಗಳು









ವಿವಿಧ ವಿನ್ಯಾಸದ ಪರ್ಸ್‌ಗಳು





ವಿವಿಧ ವಿನ್ಯಾಸದ ತಲೆದಿಂಬಿನ ಕವಚ



ಸಬಲಾ ಕೇಂದ್ರದ ಕರಕುಶಲ ವಸ್ತುವೈವಿಧ್ಯಗಳು









ಆಧುನಿಕ ವಿನ್ಯಾಸದ ಆಭರಣಗಳು



## ಸಬಲಾ ಕೇಂದ್ರದ ಕರಕುಶಲ ವಸ್ತುವೈವಿಧ್ಯಗಳು

### ಕೆಲಸದಲ್ಲಿ ನಿರತ ಮಹಿಳೆಯರು





### ಸಂಗ್ರಹ ಕೋಣೆ





ನೆರವೇರಿಸಿ, ಅಭಿಪ್ರಾಯ ಸಂಗ್ರಹಿಸಲಾಗುತ್ತದೆ. ಸಾಮಾಜಿಕ ಸಮಸ್ಯೆಗಳು, ಮಹಿಳಾ ಹಕ್ಕುಗಳು, ಮಹಿಳಾ ದೌರ್ಜನ್ಯದ ವಿರುದ್ಧವೂ ಧ್ವನಿ ಎತ್ತಿದೆ. ಸಬಲದ ಹಲವು ಜನಜಾಗೃತಿ ಕಾರ್ಯಕ್ರಮಗಳು ಬಾಲ್ಯವಿವಾಹ, ಬಾಲಕಾರ್ಮಿಕ ಪದ್ಧತಿಗಳನ್ನು ನಿಯಂತ್ರಿಸುವಲ್ಲಿ ಯಶಸ್ವಿಯಾಗಿವೆ.

'ಸಬಲಾ'ದಲ್ಲಿ ಶೇ ೧೦೦ರಷ್ಟು ಕೈಯಿಂದ ಮಾಡಿದ ಪ್ರಾಮಾಣಿಕ ವ್ಯಾಪಾರದ ವಸ್ತುಗಳನ್ನು ಉತ್ಪಾದಿಸಿ, ಪೂರೈಸಿ, ಮಾರಾಟ ಮಾಡುತ್ತೇವೆ ಮತ್ತು ಅವು ಮೂಲ ಲಂಬಾಣಿ ಬುಡಕಟ್ಟಿನ ಕಲಾತ್ಮಕ ವಸ್ತುಗಳಾಗಿದ್ದು, ಸಮಕಾಲೀನ ಅಭಿರುಚಿಗೂ ಹೊಂದಿಕೊಳ್ಳುತ್ತವೆ. ಸ್ತ್ರೀಯರ ಪರ್ಸ್‌ಗಳು, ಕೈಚೀಲಗಳು, ಮಣಿಹಾರಗಳು, ಚರ್ಮದ ಚಪ್ಪಲಿಗಳು, ಜುಬ್ಬಾಗಳು, ಹಾಸಿಗೆ ಹೊದಿಕೆಗಳು, ಸೋಫಾ ಕವರ್‌ಗಳು, ಗೋಡೆ ಅಲಂಕಾರಗಳು ಇತ್ಯಾದಿಗಳ ಪೂರೈಕೆಯಲ್ಲಿ ಸಬಲಾ ನಂಬಿಕಸ್ಥ ಬ್ರಾಂಡ್ ಆಗಿದೆ. ಅವರ ವಸ್ತುಗಳು ವಿಧವೆಯರ, ಬಹಿಷ್ಕೃತರ, ಅಂಗವಿಕಲರ, ಅಬಲೆಯರ ಮತ್ತು ಬುಡಕಟ್ಟು ಮಹಿಳೆಯರಿಂದ ಮಾಡಲ್ಪಟ್ಟಿದ್ದರೂ ಅವರ ಕ್ರಿಯಾಶೀಲತೆಯಿಂದ ಸುಂದರ ರೂಪ ಪಡೆದಿವೆ.

ಲಂಬಾಣಿ ಕಸೂತಿ ಮತ್ತು ಕನ್ನಡಿ ಕಲೆಗಳು ವಿಶಿಷ್ಟವಾಗಿದ್ದು, ಅವುಗಳಿಗೆ ಅಮೇರಿಕಾ, ನೆದರ್‌ಲ್ಯಾಂಡ್, ಸ್ಪೇನ್, ಚಿಲಿ ಮುಂತಾದ ರಾಷ್ಟ್ರಗಳಲ್ಲಿ ಹೆಚ್ಚಿನ ಬೇಡಿಕೆ ಹಾಗೂ ಮಾರುಕಟ್ಟೆ ಇದೆ. ಸಬಲಾ ಈ ಬೇಡಿಕೆಯನ್ನು ಪೂರೈಸಲು ಮತ್ತು ಕಲಾವಿದರ ಮೊಗದಲ್ಲಿ ಮಂದಹಾಸ ಮೂಡಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿದೆ.

**೪.೩. ಸೂರ್ಯ ಲಂಬಾಣಿ-ಬಂಜಾರಾ ಮಹಿಳಾ ಕಲ್ಯಾಣ ಸಂಸ್ಥೆ, ಕಡ್ಡಿರಾಂಪುರ**

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಹಂಪಿಯ ಹತ್ತಿರ ಇರುವ 'ಕಡ್ಡಿರಾಂಪುರ' ಎಂಬ ಊರಲ್ಲಿ ಲಂಬಾಣಿಗರ ಕಸೂತಿ ಕೇಂದ್ರವಿದೆ. ವಿವಿಧ ವಿನ್ಯಾಸದಲ್ಲಿ ಕಸೂತಿ ಕಲೆ ಇಲ್ಲಿ ನಡೆಯುತ್ತದೆ. ೨೦೦೨ರಲ್ಲಿ ಸ್ಥಾಪನೆ ಆದ ಈ ಕೇಂದ್ರವು ೨೦೦೫ರಲ್ಲಿ ಲಂಬಾಣಿಗರ 'ಕಸೂತಿ ಕಲೆ'ಯಲ್ಲಿ ಅನೇಕ ವಸ್ತುಗಳು ಇಲ್ಲಿ ತಯಾರಾಗುತ್ತವೆ. ಲಕ್ಷ್ಮೀಬಾಯಿ ಈ ಕೇಂದ್ರವನ್ನು ನಡೆಸುತ್ತಿದ್ದಾಳೆ. ಫ್ರೆಂಚ್ ವ್ಯಕ್ತಿಯಾದ 'ಜಾನ್ ಡುಕ್ಲೋಸ್' ಎಂಬುವನನ್ನು ಮದುವೆ ಆಗಿದ್ದಾಳೆ. ಅವರ ಸಹಾಯ ಸಹಕಾರದಿಂದ ಇಂದು ಈ ಕೇಂದ್ರವನ್ನು ಸ್ವತಃ ತಾವೇ ಮುನ್ನಡೆಸುತ್ತಿದ್ದಾಳೆ. ವಿದೇಶಿಗನಾದ ಜಾನ್ ಡುಕ್ಲೋಸ್ ಲಂಬಾಣಿಗರ ಉಡುಗೆ-ತೊಡುಗೆಯ ಬಗ್ಗೆ ತುಂಬ ಆಸಕ್ತಿವುಳ್ಳವನಾಗಿದ್ದಾನೆ. ಹೀಗಾಗಿ ಸೂಕ್ಷ್ಮ ಮಾದರಿಯ ಈ ಜನಾಂಗದ ಕಸೂತಿ ಕಲೆಯ ಕುರಿತಾಗಿ ಕೇಂದ್ರವನ್ನೇ ತನ್ನ ಮಡದಿಯ ಉಸ್ತುವಾರಿಯಲ್ಲಿ ಮುನ್ನಡೆಸುತ್ತಿದ್ದಾನೆ. ಸುಮಾರು ೧೯೬೩ರಲ್ಲಿ ಜನಿಸಿದ ಲಕ್ಷ್ಮೀಬಾಯಿಗೆ ಒಟ್ಟು ಮೂರು ಜನ ಮಕ್ಕಳು. ಅವರಲ್ಲಿ ಉಳಿದಿದ್ದು ಕೇವಲ ಒಬ್ಬನೇ ಮಗ. ಅವನ ಹೆಸರು ಶ್ರೀ



## ಸಬಲಾ ಕೇಂದ್ರದ ಕರಕುಶಲ ವಸ್ತುವೈವಿದ್ಯಗಳು



ಕಸೂತಿ ಕಲಾವಿದರೊಂದಿಗೆ ಲಕ್ಷ್ಮೀ ಯಾನ್ ಡುಕ್ಲೋಸ್



ಮೀನಾ ರಾಸ್ತೆ ಹಾಗೂ ಯಾನ್ ಡುಕ್ಲೋಸ್ ಚರ್ಚೆಯಲ್ಲಿ ತೊಡಗಿರುವುದು



ಲಕ್ಷ್ಮೀ ಯಾನ್ ಡುಕ್ಲೋಸ್



ಮೀನಾ ರಾಸ್ತೆ, ಕಾರ್ಲೋಟ್ ಕೌನ್ ಜೋತೆಗೆ ಲಂಬಾಣಿ ಕಸೂತಿ ಕಲಾವಿದೆ

ಸೇವಾಲಾಲ್. ಕೇವಲ ಹತ್ತನೇ ತರಗತಿಯವರೆಗೆ ಓದಿರುವ ಇವರಿಗೆ ಈಗ ಮೂವತ್ತು ವರ್ಷ ವಯಸ್ಸು. ಲಂಬಾಣಿ ಕನ್ನಡ, ಇಂಗ್ಲಿಷ್, ಫ್ರೆಂಚ್ ಭಾಷೆಯನ್ನು ಇವರು ಮಾತನಾಡುವರು. ಅಲ್ಲದೆ, ಇಟಲಿ, ಫ್ರೆಂಚ್, ಲಂಡನ್ ದೇಶಕ್ಕೆ ಹೋಗಿ ಈ ಸಮುದಾಯ ಕುರಿತು ಪ್ರದರ್ಶನ ಮಾಡಿದ್ದಾರೆ. ಅಲ್ಲದೆ ಬೆಂಗಳೂರು, ಪಾಂಡಿಚೇರಿ ಮುಂತಾದ ಕಡೆಗೆ ಇಲ್ಲಿ ತಯಾರಾಗುವ ವಸ್ತುಗಳನ್ನು ಮಾರಾಟ ಮಾಡುವರು. ಇಲ್ಲಿಯ ವಸ್ತುಗಳು ಹೆಚ್ಚು ಜನರಿಗೆ ಬೇಡಿಕೆಯ ವಸ್ತುಗಳಾಗಿವೆ. ಹೀಗಾಗಿ ದೇಶ-ವಿದೇಶಿಯರು ಇಲ್ಲಿ ತಯಾರಾಗುವ ವಸ್ತುಗಳಿಗಾಗಿ ಹೆಚ್ಚು ಬೇಡಿಕೆಯಿದೆ.

**ಸೂರ್ಯ ಲಂಬಾಣಿ ಬಂಜಾರ ಮಹಿಳಾ ಕಲ್ಯಾಣ ಟ್ರಸ್ಟ್**

ಸೂರ್ಯ ಲಂಬಾಣಿ ಬಂಜಾರ ಮಹಿಳಾ ಕಲ್ಯಾಣ ಸಂಸ್ಥೆಯಲ್ಲಿ ಕಸೂತಿ ಚಟುವಟಿಕೆಗಳು ಕಳೆದ ೮ ವರ್ಷಗಳಿಂದ ನಡೆಯುತ್ತಿದ್ದು(೨೦೦೨ ಅಕ್ಟೋಬರ್‌ನಲ್ಲಿ ಪ್ರಾರಂಭ) S.L.B.W.W.T. ದತ್ತಿ ಟ್ರಸ್ಟ್ ನಾಲ್ಕು ವರ್ಷಗಳ ಹಿಂದೆ ಸ್ಥಾಪನೆಯಾಯಿತು. ವೈದ್ಯಕೀಯ ಕೇಂದ್ರ(ಆಸ್ಪತ್ರೆ) ಹಾಗೂ ಮಕ್ಕಳ ವಿದ್ಯಾಭ್ಯಾಸ ಪ್ರಾಯೋಜಕತೆಯನ್ನು ೨೦೦೮ರಿಂದ ಆರಂಭಿಸಲಾಗಿದೆ.

ಆದ್ದರಿಂದ ಈ ಸಂಸ್ಥೆಯ ಸಾಧನೆ, ಯೋಜನೆ ಹಾಗೂ ವೈಫಲ್ಯಗಳನ್ನು ಮೌಲ್ಯಮಾಪನ ಮಾಡಲು ಇದು ಸಕಾಲವಾಗಿದೆ.

**ಕಸೂತಿ ಕೆಲಸ**

ಕೃಷಿ ಮತ್ತು ಕಸೂತಿ ಕೆಲಸ, ವಲಸೆ, ಹಲವು ಕಾರಣಗಳಿಂದಾಗಿ, ನಮ್ಮ ಕೇಂದ್ರ ಕಸೂತಿ ಕೆಲಸಗಾರ್ತಿಯರ ಸಂಖ್ಯೆ ೧೫ರಿಂದ ೨೫ರ ನಡುವೆ ಇದ್ದು, ಉತ್ತಮ ತರಬೇತಿ ಹಾಗೂ ಕೌಶಲ್ಯದ ೧೨ ಕೆಲಸಗಾರ್ತಿಯರು ನಿರಂತರವಾಗಿ ಕೆಲಸ ಮಾಡುತ್ತಿದ್ದಾರೆ. ಅವರಲ್ಲಿ ಕೆಲವರು ಆರಂಭದಿಂದಲೂ(೨೦೦೨) ನಮ್ಮ ಜೊತೆಗಿದ್ದಾರೆ. ಅವರ ಸೃಜನಶೀಲತೆ, ಕ್ರಿಯಾತ್ಮಕತೆ ಮತ್ತು ವೈಯುಕ್ತಿಕ ಸ್ವ-ಅರ್ಹತೆಗಳಿಂದಾಗಿ ಕಸೂತಿಯ ಸಂಕೀರ್ಣ ರೂಪದ ವಸ್ತುಗಳನ್ನು ಸೃಷ್ಟಿಸಲು ಸಾಧ್ಯವಾಗಿದೆ.

ನಾವು ಸಾಮಾನ್ಯವಾಗಿ ಹೊಸ ಹೊಸ ಮಹಿಳೆಯರಿಗೆ ತರಬೇತಿ ನೀಡುತ್ತೇನೆ. ಏಕೆಂದರೆ ನಾವು ಅವರ ಕಸೂತಿ ವಸ್ತುಗಳಿಗೆ ನೀಡುವ ಸೂಕ್ತ ಬೆಲೆಗೆ ಮಾರಾಟವಾದ ಮೇಲೆ ನೀಡುವ ಬೋನಸ್, ವೈದ್ಯಕೀಯ ಸೌಲಭ್ಯ, ಬಡ್ಡಿರಹಿತ ಸಾಲ ಹಾಗೂ ಅವರ ಮಕ್ಕಳಿಗೆ ನೀಡುವ ಪ್ರಾಯೋಜಿತ ಶಾಲಾ ಶಿಕ್ಷಣದಿಂದ ಆಕರ್ಷಿತರಾಗಿ ಹೊಸ ಕಸೂತಿಗಾರ್ತಿಯರು ನಮ್ಮಲ್ಲಿಗೆ ಬರುತ್ತಿರುತ್ತಾರೆ.

ಬಂಜಾರಾ ಕಸೂತಿ ಮತ್ತು ಸಾಂಸ್ಕೃತಿಕ ಕೇಂದ್ರಕ್ಕೆ ಬುನಾದಿ ಹಾಕಲಾಗಿದ್ದು, ನೆಲಮಹಡಿ ಸಿದ್ಧವಾಗಿದೆ. ಈ ಕೇಂದ್ರ ಕೇವಲ ಉತ್ಪಾದನೆ ಮಾತ್ರವಲ್ಲದೆ ಬಂಜಾರ ಸಂಸ್ಕೃತಿಗೆ

ಸಂಬಂಧಿಸಿದ ಕಲೆ, ಚಿತ್ರಕಲೆ, ಸಾಕ್ಷ್ಯಚಿತ್ರ ಪ್ರದರ್ಶಿಸುವ ಕಲಾಕೇಂದ್ರ ಅಥವಾ ಗ್ಯಾಲರಿಯಾಗಿಯೂ ಕೆಲಸ ಮಾಡಲಿದೆ.

**ಬಂಜಾರ ಕಸೂತಿ ಮತ್ತು ಸಾಂಸ್ಕೃತಿಕ ಕೇಂದ್ರ**

ನಮ್ಮ ಉದ್ದೇಶಿತ ಬಂಜಾರ ಕಸೂತಿ ಮತ್ತು ಸಾಂಸ್ಕೃತಿಕ ಕೇಂದ್ರ ಸಮುಚ್ಛಯವು ಹಂಪಿಯ ಪುರಾತನ ಸ್ಮಾರಕಗಳ ಗಡಿಯಲ್ಲಿರುವುದರಿಂದ 'ಹಂಪಿ ಅಭಿವೃದ್ಧಿ ಪ್ರಾಧಿಕಾರ'ದಿಂದ ಒಪ್ಪಿಗೆ ಪಡೆಯಲಿದ್ದು ಯುವ ಪೀಳಿಗೆಯ ಬಂಜಾರ ಮಹಿಳೆಯರಿಗೆ ಕಸೂತಿ ತರಬೇತಿ ನೀಡುವ ಸಾಮಾಜಿಕ ಯೋಜನೆಯ ಕ್ಷೇತ್ರವಾಗಿಯೂ ಈ ಕೇಂದ್ರವನ್ನು ಪರಿಗಣಿಸಲು ಒಪ್ಪಿಕೊಂಡಿದ್ದಾರೆ. ಇಲ್ಲಿಯವರೆಗೆ ಈ ಬೃಹತ್ ಸಮುಚ್ಚಯದ ಬುನಾದಿ ಕಾರ್ಯಪೂರ್ಣ ವಾಗಿದ್ದು 'ಸೆಪ್ಟಿಕ್‌ಟ್ಯಾಂಕ್' ಹಾಗೂ ಆವರಣದೊಳಗಿನ ದೊಡ್ಡ ನೀರಿನ ಕೊಳದ ಕಾರ್ಯಗಳು ಪೂರ್ಣಗೊಂಡಿವೆ. ಅಲ್ಲದೆ ಸುತ್ತಲಿನ ಜಾಗದಲ್ಲಿ ವಿವಿಧ ಬಗೆಯ ಸಿಲ್ವರ್ ಓಕ್, ತಾಳೆ, ರೈನ್‌ಟ್ರೀ, ಫ್ರಾಂಗಿಪಾನಿಗಳಂತಹ ಗಿಡಗಳಿಂದ ಸುಂದರವಾದ ತೋಟ ರೂಪುಗೊಳ್ಳುತ್ತಿದೆ.

ನಮ್ಮ ಬಳಿ 'ಫ್ರಾನ್ಸ್‌ನ ನಮಸ್ತೆ' ಸರ್ಕಾರೇತರ ಸಂಸ್ಥೆ(ಎನ್‌ಜಿಓ) ಮೂಲಕ ಸಫ್ರಾನ್ ಫೌಂಡೇಶನ್‌ನ ಬೆಂಗಳೂರು ಪ್ರತಿನಿಧಿ ಶ್ರೀಮತಿ ನಾಡಿಯೂ ಮ್ಯಾನ್ಸಿಯೋನ್ ಅವರು ನೀಡಿದ ೬೦೦೦ ಯೂರೋಗಳ ದೇಣಿಗೆ ಇದ್ದು, ಕಟ್ಟಡ ಪೂರ್ಣವಾದ ನಂತರ ಯೋಜನೆಗೆ ಅವಶ್ಯವಾದ ಸಲಕರಣೆಗಳನ್ನು ಕೊಳ್ಳಲು ಇದನ್ನು ಬಳಸಲಾಗುವುದು.

**ಕಸೂತಿ ಚಟುವಟಿಕೆ**

ನಮ್ಮ ಕೇಂದ್ರದ ಪ್ರಮುಖ ಉತ್ಪನ್ನಗಳೆಂದರೆ ಹತ್ತಿ, ಲಿನೆನ್, ವಾಯಿಲ್, ಪಾಪ್ಲಿನ್, ಗಿಡಮೂಲಿಕೆಗಳನ್ನು ಕೈಯಿಂದ ತಯಾರಿಸಿದ ಗುಜರಾತಿ ಬಟ್ಟೆಗಳನ್ನು ಬಳಸಿ ಮಾಡಿದ ಕೈಚೀಲಗಳು, ಕುಶನ್ ಕವರ್‌ಗಳು ಹಾಗೂ ದಟ್ಟವಾಗಿ ಕಸೂತಿ ಮಾಡಿದ ಅಲಂಕಾರಿಕ ವಸ್ತುಗಳು ಇತ್ಯಾದಿ. ನಾಲ್ಕು ರೀತಿಯ ಹೊಲಿಗೆಗಳನ್ನು ಬಳಸುತ್ತಿದ್ದು ಉತ್ತಮವಾದ 'ಆ್ಯಂಕರ್' ಬ್ರಾಂಡ್‌ನ ದಾರವನ್ನು ಉಪಯೋಗಿಸಲಾಗುತ್ತಿದೆ. ಅಲ್ಲದೆ ಬಾಯಿಂದ ಊದಿ ಮಾಡಿದ ಸತುವಿನ ರೂಪವುಳ್ಳ ಸಾಂಪ್ರದಾಯಿಕ ಕನ್ನಡಿಗಳನ್ನೇ ಬಳಸಲಾಗುತ್ತಿದೆ. ಕಸೂತಿ ನಮೂನೆಗಳು ಬಂಜಾರಾ ಸಂಪ್ರದಾಯವನ್ನೇ ಹೊಂದಿದ್ದು, ಪ್ರಾದೇಶಿಕವಾಗಿ ಅಲ್ಪ ಸ್ವಲ್ಪ ಬದಲಾವಣೆಕ್ಕೊಳಪಟ್ಟಿದೆ.

ಕಸೂತಿ ಮಾಡುವ ಪ್ರತಿ ಕಲಾವಿದರೂ ದಿನಕ್ಕೆ ೪ ಗಂಟೆಯಂತೆ ದುಡಿದು ಮಾಸಿಕ ರೂ. ೩೦೦೦/- ಗಳಿಸುತ್ತಾರೆ. ಅಲ್ಲದೆ ೨೫% ಬೋನಸ್ ಹಣವನ್ನು ಮಾರಾಟದ ನಂತರ ಅವರಲ್ಲೇ ಹಂಚಲಾಗುತ್ತದೆ. ಇನ್ನೂ ೨೫% ಹಣವನ್ನು ಆಸ್ಪತ್ರೆ, ಆರೋಗ್ಯಕ್ಕೆ ವೆಚ್ಚ ಮಾಡ

ಲಾಗುತ್ತಿದ್ದು, ಉಳಿದ ೫೦% ಹಣದಿಂದ ಕಸೂತಿಗೆ ಬೇಕಾದ ಬಟ್ಟೆ, ದಾರ ಮುಂತಾದ ಕಚ್ಚಾ ಸರಕುಗಳನ್ನು ಕೊಳ್ಳುತ್ತಾರೆ.

ಪ್ರತಿ ವರ್ಷದ ನವೆಂಬರ್‌ನಲ್ಲಿ ಬೆಂಗಳೂರಿನ ವಿಂಡ್ಸರ್ ಮ್ಯಾನರ್ ಹೋಟೆಲ್ ಎದುರಿಗಿನ 'ರೈನ್ ಟ್ರೀ'ಯಲ್ಲಿ ೨ ದಿನದ ಮಾರಾಟ ಮತ್ತು ಪ್ರದರ್ಶನ ಏರ್ಪಡಿಸಲಾಗುತ್ತದೆ. ಇದಲ್ಲದೆ ಬೆಂಗಳೂರು ಹಾಗೂ ಪಾಂಡಿಚೇರಿಯ ಹಲವಾರು ಮಳಿಗೆಗಳಲ್ಲಿ ಇವು ಮಾರಾಟವಾಗುತ್ತವೆ. ಹಂಪಿಯ ಕಡ್ಡಿರಾಂಪುರದ ಕೇಂದ್ರದಲ್ಲಿ ವರ್ಷ ಪೂರ್ತಿ ಇವುಗಳ ಮಾರಾಟ ನಡೆಯುತಿದ್ದು, ಪ್ರವಾಸಿಗರು ಇಲ್ಲಿಗೆ ಬಂದು ಈ ಕಲಾಕೃತಿಗಳನ್ನು ಕೊಳ್ಳುತ್ತಾರೆ.

ಈ ಕೇಂದ್ರದ ಚಟುವಟಿಕೆಗಳು ಕಡ್ಡಿರಾಂಪುರದ ಸುತ್ತಲಿನ ಸುಮಾರು ೬೦೦ ಬಂಜಾರ ನಿವಾಸಿಗಳ ಕಸೂತಿ ಕಲೆಯನ್ನೇ ಕೇಂದ್ರೀಕರಿಸಿದೆ. ಕಸೂತಿಗಾರ್ತಿಯರು ಅನಕ್ಷರಸ್ಥರಾಗಿದ್ದು, ಅವರ ನಡುವಿನ ಪರಿಸ್ಪರ ಪೈಪೋಟಿ ಹಾಗೂ ಅಸೂಯೆಯಿಂದಾಗಿ ಅವರಲ್ಲೇ ಯಾರನ್ನಾದರೂ ಉನ್ನತ ಹುದ್ದೆಗೆ ನೇಮಿಸುವುದಕ್ಕೆ ಕಷ್ಟವಾಗಿದೆ. ದಕ್ಷ ಮತ್ತು ತರಬೇತಿ ಹೊಂದಿದ ಯುವತಿಯರು ನಗರಗಳಿಗೆ ಪಲಾಯನ ಮಾಡುತ್ತಿದ್ದು, ಹಳ್ಳಿಗಳಿಗೆ ಬಂದು ಕೆಲಸ ಮಾಡಲು ಇಷ್ಟಪಡುವುದಿಲ್ಲ. ಆದ್ದರಿಂದ ಇದೇ ಸಮುದಾಯಕ್ಕೆ ಸೇರಿದ ಸ್ವಯಂ ಸೇವಕರನ್ನು ಹೊರಗಿನಿಂದ ಕರೆತಂದು ನೇಮಿಸಿಕೊಳ್ಳಲಾಗುತ್ತಿದೆ. ಇದರಿಂದ ಸ್ಥಳೀಯ ಲಂಬಾಣಿ ಮಹಿಳೆಯರ ಜೊತೆ ಸಂವಹನ ಮಾಡಲು ಅನುಕೂಲವಾಗುತ್ತದೆ.

ವಿವಿಧ ಕೆಲಸ ಮತ್ತು ಕಾರ್ಯಗಳ ಒತ್ತಡ ಮತ್ತು ಸಮಯದ ಅಭಾವದಿಂದಾಗಿ ಕೇಂದ್ರದ ಚಟುವಟಿಕೆಗಳು ಕೆಲವರ್ಷಗಳಿಂದ ಬಂಜಾರ ಕಸೂತಿ ಕೆಲಸಗಳಿಗೆ ಸೀಮಿತ ಗೊಂಡಿವೆ. ಬೇರೆ ಬೇರೆ ಬುಡಕಟ್ಟುಗಳನ್ನೂ, ಅವರ ಕಲೆಗಳನ್ನೂ ಬಳಸಿಕೊಳ್ಳುವ, ಹೊಸ ಮಾರಾಟ ಮಳಿಗೆಗಳನ್ನು ಪ್ರಾರಂಭಿಸಿ ಗುಜರಾತ್ ಮಾದರಿಯ ಸಮಗ್ರ ಅಭಿವೃದ್ಧಿ ಸಾಧಿಸಲು ಇನ್ನೂ ಸಾಧ್ಯವಾಗಿಲ್ಲ. ಇದರಿಂದಾಗಿ ಉತ್ಪಾದನೆಯನ್ನು ಹೆಚ್ಚಿಸಲು ಇರುವ ಏಕೈಕ ಮಾರ್ಗವೆಂದರೆ ಹೊಸಬರಿಗೆ ತಿಂಗಳುಗಟ್ಟಲೆ ತರಬೇತಿ ನೀಡಿ ಅವರನ್ನು ಉದ್ಯೋಗಕ್ಕೆ ಸೇರಿಸಿಕೊಳ್ಳುವುದಾಗಿದೆ.

ಬೆಂಗಳೂರಿನ ಡೆನ್ನಿಸ್ ಅಂಡ್ ಫ್ಲಾಕಿನ್ಸ್ ಜೆರ್ಮ್ಸನ್ ಒಡೆತನದ ಬರ್ಡಿ(BIRDY) ಗಾರ್ಮೆಂಟ್ ಫ್ಯಾಕ್ಟರಿಯ ಉದಾರ ಸಹಾಯ ಹಾಗೂ ಕ್ರಿಯಾಶೀಲ ಪಾಲ್ಗುಗೊಳ್ಳುವಿಕೆ ಯಿಂದಾಗಿ ಹೊಸ ಹೊಸ ವಿನ್ಯಾಸಗಳನ್ನು ಕಸೂತಿಯಲ್ಲಿ ಆವಿಷ್ಕರಿಸಲು ಹಾಗೂ ಮಾರಾಟ ಮಾಡಲು ಸಾಧ್ಯವಾಗಿದೆ.

ಸೂಕ್ಷ್ಮ ಕಸೂತಿಯ ಬಂಜಾರ ಕಸೂತಿ ವಸ್ತುಗಳಿಗೆ ಹೆಚ್ಚುತ್ತಿರುವ ಬೇಡಿಕೆ ಹಾಗೂ ಉತ್ಪಾದನೆಗಳು ನಮ್ಮಲ್ಲಿ ನವವಸಂತವನ್ನು, ಕ್ರಿಯಾಶೀಲತೆಯನ್ನು ಹೆಚ್ಚಿಸಿವೆ. ಭಾರತದ

ಬಂಜಾರ ಸಮುದಾಯದ ಸಾಂಪ್ರದಾಯಿಕ ಕಲಾ ಮಾದರಿಗಳನ್ನು ಅಂತರ್ಜಾಲ ಸೇರಿದಂತೆ ವಿವಿಧ ಮೂಲಗಳಿಂದ ಸಂಗ್ರಹಿಸಿ ಹೊಸ ಹೊಸ ನಮೂನೆಗಳನ್ನು ಸೃಷ್ಟಿಸಲಾಗುತ್ತದೆ. ಪ್ರತಿಯೊಂದು ಕಲಾಕೃತಿಯೂ ಆ ಜನರ ಅದ್ಭುತ ಕ್ರಿಯಾತ್ಮಕತೆ, ಬಣ್ಣಗಳ ಬಗೆಗಿನ ಅದಮ್ಯ ಪ್ರೇಮ ಮತ್ತು ಕೆಲಸಗಾರರ ಕೌಶಲ್ಯವನ್ನು ಬಿಂಬಿಸುತ್ತವೆ. ಕೆಲವೊಂದು ಆಯ್ದು ಸೂಕ್ಷ್ಮ ಮಾದರಿಗಳನ್ನು ಕುಶಲ ಕೆಲಸಗಾರ್ತಿಯರಿಂದ ದೊಡ್ಡ ಗಾತ್ರದಲ್ಲಿ ಸಿದ್ಧಪಡಿಸಿ ನಮ್ಮ ಅತ್ಯುತ್ತಮ ಕಲಾಕೃತಿಗಳೆಂದು ಪ್ರದರ್ಶನ ಮಾಡಲಾಗುತ್ತಿದೆ.

ಕೆನಡಾದ ವ್ಯಾಂಕೂವರ್ ನಗರದ ಮೈವಾ ಹ್ಯಾಂಡ್ ಪ್ರಿಂಟ್ಸ್‌ನ ಕಾರ್ಲೋಟ್ ಕೌನ್(Charlotte Kwon) ಅವರು ಕಳೆದ ಫೆಬ್ರವರಿಯಲ್ಲಿ ಈ ಕೇಂದ್ರಕ್ಕೆ ಎರಡನೇ ಬಾರಿ ಭೇಟಿ ಕೊಟ್ಟಿದ್ದರು. ಅವರು ನಮ್ಮಿಂದ ಕೊಂಡುಕೊಂಡ ದೊಡ್ಡ ಪ್ರಮಾಣದ ವಸ್ತುಗಳು ಹಾಗೂ ಅವರು ನೀಡಿದ ಉತ್ತೇಜನ ನಮ್ಮಲ್ಲಿದ್ದ ಏಕಾಂಗಿ ಹೋರಾಟದ ಅನಾಥಪ್ರಜ್ಞೆಯನ್ನು ದೂರವಾಗಿಸಿತಲ್ಲದೆ ನಮ್ಮ ಭಾರತದ ಯಾವುದೋ ಮೂಲೆಯಲ್ಲಿನ ಪರಿಶ್ರಮ ನಿರರ್ಥಕವಲ್ಲ ಎನಿಸಿ ಉತ್ಪಾದನೆಗೆ ಉತ್ತೇಜನ ನೀಡಿದೆ. ವ್ಯಾಂಕೂವರ್‌ನಲ್ಲಿ ಬಂಜಾರ ಕಸೂತಿ ಕಲೆ ದೊಡ್ಡ ಪ್ರದರ್ಶನವನ್ನೂ ಆಯೋಜಿಸಲು ಅವರು ಇಚ್ಛಿಸಿದ್ದಾರೆ. ಅವರ ಆಗಮನದ ನಂತರ ಪ್ರಮುಖ ಗ್ರಾಹಕರಿಂದ ಹೆಚ್ಚಿನ ಬೇಡಿಕೆ ಉಂಟಾಗಿದ್ದು, ಅದನ್ನು ಪೂರೈಸಲು ಸಾಫ್ರಾನ್(SAFRAN) ನಿಧಿಯಿಂದ ಹಣವನ್ನು ಬಳಸಿ ಹೊಸ ಯುವತಿಯರಿಗೆ ಕಡ್ಡಿರಾಂಪುರ ಹಾಗೂ ಸುತ್ತಲಿನ ಲಂಬಾಣಿ ತಾಂಡಾಗಳಲ್ಲಿ ತರಬೇತಿ ನೀಡಿದ್ದರಿಂದ ನಮ್ಮಲ್ಲಿ ಕೆಲಸ ಮಾಡುವವರ ಸಂಖ್ಯೆ ನಲವತ್ತಕ್ಕೇರಿದೆ. ಅದರಲ್ಲಿನ ಶೇಕಡಾ ೨೦%ರಷ್ಟು ಮಹಿಳೆಯರು ನಮ್ಮ ಹೊಸ ತಾಂಡಕ್ಕೆ ಅನುಮೋದಿಸಲ್ಪಟ್ಟಿದ್ದಾರೆ.

ಕಳೆದೆರಡು ವರ್ಷಗಳಿಂದ ಆಹಾರ ಹಾಗೂ ದಿನಬಳಕೆಯ ಸರಕುಗಳ ಬೇಡಿಕೆ ದುಪ್ಪಟ್ಟಾಗಿರುವುದರಿಂದ ನಮ್ಮಲ್ಲಿನ ಕುಶಲಕರ್ಮಿಗಳಿಗೆ ಹೆಚ್ಚಿನ ವೇತನ ನೀಡಬೇಕಾದ ಅವಶ್ಯಕತೆ ಇದೆ. ಇದಕ್ಕಾಗಿ ಕಚ್ಚಾ ರೇಷ್ಮೆ, ವೆಲ್ವೆಟ್(ಮರಮಲ್), ಲಿನನ್, ಕಾಟನ್ ಮುಂತಾದ ಉತ್ಕೃಷ್ಟ ವಸ್ತುಗಳನ್ನು ಬಳಸಿ ಅಂಚುಗಳನ್ನು ಹೊಲಿದು ಕೌಶಲ್ಯಪೂರ್ಣ, ಅಪೂರ್ವ ಮತ್ತು ವಿರಳವಾದ ಕಲಾಕೃತಿಗಳನ್ನು ರಚಿಸಿ ಹೆಚ್ಚಿನ ಬೆಲೆಗೆ ಮಾಡಲಾಗುತ್ತಿದೆ.

ಇಲ್ಲಿಯ ಹೆಚ್ಚಿನ ಉತ್ಪನ್ನಗಳು ಬೆಂಗಳೂರು ಹಾಗೂ ಪಾಂಡಿಚೇರಿ ಕೇಂದ್ರಗಳಲ್ಲಿ ಮಾರಾಟವಾಗುತ್ತಿದ್ದು, ಕುಶನ್ ಕವರ್‌ಗಳು ವಿದೇಶಿ ಗ್ರಾಹಕರಿಗೆ ಹೆಚ್ಚು ಪ್ರಿಯವಾಗಿವೆ. ಇತ್ತೀಚೆಗೆ ೧ರಿಂದ ೮ ವರ್ಷದ ಮಕ್ಕಳ ಉಡುಪುಗಳನ್ನು ತಯಾರಿಸುತ್ತಿದ್ದು, ಸಸ್ಯಜನ್ಯ ಬಣ್ಣಗಳನ್ನು ಬಳಸಿ ಹಸ್ತ ಮುದ್ರಣ ಹಾಗೂ ಕಸೂತಿಯ ಮಾದರಿಗಳನ್ನು ಇದರಲ್ಲಿ ಬಳಸಲಾಗುತ್ತಿದೆ.

ಜಾನ್ ಮತ್ತು ಲಕ್ಷ್ಮಿಯವರು ತಮ್ಮ ಕಲೆಯನ್ನು ಕೆನಡಾದ ವ್ಯಾಂಕೂನರ್‌ನ ಮೈವಾ ಹ್ಯಾಂಡ್ ಪ್ರಿಂಟ್ಸ್‌ನಲ್ಲಿ ವಿದೇಶಿಯರಿಗೆ ತರಬೇತಿ ನೀಡುವ ಮೂಲಕ ತಮ್ಮ ಕಲೆಯ

ಸೀಮೋಲ್ಲಂಘನ ಮಾಡಿದ ಕಥೆ ಎಲ್ಲರಿಗೂ ಸ್ಫೂರ್ತಿದಾಯಕ. ಗಾಢ ಬಣ್ಣಗಳು, ಆಕರ್ಷಕ ಮಾದರಿಗಳು, ಡಿಸೈಜನ್‌ಗಳು, ಕನ್ನಡಿಗಳು, ಕವಡೆಗಳು, ಸೀಸ ಅಥವಾ ಬೆಳ್ಳಿಯ ಅಲಂಕಾರಗಳು, ವಿಶಿಷ್ಟ ಹೊಲಿಗೆಗಳು ಲಂಬಾಣಿ ಕಲೆಗೆ ವೈಶಿಷ್ಟ್ಯತೆ ಹಾಗೂ ಮೆರಗನ್ನು ನೀಡಿದ್ದು ಇದನ್ನು ವ್ಯಾಂಕೂನರ್‌ನಲ್ಲಿ ನಡೆದ ಎರಡು ದಿನದ ಶಿಬಿರದಲ್ಲಿ ಜಾನ್ ಮತ್ತು ಲಕ್ಷ್ಮಿ ತರಬೇತಿ ನೀಡಿದರು.

ಹೀಗೆ ತಮ್ಮ ಸಂಸ್ಥೆಯ ಮೂಲಕ ದೇಶಿ ಪರಂಪರೆಯನ್ನು ರಕ್ಷಣೆ ಮಾಡುತ್ತಿರುವುದಲ್ಲದೆ ದೇಶ ವಿದೇಶಗಳಲ್ಲಿ ಅವುಗಳನ್ನು ಪ್ರಚಾರ ಮಾಡುತ್ತಿರುವ ಕಾರ್ಯ ಶ್ಲಾಘನೀಯ.

**ಕಸೂತಿ ಕಲಾವಿದರ ಬಗೆಗೆ ಕೇಂದ್ರ ಹೊಂದಿರುವ ಧೋರಣೆ**

* ಸಾಮಾಜಿಕ ಪೂರ್ವಗ್ರಹಗಳ ನಿವಾರಣೆಯಲ್ಲಿ ತೊಡಗುವುದು(ಲಿಂಗಭೇದ, ಜಾತೀಯತೆ, ಧಾರ್ಮಿಕ ಮತ್ತು ವೃತ್ತಿ ಸಂಬಂಧಿತ).
* ಕಲಾವಿದರಿಗೆ ತಮ್ಮ ಸ್ವಂತ ಪ್ರತಿಭೆಯನ್ನು ಬಳಸಿಕೊಳ್ಳಲು ಸಹಾಯ ಮಾಡುವುದು.
* ಕಲೆಯ ಮೂಲಕ ಉದ್ಯೋಗ, ವರಮಾನ ಮತ್ತು ಆರ್ಥಿಕ ಸ್ವಾವಲಂಬನೆ ಸಾಧಿಸುವುದು.
* ಬಡತನದ ವಿಷವೃತ್ತವನ್ನು ಛೇದಿಸುವುದು.
* ಬದುಕಿನ ವಿವಿಧ ಆಯಾಮಗಳಾದ ಶಿಕ್ಷಣ, ಆರೋಗ್ಯ ಹಾಗೂ ಪೌಷ್ಟಿಕತೆ ಸುಧಾರಣೆ ಮಾಡಿ ಕೊಡುವುದು.
* ಈ ದಿಶೆಯಲ್ಲಿ ಕಲಾವಿದರಿಗೆ ಸಹಾಯ ನೀಡಲು ಎನ್.ಜಿ.ಓ.ಗಳ ಶಕ್ತಿ ಸಂವರ್ಧನೆ.
* ಭಾರತದ ನಗರಗಳಲ್ಲಿ ಕರಕುಶಲ ಸರಕುಗಳಿಗೆ ಮಾರುಕಟ್ಟೆ ಸೃಷ್ಟಿಸಲು ನವೀನ ಮಾದರಿ, ವೈವಿಧ್ಯತೆ ಮತ್ತು ಪೈಪೋಟಿ ಉತ್ಪನ್ನಗಳನ್ನು ಸೃಷ್ಟಿಸುವುದು, ಸೂಕ್ತ ಪ್ರಚಾರ ನೀಡುವುದು ಮತ್ತು ನಗರ ಕೇಂದ್ರಗಳಲ್ಲಿ ಕರಕುಶಲ ವಸ್ತುಗಳ ಪ್ರದರ್ಶನ ಏರ್ಪಡಿಸುವುದು ಇತ್ಯಾದಿ ರೀತಿಯಲ್ಲಿ ಪ್ರಯತ್ನಿಸುವುದು.
* ಭಾರತೀಯ ಕರಕುಶಲತೆ ಮತ್ತು ಅದನ್ನು ಉಪಯೋಗಿಸುತ್ತಿರುವ ಲಕ್ಷಾಂತರ ಕುಶಲಕರ್ಮಿಗಳು ಪಾರಂಪರಿಕ ಜ್ಞಾನ ಹಾಗೂ ದೇಶೀಯ ತಂತ್ರಜ್ಞಾನದ ಪ್ರಮುಖ ಸಂಪನ್ಮೂಲಗಳಾಗಿವೆ. ಹೀಗಾಗಿ ಲಂಬಾಣಿ ಕರಕುಶಲ ಕಲೆಯ ಮಹತ್ವದ ಕಲೆಯಾಗಿ ಮಾರ್ಪಟ್ಟಿದೆ.
* ಈ ಸಂಪನ್ಮೂಲವನ್ನು ಶಿಕ್ಷಣದ ವ್ಯವಸ್ಥೆಯ ಮೌಲ್ಯವರ್ಧನೆಗೆ ಬಳಸಿಕೊಳ್ಳಬಹುದು.

* ಕುಶಲ ಕಲೆಗಳನ್ನು ವೃತ್ತಿಪರ, ಸೃಜನಾತ್ಮಕ ಮತ್ತು ಸೈದ್ಧಾಂತಿಕ ಸಮಾಜ ವಿಜ್ಞಾನವಾಗಿ ಶಿಕ್ಷಣದಲ್ಲಿ ಬಳಸಬಹುದು.

* ಕುಶಲಕಲೆಗಳು ಭಾರತೀಯ ಸಂಸ್ಕೃತಿ, ಸೌಂದರ್ಯಪ್ರಜ್ಞೆ ಹಾಗೂ ಆರ್ಥಿಕತೆಯ ಸಮಗ್ರ ಭಾಗವಾಗಿರುವುದರಿಂದ ಇದೊಂದೇ ವಿಷಯವನ್ನು ಕಲಿಸುವ ಬದಲು ಇದನ್ನು ಇತಿಹಾಸ, ಸಮಾಜ, ಪರಿಸರ ಅಧ್ಯಯನ, ಭೂಗೋಳ, ಕಲೆ, ಅರ್ಥಶಾಸ್ತ್ರ ಇತ್ಯಾದಿ ವಿಷಯಗಳೊಡನೆ ಸಂಯೋಜನೆ ಬೋಧಿಸುವುದು ಅವಶ್ಯಕವಾಗಿದೆ.

ನಮ್ಮ ಒಟ್ಟಾರೆ ದೃಷ್ಟಿಕೋನವೆಂದರೆ ಪರಿಪೂರ್ಣ ಹಾಗೂ ಸಮಗ್ರ ವಿದ್ಯಾಭ್ಯಾಸವನ್ನು ಇಂದಿನ ಭಾರತದ ಯುವಕರಿಗೆ ನೀಡುವ ಮೂಲಕ ಜಾಗತಿಕ ಹಾಗೂ ತೀವ್ರ ಅಭಿವೃದ್ಧಿ ಹೊಂದಿರುತ್ತಿರುವ ಸಮಾಜದಲ್ಲಿ ಕೂಡ ತಮ್ಮ ಸ್ವಂತ ಸಾಂಸ್ಕೃತಿಕ ಆಸ್ತಿಗಳು, ಸಂಪ್ರದಾಯ ಮತ್ತು ಮೌಲ್ಯಗಳನ್ನು ಕಾಪಾಡಿಕೊಳ್ಳಲು ನೆರವಾಗುವುದು. ನಾವು ಕಲೆಯ ಸೃಜನಾತ್ಮಕ ಅಂಶಗಳಾದ ಸಂಸ್ಕೃತಿ, ಸಮಾಜದ ಕ್ರಿಯಾಶೀಲ ಅಂಗಗಳನ್ನು ವಿದ್ಯೆಯ ಸೈದ್ಧಾಂತಿಕ ಹಾಗೂ ಪ್ರಾಯೋಗಿಕ ವಿಧಾನಗಳಲ್ಲಿ ನೆಲೆಗೊಳಿಸುವ ಮೂಲಕ ಕಲೆ ಒಂದು ವೃತ್ತಿಪರ ಕೌಶಲ್ಯವಾಗಿದ್ದು, ಆ ಮೂಲಕ ಉದ್ಯೋಗಾವಕಾಶ ಪಡೆಯುವಂತೆ ಮಾಡುವುದಾಗಿದೆ.

ಇಲ್ಲಿನ ಕರಕುಶಲ ಕೇಂದ್ರಗಳನ್ನು ನೋಡುತ್ತಿದ್ದರೆ ಲಂಬಾಣಿ ಸಮುದಾಯಕ್ಕೆ ಕಿಂಚಿತ್ತು ಸಹಾಯವಾಗಿದೆ ಅನ್ನಿಸುತ್ತದೆ. ಆದರೆ ಇದರ ಹೆಚ್ಚುವರಿ ಲಾಭವನ್ನು ಈ ಕರಕುಶಲ ಕೇಂದ್ರಗಳ ಮುಖ್ಯಸ್ಥರು ಪಡೆಯುವುದು. ಇವುಗಳ ಅಲ್ಪಪ್ರಮಾಣದ ಲಾಭ ಮಾತ್ರ ಕೂಲಿ, ಸಂಬಳದ ರೂಪದಲ್ಲಿ ಸಂದಾಯವಾಗುವುದು ಗೊತ್ತಾಗುತ್ತಿದೆ. ಇದನ್ನು ನೋಡಿದರೆ, ಇಲ್ಲಿ ಈ ಖಾಸಗಿ ಸಂಸ್ಥೆಗಳಿಗೆ ಲಂಬಾಣಿ ಸಮುದಾಯವು ಒಂದು ಬಂಡವಾಳವಾಗಿ ಬಳಕೆ ಯಾಗುತ್ತಿದೆಯೇ ಅನ್ನಿಸುತ್ತದೆ.

ಹಾಗೆ ನೋಡಿದರೆ ದೇಸಿ ವಸ್ತು ಪರಿಕರಗಳು ಇಂದು ದೊಡ್ಡ ದೊಡ್ಡ ಮಾಲ್‌ಗಳಲ್ಲಿಯೂ ಸಿಗುತ್ತವೆ. ಆದರೆ ಆ ವಸ್ತುಗಳ ನಿಜ ಬೆಲೆ ಆಯಾ ಸಮುದಾಯಗಳಿಗೆ ಸಿಗುತ್ತದೆಯೋ ಎನ್ನುವ ಪ್ರಶ್ನೆ ನಮ್ಮನ್ನು ಕಾಡುತ್ತದೆ. ಜಾಗತೀಕರಣದ ಈ ಹೊತ್ತಲ್ಲಿ ಸಮುದಾಯಗಳ ಜ್ಞಾನ ಕೌಶಲ್ಯ ಕೂಡ ಸರಕಾಗಿರುವುದನ್ನು ನೋಡುತ್ತೇವೆ. ಅಂತೆಯೇ ಲಂಬಾಣಿ ಸಮುದಾಯದ ಕಲೆಯೂ ಕೂಡ ಹೀಗೆ ಎನ್.ಜಿ.ಓ.ಗಳಿಗೆ ಬಂಡವಾಳವಾಗಿ ಬಳಕೆಯಾಗಿರುವುದನ್ನು ನೋಡಬಹುದು.

ಹಾಗಾದರೆ ಖಾಸಗಿ ಸಂಸ್ಥೆಗಳಿಗಿಂತ ಸರ್ಕಾರದ್ದೇ ಸಂಸ್ಥೆಗಳು ಇದ್ದರೆ, ಈ ಸಮುದಾಯ ಗಳಿಗೆ ಲಾಭವಿದೆಯೇ ಎನ್ನುವ ಪ್ರಶ್ನೆಯೊಂದು ಎದುರಾಗುತ್ತದೆ. ಹಾಗೆ ಸರಕಾರಿ ಸಂಸ್ಥೆ

ಸ್ಥಾಪನೆಯಾದರೂ ಅದು ಕೂಡ ಕೆಲವೇ ಕೆಲವು ಸಮುದಾಯದ ವಿದ್ಯಾವಂತ ಸಮುದಾಯವನ್ನು ಒಳಗೊಳ್ಳುವುದು ಕಷ್ಟ ಕರ್ನಾಟಕದಲ್ಲಿರುವ ಬಂಜಾರ ತಾಂಡಾ ಅಭಿವೃದ್ಧಿ ಮಂಡಳಿಯನ್ನು ನೋಡಬಹುದು. ತಾಂಡಾ ಅಭಿವೃದ್ಧಿ ಎಂದರೆ ಬಂಜಾರ ಸಮುದಾಯ ಭವನಗಳ ಅಭಿವೃದ್ಧಿ ಎಂದು ತಿಳಿದಂತಿದೆ. ಈ ತಾಂಡಾ ಅಭಿವೃದ್ಧಿ ಮಂಡಳಿಯ ಕಾರ್ಯ ಚಟುವಟಿಕೆಗಳನ್ನು ನೋಡುತ್ತಿದ್ದರೆ, ತಾಂಡಾ ಅಭಿವೃದ್ಧಿಗಾಗಿ ಕೋಟ್ಯಂತರ ರೂಪಾಯಿಗಳು ವೆಚ್ಚವಾಗಿದೆ. ವಾಸ್ತವದಲ್ಲಿ ಅದರ ಪ್ರತಿಫಲ ಇಲ್ಲದಾಗಿದೆ.

❑❑❑

# ಅಧ್ಯಾಯ : ಐದು

# ಲಂಬಾಣಿ ಸಮುದಾಯದ ಕರಕುಶಲ ಕಲಾವಿದರ ಸಮಕಾಲೀನ ಸ್ಥಿತಿಗತಿಗಳು

೫.೧. ಆಯ್ದ ಕಲಾವಿದರ ಪರಿಚಯ ಮತ್ತು ಸ್ಥಿತಿಗತಿಗಳು

೫.೨. ಕಲಾವಿದರ ಶೈಕ್ಷಣಿಕ ಸ್ಥಿತಿಗತಿಗಳು

೫.೩. ಕೇಂದ್ರ, ರಾಜ್ಯ ಸರ್ಕಾರ, ಖಾಸಗಿ ಸಂಘ-ಸಂಸ್ಥೆಗಳ ಸಹಾಯ ಸಹಕಾರ

ಅಧ್ಯಾಯ : ಐದು

# ಲಂಬಾಣಿ ಸಮುದಾಯದ ಕರಕುಶಲ ಕಲಾವಿದರ ಸಮಕಾಲೀನ ಸ್ಥಿತಿಗತಿಗಳು

ಇಂದು ಯಾವುದೇ ಸಮುದಾಯದ ಕಲಾವಿದರ ಸಮಕಾಲೀನ ಸ್ಥಿತಿಗತಿಗಳನ್ನು ನೋಡುತ್ತಿದ್ದರೆ, ಅದು ಸಂತೋಷಪಡುವಂತಿರದೇ ದುಃಖಪಡುವಂತಿರುವುದು ನಮ್ಮ ಕಣ್ಣ ಮುಂದಿರುವ ಸತ್ಯ. ಇಂದಿನ ಆರ್ಥಿಕ ನೀತಿ, ಅಭಿವೃದ್ಧಿ ಮಾದರಿಯ ಧೋರಣೆಗಳು, ಅಧಿಕಾರಿಗಳ ಭ್ರಷ್ಟವ್ಯವಸ್ಥೆ, ರಾಜಕಾರಣಿಗಳ ಸ್ವಾರ್ಥಪರತೆ, ಯಾವುದೇ ಕಲಾವಿದರಿಗೆ ಒಳ್ಳೆಯ ಬದುಕನ್ನು ಕರುಣಿಸಿದ್ದಿಲ್ಲ.

ಯಾವುದೇ ಬುಡಕಟ್ಟು ಸಮುದಾಯಗಳ ವಿಶಿಷ್ಟ ಕಲೆಗಳು ಉಳಿದಿರುವುದು ಆಯಾ ಸಮುದಾಯದ ಹಿರಿಯರ ಸಾಮುದಾಯಿಕ ಪ್ರಜ್ಞೆಯಿಂದ. ಇಂತಹ ಸಮುದಾಯದ ಪ್ರಜ್ಞೆಯನ್ನು ಸರಕಾರಗಳು ಲಾಭ ಮಾಡಿಕೊಳ್ಳುತ್ತಿವೆ. ಎನ್.ಜಿ.ಓ.ಗಳು ತಮ್ಮ ಸುಧಾರಣೆಯ ಫಲ ಎಂದು ಹೇಳುತ್ತಿವೆ. ಹೀಗಿರುವಾಗ ಲಂಬಾಣಿ ಸಮುದಾಯದ ಕರಕುಶಲ ಕಲಾವಿದರ ಸ್ಥಿತಿಗತಿಯು ಭಿನ್ನವಾಗಿಯೇನೂ ಇಲ್ಲ. ಈ ಭಾಗದಲ್ಲಿ ಸಂಶೋಧಕರ ವಿವರಣೆಗಿಂತ, ಕಲಾವಿದರ ಆತ್ಮಕಥನದ ಮೂಲಕ ನಿರೂಪಿಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಆತ್ಮಕಥಾನಕ ಮಾದರಿಯ ನಿರೂಪಣೆಗಳು ಈ ಸಮುದಾಯಗಳ ನಿಜ ಬದುಕನ್ನು ಕಾಣಿಸುತ್ತವೆ.

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನಲ್ಲಿರುವ ಲಂಬಾಣಿ ಕುಶಲ ಕಲಾಕೇಂದ್ರವು ಇಂದು ರಾಷ್ಟ್ರಮಟ್ಟದಲ್ಲಿ ಹೆಸರು ಪಡೆದಿದೆ. ಇದಕ್ಕೆ ಕಾರಣ ಇಲ್ಲಿಯ ಮಹಿಳೆಯರ ಶ್ರಮ. ಕೇವಲ ಆರು ಜನರಿಂದ ಪ್ರಾರಂಭವಾದ ಈ ಕೇಂದ್ರವು ಇಂದು ಎರಡು ನೂರ

ಐವತ್ತಕ್ಕಿಂತ ಹೆಚ್ಚು ಮಹಿಳೆಯರಿಗೆ ಕೆಲಸ ನೀಡಿದೆ. ಲಂಬಾಣಿ ಮಹಿಳೆಯರ ಮಾನಸಿಕ ಸಂವೇದನೆಯ ಸಂಕೇತವಾಗಿ ಈ ಕಲೆ ಇಂದಿಗೂ ಉಳಿದಿದೆ. ಅಲ್ಲದೆ ಬೇರೊಂದು ಸ್ವರೂಪದಲ್ಲಿ ಈ ಕಸೂತಿ ಕಲೆಯು ಹೆಜ್ಜೆ ಇಡುತ್ತಿದೆ. ಹೀಗಾಗಿ ಈ ಕೇಂದ್ರದ ಮೂಲ ಆಧಾರಸ್ತಂಭಗಳಾದ ಸೀತಾಬಾಯಿ, ತಿಪ್ಪಿಬಾಯಿ, ದುರ್ಗಿಬಾಯಿ, ಗಂಗೀಬಾಯಿ ಶಾಂತಿಬಾಯಿ ಯವರು ಪ್ರಮುಖರಾಗಿದ್ದಾರೆ. ಇವರಲ್ಲಿ ಕೆಲವರು ನಿವೃತ್ತಿಯಾಗಿದ್ದರೆ ಮತ್ತೆ ಕೆಲವರು ಕೇಂದ್ರದಲ್ಲಿ ಕಸೂತಿ ಕೆಲಸ ಮಾಡುತ್ತ ಪಿಂಚಣಿ ಹಾಗೂ ಆಹಾರ ಸಾಮಗ್ರಿಗಳನ್ನು ಪಡೆಯುತ್ತಿದ್ದಾರೆ. ಪ್ರಾರಂಭದಲ್ಲಿ ದಿನಕ್ಕೆ ಕೇವಲ ಐದು ರೂಪಾಯಿ ಇವರಿಗೆ ಕೂಲಿ ನೀಡುತ್ತಿದ್ದರಂತೆ. ನಂತರದ ದಿನಗಳಲ್ಲಿ ಹಂತಹಂತವಾಗಿ ಕೇಂದ್ರವನ್ನು ಬೆಳೆಸುವುದರ ಜೊತೆಗೆ ತಾವೂ ಸಹ ಬೆಳೆದರು. ಆಂಧ್ರಪ್ರದೇಶದ ಯಲ್ಲಮ್ಮ ತಾಂಡಾದ ಬಂಜಾರ ನೀಡಲ್ ಕ್ರಾಫ್ಟ್ ಸೆಂಟರ್‌ನ ಲಂಬಾಣಿ ಕಸೂತಿ ಕಲಾವಿದೆಯರು ೨೦೦೧ರ ಯುನೆಸ್ಕೋ ಕುಶಲ ಕಲಾ ಸ್ಪರ್ಧೆಯಲ್ಲಿ ಜಂಟಿ ಎರಡನೇ ಸ್ಥಾನ ಪಡೆದಿರುವುದು ಲಂಬಾಣಿ ಕಸೂತಿ ಕಲೆಗೆ ಸಂದ ಗೌರವವಾಗಿದೆ.

### ೫.೧. ಆಯ್ದ ಕಲಾವಿದರ ಪರಿಚಯ ಮತ್ತು ಸ್ಥಿತಿಗತಿಗಳು

ಲಂಬಾಣಿ ಕರಕುಶಲ ಕಲಾವಿದರನ್ನು ಸಂದರ್ಶನ ಮಾಡಲಾಗಿತ್ತು. ಆಯಾ ಸಂಸ್ಥೆಗಳು ಕಲಾವಿದರ ಬಗ್ಗೆ ನೀಡುವ ಪರಿಚಯ ಮಾಹಿತಿಗಿಂತ, ಸ್ವತಃ ಕಲಾವಿದರೆ ತಮ್ಮ ಬದುಕಿನ ಬಗೆಗೆ ಹೇಳಿಕೊಂಡಿದ್ದಾರೆ. ಈ ಮಾತುಗಳು ನಮಗೆ ಲಂಬಾಣಿ ಸಮುದಾಯದ ಕಲಾವಂತಿಕೆಯ ಹಿಂದಿನ ನೋವು ನಲಿವುಗಳ ಬಗ್ಗೆ ತಿಳಿಯಲು ಸಹಕಾರಿಯಾಗಿದೆ. ಸಂಶೋಧನೆಯಲ್ಲಿ ಹಲವು ಲಂಬಾಣಿ ಮಹಿಳೆಯರನ್ನು ಅಧ್ಯಯನಕ್ಕೆ ಒಳಪಡಿಸಲಾಯಿತು. ಅವರ ಸಂದರ್ಶನ, ಅವರ ಆತ್ಮಕಥನದ ನಿರೂಪಣೆಯು ಹಾಗೆಯೇ ಇತ್ತು.

ಇಲ್ಲಿ ಸೀತಾಬಾಯಿ, ತಿಪ್ಪಿಬಾಯಿ, ಸೀತಾಬಾಯಿ ಬಾಬು ನಾಯಕ, ದುರ್ಗಿಬಾಯಿ, ಶಾಂತಿಬಾಯಿ, ಗೌರಿಬಾಯಿ, ಶಾರದಾ ನೀಲೂ ಪವಾರ್, ಲಲಿತಾಬಾಯಿ, ಸೋಮಿಬಾಯಿ, ಲಾಲಿಬಾಯಿ. ಇವರ ಆತ್ಮಕಥನದ ಭಾಗಗಳನ್ನು ಇಲ್ಲಿ ನಿರೂಪಿಸಲಾಗಿದೆ. ಈ ಭಾಗವು ಕಲೆಯ ಜತೆಗೆ ಬದುಕಿನ ಕ್ರಮವು ಬೆಸೆದುಕೊಂಡಿರುವುದಕ್ಕೆ ಸಾಕ್ಷಿಯಂತಿದೆ. ಇಲ್ಲಿ ಕಷ್ಟದ ಬದುಕಿನ ವಿವರಗಳಿವೆ. ತಾಂಡಾ ಬದುಕಿನ ಈ ಕಾಲದ ಸಮಸ್ಯೆಗಳನ್ನು ಹೇಳಿಕೊಂಡಿದ್ದಾರೆ. ಅಂತೆಯೇ ಕಲಾ ಪ್ರಕಾರ ಬೆಳೆದುಬಂದ ಬಗೆಯನ್ನು ಒಬ್ಬೊಬ್ಬರೂ ಒಂದೊಂದು ಬಗೆಯಲ್ಲಿ ಹೇಳಿಕೊಂಡಿದ್ದಾರೆ.

**ಸೀತಾಬಾಯಿ ಬದ್ಯಾ ನಾಯಕ**

ಸಂಡೂರು ಕುಶಲ ಕಲಾಕೇಂದ್ರಕ್ಕೆ ಅಡಿಪಾಯ ಹಾಕಿದವರಲ್ಲಿ ಸೀತಾಬಾಯಿ ಅವರು ಒಬ್ಬರು. ಇವರ ಊರು ಸುಶೀಲಾನಗರ. ತಂದೆ ಕನ್ಯಾ ನಾಯ್ಕ, ತಾಯಿ ಲಚ್ಚಿ. ಗಂಡ



ಕಸೂತಿ ಕಲಾವಿದರು



ಕ್ರಿಯೇಟಿವ್ ಕ್ರಾಫ್ಟ್ ವರ್ಕರ್ಸ್, ೨೦೦೧ರ ಜಂಟಿಯಾಗಿ ೨ನೇ ಯುನೇಸ್ಕೊ ಕ್ರಾಫ್ಟ್ ಪ್ರೈಜ್ ಪಡೆದ ಕಲಾವಿದರು.



ಬಂಜಾರಾ ನಿಡಲ್ ಕ್ರಾಫ್ಟ್ ಸೆಂಟರ, ಯಲ್ಲಮ್ಮ ತಾಂಡಾ, ಆಂದ್ರಪ್ರದೇಶ



ಬದ್ಯಾ ನಾಯ್ಕ. ಇವರು ಮರಣವನ್ನಪ್ಪಿದ್ದಾರೆ. ಈಗ ಸೀತಾಬಾಯಿ ಅವರಿಗೆ ಸುಮಾರು ಎಂಬತ್ತು ವರ್ಷ ವಯಸ್ಸಾಗಿದೆ. ಮೊಮ್ಮಗನ ಹತ್ತಿರ ತನ್ನ ಕೊನೆಯ ದಿನಗಳನ್ನು ಕಳೆಯುತ್ತಿದ್ದಾಳೆ. ಕೇಂದ್ರದಲ್ಲಿ ಕೆಲಸ ಬಿಟ್ಟು ಈಗ ಐದು ವರ್ಷಗಳಾಗಿವೆ. ಇವರಿಗೆ ಕೇಂದ್ರದಿಂದ ಯಾವುದೇ ಸೌಲಭ್ಯಗಳು ದೊರೆಯುತ್ತಿಲ್ಲ. ಕಾರಣ ತಾವು ಕಸೂತಿ ಕೆಲಸಕ್ಕೆ ಸೇರುವ ಸಂದರ್ಭದಲ್ಲಿ ಹೆಚ್ಚು ವಯಸ್ಸನ್ನು ಬರೆಯಲಾಗಿದೆ. ಹೀಗಾಗಿ ಕೆಲಸದಿಂದ ಬೇಗ ನಿವೃತ್ತಿಯನ್ನು ಪಡೆದಿದ್ದಾರೆ. ಕೇಂದ್ರದಲ್ಲಿ ಯಾರು ಹತ್ತು ವರ್ಷಗಳ ಕಾಲ ಸೇವೆ ಸಲ್ಲಿಸುವರೋ ಅವರಿಗೆ ಪಿಂಚಣಿ ಹಾಗೂ ಅರ್ಧ ಭಾಗ ಆಹಾರ ಸಾಮಗ್ರಿ ನೀಡುವರು. ಆದರೆ ವಯಸ್ಸಿನಿಂದ ಹಣ್ಣಾದ ಸೀತಾಬಾಯಿ ಇವುಗಳ ಸೌಲಭ್ಯದಿಂದ ವಂಚಿತಳಾಗಿದ್ದಾಳೆ. ಹೀಗೆ ಏನೆಲ್ಲಾ ಸೌಲಭ್ಯಗಳಿಂದ ವಂಚಿತಳಾದ ಸೀತಾಬಾಯಿ ಈ ಕೇಂದ್ರದಲ್ಲಿ ಇಪ್ಪತ್ತೈದು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾಳೆ.

ಇಷ್ಟು ವರ್ಷಗಳ ಕಾಲ ಸೇವೆ ಸಲ್ಲಿಸಿದ ಸೀತಾಬಾಯಿಗೆ ಯಾವುದೇ ಸೌಲಭ್ಯಗಳು ದೊರೆಯದ ಕಾರಣ ಕೇಂದ್ರದವರು ಅವಳು ರಚಿಸಿದ ಒಂದು ಕಲಾಕೃತಿಯನ್ನು ರಾಜ್ಯಪ್ರಶಸ್ತಿಗೆ ಕಳಿಸಿಕೊಟ್ಟರು. ದೇವರ ದಯೆಯಿಂದ ಆ ಕಲಾಕೃತಿಯು ಪ್ರಶಸ್ತಿಗಾಗಿ ಆಯ್ಕೆ ಆಯಿತು. ಆಗ ಇಪ್ಪತ್ತೈದು ಸಾವಿರ ರೂಪಾಯಿ ಬಹುಮಾನವನ್ನು ರಾಜ್ಯ ಸರ್ಕಾರದವರು ನೀಡಿದರು.

ಪ್ರಾರಂಭದಿಂದಲೂ ಬಡತನದ ಬೇಗೆಯಲ್ಲಿಯೇ ಬದುಕನ್ನು ಸಾಗಿಸಿದ ಸೀತಾಬಾಯಿಗೆ ಇದ್ದ ಒಬ್ಬನೇ ಮಗ ಮದುವೆ ಆಗಿ ತೀರಿಕೊಂಡ. ಸದ್ಯ ಮೊಮ್ಮಗನ ಹತ್ತಿರ ವಾಸವಾಗಿದ್ದಾಳೆ. ಈ ಕಸೂತಿ ಕೆಲಸದಿಂದಲೇ ಕುಟುಂಬ ನಿರ್ವಹಣೆ ಮಾಡುತ್ತಿದ್ದ ಸೀತಾಬಾಯಿಗೆ ಬದುಕಲ್ಲಿ ಅನೇಕ ಸಮಸ್ಯೆಗಳು ಎದುರಾದವು. ಆದರೂ ಅವುಗಳನ್ನು ಮೆಟ್ಟಿ ಬದುಕನ್ನು ಕಟ್ಟಿದ್ದಾಳೆ. ಇವಳಿಗೆ ಯಾವುದೇ ಸೌಲಭ್ಯ ದೊರೆಯಲಿಲ್ಲವೆಂದು ಮಾನವೀಯತೆಯ ಮೆರೆಗೆ ಕೇಂದ್ರದವರು ಆರು ತಿಂಗಳುಗಳ ಕಾಲ ಉಚಿತವಾಗಿ ರೇಷನ್ ನೀಡಿದರು. ಸೀತಾಬಾಯಿಯನ್ನು ಕಸೂತಿ ಕಲೆಯ ಕುರಿತು ವಿಚಾರಿಸಿದಾಗ ಕಣ್ಣೀರು ತೆಗೆದಳು. ನನ್ನಿಂದ ಹುಟ್ಟಿ ಬೆಳೆದ ಕೇಂದ್ರ ನನಗೆ ಇಂದು ಯಾವುದೇ ಸೌಲಭ್ಯ ನೀಡುತ್ತಿಲ್ಲ. ನಿನ್ನೆ ಮೊನ್ನೆ ಬಂದು ಕೆಲಸಕ್ಕೆ ಸೇರಿದವರಿಗೆ ಏನೆಲ್ಲಾ ಸೌಕರ್ಯಗಳು ನೀಡುತ್ತವೆ ಎಂದು ತನ್ನ ಮನದಾಳದ ಮಾತನ್ನು ಬೇಸರದಿಂದ ಹೊರಹಾಕಿದಳು. ಯಾವುದೇ ಹೊಲಗದ್ದೆಗಳಿಲ್ಲದೆ ಮತ್ತೊಬ್ಬರ ಹೊಲದಲ್ಲಿ ಕೂಲಿ ಕೆಲಸ ಮಾಡಿ ಮೊಮ್ಮಕ್ಕಳು ಇವಳನ್ನು ಸಾಕುವರು. ಹೀಗೆ ಕೇಂದ್ರದ ಉಗಮಕ್ಕೆ ಹಾಗೂ ಬೆಳವಣಿಗೆಗೆ ಸೀತಾಬಾಯಿ ಅವರು ನೇರ ಹಾಗೂ ಪರೋಕ್ಷವಾಗಿ ಕಾರಣಕರ್ತರಾಗಿದ್ದಾರೆ.

**ತಿಪ್ಪಿಬಾಯಿ ಚಂದ್ಯಾ ನಾಯಕ**

ಕುಶಲಕಲಾ ಸೃಷ್ಟಿ ಆಗಲು ಕಾರಣಕರ್ತರಲ್ಲಿ ತಿಪ್ಪಿಬಾಯಿ ಒಬ್ಬರು. ಬಾಲ್ಯದಿಂದಲೂ ಬಡತನದಲ್ಲೇ ಬೆಳೆದ ಇವರು ಬಡತನದಲ್ಲಿಯೇ ಬದುಕುತ್ತಿದ್ದಾಳೆ. ಇವರ ಹುಟ್ಟೂರು ವೆಂಕಟಗಿರಿ. ಸೀಯಾನಾಯ್ಕ, ದೇವ್ಲಿಬಾಯಿ ತಂದೆತಾಯಿಗಳು. ಮದುವೆಯಾಗಿ ಸುಶೀಲಾ ನಗರದಲ್ಲಿ ಇವರು ಸಾಂಸಾರಿಕ ಜೀವನವನ್ನು ಆರಂಭಿಸಿದರು. ಗಂಡ ಚಂದ್ಯಾ ನಾಯ್ಕ ಅವರು ಈಗ ಮರಣವನ್ನಪ್ಪಿದ್ದಾರೆ. ಒಟ್ಟು ಐದು ಜನ ಮಕ್ಕಳು. ಮೂರು ಮಂದಿ ಗಂಡು, ಎರಡು ಮಂದಿ ಹೆಣ್ಣುಮಕ್ಕಳು ಒಂದು ಎಕರೆ ಗದ್ದೆ ಇದೆ. ಈಗ ಇವರಿಗೆ ೭೦ ವರ್ಷ ವಯಸ್ಸಾಗಿದೆ. ಆದರೂ ಈ ಕಸೂತಿ ಕೆಲಸ ಮಾಡಬೇಕೆಂಬ ಆಸೆಯಿಂದ ಕೇಂದ್ರಕ್ಕೆ ಪ್ರತಿದಿನ ಹೋಗುವರು. ಗಂಡ ಸಾವನ್ನಪ್ಪಿದಾಗಿನಿಂದ ಮತ್ತಷ್ಟು ಕುಟುಂಬದ ಜವಾಬ್ದಾರಿ ಇವರ ಮೇಲೆ ಬಿತ್ತು. ಹೀಗಾಗಿ ಬಡತನದಿಂದ ಹೊರಬರಲು ಇವರಿಗೆ ಆಗಲಿಲ್ಲ. ಇಂತಹ ಇಳಿವಯಸ್ಸಿನಲ್ಲಿಯೂ ಕೂಲಿ ಕೆಲಸ ಹಾಗೂ ಕಸೂತಿ ಕೆಲಸಕ್ಕೆ ಹೋಗುವರು. ಮೂವತ್ತೈದು ವರ್ಷದಿಂದ ಕೇಂದ್ರದಲ್ಲಿ ಕಸೂತಿ ಕೆಲಸ ಮಾಡುತ್ತಿದ್ದಾರೆ. ಸೀತಾಬಾಯಿಯ ಹಾಗೆ ಇವರಿಗೂ ಹೆಚ್ಚಾಗಿ ವಯಸ್ಸನ್ನು ಬರೆಸಿದ ಕಾರಣ ಬೇಗ ನಿವೃತ್ತಿಯಾದರು. ಆದರೂ ಕೇಂದ್ರದಲ್ಲಿ ಕೆಲಸಕ್ಕೆ ಹೋಗುವುದನ್ನು ನಿಲ್ಲಿಸಲಿಲ್ಲ. ಈಗ ಇತರೆ ಕಸೂತಿ ಕೆಲಸಗಾರರಂತೆ ಇವರಿಗೆ ದಿನಕ್ಕೆ ಮೂವತ್ತೈದು ರೂಪಾಯಿ ಸಂಬಳ ಹಾಗೂ ಇಪ್ಪತ್ತು ರೂಪಾಯಿ ಪ್ರಯಾಣಭತ್ಯೆ ನೀಡುವರು.

ಇವರಿಗೆ ತಿಂಗಳಿಗೆ ಕಸೂತಿ ಕೆಲಸ ಮಾಡಿದರೆ ಆರು ನೂರು ರೂಪಾಯಿ ಕೊಡುತ್ತಿದ್ದರು. ಜೊತೆಗೆ ಹಲವು ರೀತಿಯ ಆಹಾರ ಸಾಮಗ್ರಿಗಳನ್ನು ಒದಗಿಸುವರು. ತಿಂಗಳ ಕೊನೆಯಲ್ಲಿ ಮೂವತ್ತು ಸೇರು ಜೋಳ, ಇಪ್ಪತ್ತೈದು ಸೇರು ಸೋನಾ ಮಸೂರಿ ಅಕ್ಕಿ, ಎರಡು ಕೆ.ಜಿ ಬೆಲ್ಲ, ಎರಡು ಕೆ.ಜಿ ಉಪ್ಪಿಟ್ಟು ರವೆ, ಎರಡು ಕೆ.ಜಿ ಒಳ್ಳೆಣ್ಣೆ, ಆರು ಕೆ.ಜಿ ಗೋಧಿ, ಒಂದು ಕೆ.ಜಿ ಒಣಮೆಣಸಿನಕಾಯಿ, ಎರಡು ಕೆ.ಜಿ ಬೇಳೆ ಹಾಗೂ ಒಂದು ಕೆ.ಜಿ. ಪುಟಾಣಿ ಕೊಡುವರು. ಒಂದು ವೇಳೆ ತಿಂಗಳಿಗೆ ಆರುನೂರು ರೂಪಾಯಿಗಿಂತ ಕಡಿಮೆ ಕಸೂತಿ ಕೆಲಸ ಮಾಡಿದರೆ ಇವರಿಗೆ ಮೇಲಿನ ಅರ್ಧದಷ್ಟು ಆಹಾರ ಸಾಮಗ್ರಿ ನೀಡುವರು. ಅಂದರೆ ಕೇಂದ್ರದಲ್ಲಿ ಇವರ ಶ್ರಮಕ್ಕೆ ತಕ್ಕಂತೆ ಸೌಲಭ್ಯ ದೊರೆಯುತ್ತದೆ. ತಿಂಗಳ ಸಂಬಳಕ್ಕಿಂತ ಇವರಿಗೆ ತಿಂಗಳಲ್ಲಿ ದೊರೆಯುವ ಆಹಾರ ಸಾಮಗ್ರಿಯೇ ಪ್ರಮುಖವಾಗಿದೆ.

ಸುಮಾರು ಎಪ್ಪತ್ತು ವರ್ಷ ದಾಟಿದರೂ ಇನ್ನೂ ಈ ಕೆಲಸದ ಬಗೆಗೆ ಆಸಕ್ತಿ ಹೊಂದಿರುವ ತಿಪ್ಪಿಬಾಯಿ ಮಹತ್ವದ ಸ್ಥಾನವನ್ನು ಕೇಂದ್ರದಲ್ಲಿ ಹೊಂದಿದ್ದಾಳೆ. ಕೇಂದ್ರ ಹುಟ್ಟಿ ಬೆಳೆಯಲು ಕಾರಣೀಭೂತರಾದ ಇವರು ತುಂಬಾ ಬಡವರು. ಬಡತನದಲ್ಲಿಯೇ

ಜೀವನ ಸಾಗಿಸುತ್ತಿದ್ದಾರೆ. ತನ್ನ ಗಂಡನನ್ನು ಕಳೆದುಕೊಂಡ ಮೇಲೆ ಸಂಸಾರದ ಹೊರೆ ಇವರ ಮೇಲೆ ಬಿತ್ತು, ಅವುಗಳೆಲ್ಲವನ್ನು ಪಾಲಿಸಿಕೊಂಡು ಬದುಕನ್ನು ಕಟ್ಟಿಕೊಂಡಿದ್ದಾರೆ.

ಕುಶಲ ಕಲಾಕೇಂದ್ರದಲ್ಲಿ ಬೆಳಗ್ಗೆ ಹತ್ತು ಗಂಟೆಗೆ ಹೋದವರು ಸಾಯಂಕಾಲ ಐದೂವರೆ ಗಂಟೆಗೆ ಪುನಃ ಮನೆಗೆ ಮರಳುವರು. ಊರಿಂದ ಹೋಗಲು ಹಾಗೂ ಬರಲು ಕೇಂದ್ರದ ಕಡೆಯಿಂದಲೇ ಪ್ರಯಾಣಭತ್ಯೆ ನೀಡುವರು. ಆದರೂ ಕೇಂದ್ರದಲ್ಲಿ ಕೆಲಸ ಮಾಡುವ ಇವರಿಗೆ ಸರಿಯಾದ ಸೌಲಭ್ಯಗಳಿಲ್ಲ. ಹೆಚ್ಚು ಶ್ರಮಕ್ಕೆ ಕಡಿಮೆ ವೇತನವನ್ನು ಇವರು ಪಡೆಯುತ್ತಿದ್ದಾರೆ. ಲಂಬಾಣಿ ಮಹಿಳೆಯರಿಂದಲೇ ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡಿರುವ ಈ ಕೇಂದ್ರವು ಇವರಿಗೆ ಕೂತು ಕೆಲಸ ಮಾಡಲು ಸರಿಯಾದ ವ್ಯವಸ್ಥೆಯನ್ನು ಮಾಡಿಲ್ಲ. ನೆಲವೇ ಇವರಿಗೆ ಗತಿಯಾಗಿದೆ. ತಿಪ್ಪಿಬಾಯಿ ಅವರು ಹಿರಿತಲೆಮಾರಿನವರು, ಅಚ್ಚುಕಟ್ಟಾಗಿ ಕಸೂತಿ ಕಲೆಯನ್ನು ಮಾಡುವರು. ಪ್ರತಿಯೊಂದು ಕೆಲಸವನ್ನು ಮೇಲ್ವಿಚಾರಕರು ಹೇಳಿದ ರೀತಿಯಲ್ಲಿ ನಿರ್ವಹಿಸುವರಂತೆ. ಕೇಂದ್ರದಲ್ಲಿ ತಯಾರಾಗುವ ಆಧುನಿಕ ಮಾದರಿಯ ವಸ್ತುಗಳ ಮೇಲೆ ಲಂಬಾಣಿ ಕಸೂತಿಯನ್ನು ಹೆಣೆದು ಸುಂದರಗೊಳಿಸುವರು. ಅವುಗಳಿಗೆ ಅನೇಕ ರೀತಿಯ ಸಾಮಗ್ರಿಗಳನ್ನು ಜೋಡಿಸಿ ಮಾರುಕಟ್ಟೆಯ ಬೇಡಿಕೆಯಂತೆ ರಚನೆ ಮಾಡುವರು. ಮೊಬೈಲ್ ಕವರ್, ಹಣದ ಚೀಲ, ಎಲೆ ಅಡಿಕೆ ಸಂಚಿ, ಪಿಲ್ಲೋ ಕವರ್ ವಿವಿಧ ಮಾದರಿಯ ಬ್ಯಾಗ್‌ಗಳ ಮೇಲೆ ಆಕರ್ಷಕವಾದ ಕಸೂತಿಕಲೆಯನ್ನು ಹಾಕಿ ವಿನ್ಯಾಸಗೊಳಿಸುವರು.

ಪುರುಷ ಹಾಗೂ ಮಹಿಳೆಯರು ಧರಿಸುವ ಶರ್ಟ್, ಕುಡ್ತಾ, ಸೀರೆ, ಚೂಡಿದಾರ, ಮುಂತಾದವುಗಳ ಮೇಲೆ ತಿಪ್ಪಿಬಾಯಿ ಅವರು ಸುಂದರವಾಗಿ ಕಸೂತಿ ಹಾಕುವರು. ಇವರು ಈ ಕಲೆಗಾರಿಕೆಯಿಂದ ಬೆಂಗಳೂರಿಗೆ ಪ್ರದರ್ಶನಕ್ಕೆ ಮಾತ್ರ ಹೋಗಿದ್ದರಂತೆ. ಅದರಾಚೆ ಎಲ್ಲೂ ಹೋಗಿಲ್ಲ. ಅಕ್ಷರ ಜ್ಞಾನವಿಲ್ಲದ ತಿಪ್ಪಿಬಾಯಿಗೆ ತನ್ನ ತಾಯಿ ಭಾಷೆಯಾದ ಲಂಬಾಣಿ ಹಾಗೂ ಕನ್ನಡ ಮಾತನಾಡಲು ಬರುತ್ತದೆ. ಯಾವುದೇ ರೀತಿಯ ಹೊರಜಗತ್ತಿನ ಜ್ಞಾನವಿಲ್ಲದ ಇವರಿಗೆ ಸಂಡೂರಿನ ಭಾಗವೇ ಮಹತ್ವದ ಕೇಂದ್ರದಂತಿದೆ. ಹೀಗಾಗಿ ಈ ತಲೆಮಾರಿನ ಪೀಳಿಗೆ ಗತಿಸಿದರೆ ಮುಂದೆ ಈ ಮಾದರಿಯ ಕಸೂತಿ ಕಲೆಯನ್ನು ಮಾಡುವವರು ದೊರೆಯಲಾರರೆನ್ನುವರು. ಲಂಬಾಣಿ ಉಡುಗೆಯಲ್ಲಿಯೇ ಇರುವ ತಿಪ್ಪಿಬಾಯಿ ಲಂಬಾಣಿಗರ ಉಡುಗೆ ಮಾಯವಾದರೂ ಸಹ ಅದು ಮತ್ತೊಂದು ರೂಪದಲ್ಲಿ ಕಾಣಿಸಿಕೊಳ್ಳುತ್ತಲಿದೆ ಎಂದು ಹೇಳುವರು.

ಸುಮಾರು ವರ್ಷಗಳ ಹಿಂದೆ ಕೇಂದ್ರಕ್ಕೆ ಅಸ್ತಿಭಾರ ಹಾಕಿದ ತಿಪ್ಪಿಬಾಯಿವರು. ಮಹಾರಾಜರಾದ ಎಂ.ವೈ. ಘೋರ್ಪಡೆ ಅವರು ಮಡದಿ ಮಹಾಲಕ್ಷ್ಮಿ ಅವರ ಕೃಪೆಯಿಂದ ಈ ಕುಶಲ ಕಲಾಕೇಂದ್ರವು ಸ್ಥಾಪಿತವಾಯಿತೆಂದು ತಮ್ಮ ಮನದಾಳದ ವಿಚಾರವನ್ನು

ಬಿಚ್ಚಿದರು. ಪ್ರಾರಂಭದಲ್ಲಿ ವಾರಕ್ಕೆ ಐದು ರೂಪಾಯಿ ಕೂಲಿ ಇವರಿಗೆ ಸೀಮಿತವಾಗಿತ್ತು. ೧೯೮೮ರಲ್ಲಿ ಸ್ಥಾಪಿತವಾದ ಈ ಕೇಂದ್ರವು ಕೇವಲ ಆರು ಜನ ಮಹಿಳೆಯರಿಂದ ಚಾಲನೆ ಗೊಂಡಿತು. ಅವರಲ್ಲಿ ತಿಪ್ಪಿಬಾಯಿ ಅವರು ಒಬ್ಬರು ಅರಮನೆಯಲ್ಲಿನ ಆಕಳುಗಳಿಗೆ ಹುಲ್ಲನ್ನು ನೀಡಿದ ಮೇಲೆ ಕಸೂತಿ ಕೆಲಸವನ್ನು ಮಾಡುತ್ತಿದ್ದರು. ಹೀಗೆ ಕಸೂತಿ ಕಲೆಯ ಮೂಲಕ ಬದುಕನ್ನು ಸಾಗಿಸಿರುವ ಇವರಿಗೆ ಪಿಂಚಣಿ ಇಲ್ಲ. ವಾಸಿಸಲು ಯಾವುದೇ ಮನೆಯ ಸೌಲಭ್ಯಗಳಿಲ್ಲ.

ಹೀಗಾಗಿ ಈಗ ಅವರು ನೀಡುವ ಕೂಲಿಯೇ ಇವರ ಬದುಕಿಗೆ ಮೂಲ ಆದಾಯವಾಗಿದೆ. ಬೆಟ್ಟಗುಡ್ಡಗಳಲ್ಲಿ ತಮ್ಮ ಮನೆಯನ್ನು ಕಟ್ಟಿಕೊಂಡಿರುವ ಇವರಿಗೆ ಹೊಲಗದ್ದೆಗಳು ಕಡಿಮೆ ಪ್ರಮಾಣದಲ್ಲಿದೆ. ಅಡವಿ ಗುಡ್ಡಗಳಲ್ಲೇ ಅಲ್ಪ ಸ್ವಲ್ಪ ಭೂಮಿಯನ್ನು ಸಾಗುವಳಿ ಮಾಡಿಕೊಂಡಿದ್ದಾರೆ. ತಿಪ್ಪಿಬಾಯಿಗೆ ಚಿಕ್ಕದಾದ ಮನೆ ಇದೆ. ಮಕ್ಕಳು, ಸೊಸೆ ಹಾಗೂ ಮೊಮ್ಮಕ್ಕಳೊಂದಿಗೆ ಜೀವಿಸುತ್ತಿದ್ದಾಳೆ. ಲಂಬಾಣಿ ಉಡುಗೆಯನ್ನು ತೊಟ್ಟಿರುವ ತಿಪ್ಪಿಬಾಯಿ ಈಗಲೂ ಕಸೂತಿ ಕಲೆಯ ಬಗೆಗೆ ತುಂಬ ಆಸಕ್ತಿ ಹೊಂದಿದ್ದಾರೆ. ಬಾಲ್ಯದಲ್ಲಿ ದನ, ಆಡು ಹಾಗೂ ಎಮ್ಮೆ ಮೇಯಿಸುತ್ತಾ ಈ ಕಸೂತಿಯನ್ನು ಮಾಡುತ್ತಿದ್ದರಂತೆ. ಹೀಗಾಗಿ ಕಸೂತಿ ಕಲೆಯು ಇವರಿಗೆ ಬದುಕಿನಾದ್ಯಂತ ಒಂದು ಪ್ರವೃತ್ತಿಯಾಗಿ ಬಂದಿದೆ. ತಮ್ಮ ಮನಸ್ಸಿನಲ್ಲಿ ಅಂದವಾಗಿ ಕಾಣುವ ಕಸೂತಿಯನ್ನು ಬಟ್ಟೆಗಳ ಮೇಲೆ ಹೆಣೆಯುತ್ತಿದ್ದರು. ಆಧುನಿಕ ಉಡುಗೆಗಳ ಮೇಲೆ ವಿವಿಧ ಮಾದರಿಯ ಕಸೂತಿ ಕಲೆಯನ್ನು ಹಾಕುವರು. ತಿಪ್ಪಿಬಾಯಿ ಅವರು ಈಗ ಮಗನ ಆಶ್ರಯದಲ್ಲಿದ್ದಾಳೆ. ಕರಕುಶಲ ಕೇಂದ್ರದಲ್ಲಿಯೇ ಕೆಲಸಕ್ಕೆ ಹೋಗುತ್ತಿದ್ದಾಳೆ. ಕಡುಬಡತನದಲ್ಲಿಯೇ ಬದುಕುತ್ತಿರುವ ಇವರು ಕಣ್ಣುಕಾಣುವವರೆಗೆ ಕಸೂತಿ ಕಲೆಯಿಂದಲೇ ಬದುಕುತ್ತೇನೆ ಎಂಬುದು ಅವರ ಮನದಾಳದ ಮಾತಾಗಿದೆ. ಮುಂದಿನ ಪೀಳಿಗೆಯು ಇವುಗಳನ್ನು ಕಲಿತು ಲಂಬಾಣಿಗರ ಚಹರೆ ಉಳಿಯುವಂತೆ ಮಾಡಬೇಕೆನ್ನುವರು.

**ಸೀತಾಬಾಯಿ ಬಾಬು ನಾಯಕ**

ಕುಶಲ ಕಲಾಕೇಂದ್ರವು ಸ್ಥಾಪನೆ ಆಗಲು ಕಾರಣೀಭೂತರಲ್ಲಿ ಸೀತಾಬಾಯಿ ಒಬ್ಬರು. ಕಮಲಾಪುರ ತಾಂಡ(ತಳಾಯೇರೊ) ತಾಂಡವು ಇವರ ಹುಟ್ಟೂರು. ಕಸನ್ಯಾ ನಾಯ್ಕ ಹಾಗೂ ಲಚ್ಚಿ ಇವರ ತಂದೆ ತಾಯಿ. ಇವರು ಮದುವೆಯಾದ ಮೇಲೆ ಸುಶೀಲಾ ನಗರದಲ್ಲಿ ಸಂಸಾರ ಹೂಡಿದರು. ಬಾಬು ನಾಯ್ಕ ಇವರ ಗಂಡ. ಈ ದಂಪತಿಗಳಿಗೆ ಎಂಟು ಜನ ಮಕ್ಕಳು ಜನಿಸಿದರು. ಇವುಗಳಲ್ಲಿ ಬದುಕುಳಿದದ್ದು ಎರಡು ಹೆಣ್ಣು, ಒಂದು ಗಂಡು. ಇವರ ಗಂಡ ಬಾಬು ನಾಯ್ಕ ಈಗ ತೀರಿಕೊಂಡಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ನಿವೃತ್ತಿಯಾದರೂ ಸಹ ಕುಶಲ ಕಲಾಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರಿಗೆ ಈಗ ಸುಮಾರು ೫೫ ವರ್ಷ ವಯಸ್ಸಾಗಿದೆ.

ಪ್ರಾರಂಭದಿಂದಲೂ ಬಹಳ ಬಡತನದಲ್ಲಿ ಬದುಕಿದ್ದ ಇವರು ಕೂಲಿ ಕೆಲಸ ಮಾಡಿ ಬದುಕುತ್ತಿದ್ದರು. ಸಂಡೂರು ಮಹಾರಾಜರು ಸಾಕಿದ ಆಕಳುಗಳಿಗೆ ಡೈರಿ ಫಾರ್ಮ್‌ನಲ್ಲಿ ಹುಲ್ಲು ತರುವುದು ಇವರ ದಿನನಿತ್ಯದ ಕಾಯಕವಾಗಿತ್ತಂತೆ. ಅರಮನೆಯ ಅಂಗಳದಲ್ಲಿ ಹೀಗೆ ಸುತ್ತಾಡುತ್ತ ಬರುವಾಗ ಮಹಾರಾಣಿ ಮಹಾಲಕ್ಷ್ಮಿ ಅವರ ಕಣ್ಣಿಗೆ ಈ ಮಹಿಳೆಯರು ಮಾಡುವ ಕಸೂತಿ ಕಲೆ ಬಿತ್ತು. ಸೀತಾಬಾಯಿ ಅವರು ಪೀಡಿರ್ ಕಾಂಚಳಿ(ಕುಪ್ಪಸ) ಮಾಡುವುದನ್ನು ಮಹಾರಾಣಿ ಕಂಡು ಅವುಗಳ ಕುರಿತು ವಿಚಾರಿಸಿದರು. ಈ ರೀತಿಯ ಕಸೂತಿ ಕೆಲಸ ನನಗೆ ಮಾಡಿಕೊಡುವಿರಾ ಎಂದು ಕೇಳಿದಳು. ಆಗ ಅವರು ಮಾಡಿ ಕೊಡುತ್ತೇನೆ ಎಂದರಂತೆ. ಒಂದು ವಾರದ ನಂತರ ಅವುಗಳಿಗೆ ಬೇಕಾಗುವ ಗ್ಲಾಸು, ದಾರ, ಕವಡೆ, ಬಟ್ಟೆ ಮುಂತಾದವುಗಳನ್ನು ತಯಾರಿಸಿಕೊಂಡು ಹೋದರು. ಒಟ್ಟು ಆರು ಮಂದಿ ಮಹಿಳೆಯರು ಪ್ರಾರಂಭದಲ್ಲಿ ಈ ಕೆಲಸ ಮಾಡಲು ನಿರತರಾದರು. ಆಗ ರಾಣಿ ಅವರಿಗೆ ದಿನಕ್ಕೆ ಒಂದು ಊಟ, ಟೀ ಕೊಟ್ಟರು. ಅಲ್ಲದೆ ತಿಂಗಳಿಗೆ ಹತ್ತು ಕೆ.ಜಿ ಜೋಳ, ಹಾಗೂ ಹತ್ತು ರೂಪಾಯಿ ಪ್ರಾರಂಭದಲ್ಲಿ ಕೆಲಸ ಮಾಡುತ್ತಿದ್ದ ಸೀತಾಬಾಯಿ ಅವರಿಗೆ ಸಿಗುತ್ತಿತ್ತು. ಆಗ ಬಹಳ ಬಡತನ. ಕಡಿಮೆ ಕೂಲಿಯಿತ್ತು. ಅದೇ ನಮಗೆ ಹೆಚ್ಚಾಗಿತ್ತು. ಮಹಾರಾಣಿ ಅವರು ಈ ಕಸೂತಿ ಕೆಲಸಗಳಿಗೆ ದಿನಕ್ಕೆ ಎಷ್ಟು ಸಂಬಳ ಬೇಕೆಂದು ಕೇಳಿದರಂತೆ. ಆದರೆ ಈ ಕೆಲಸ ಎಷ್ಟು ದಿನ ನಡೆಯಬಹುದೆಂಬ ನಿರೀಕ್ಷೆಯಿಂದ ಸಂಬಳ ಅಥವಾ ಕೂಲಿಯ ಬಗೆಗೆ ಹೆಚ್ಚು ತಲೆಕೆಡಿಸಿಕೊಳ್ಳಲಿಲ್ಲ. ಹೀಗೆ ಹಂತ ಹಂತವಾಗಿ ಬೆಳೆದ ಕೇಂದ್ರದಲ್ಲಿ ಆರು ಮಂದಿಯಿಂದ ಹನ್ನೊಂದು ಮಂದಿ ಕೆಲಸಕ್ಕೆ ಸೇರಿಕೊಂಡರು. ನಂತರ ಈ ಹನ್ನೊಂದು ಮಂದಿ ಕಸೂತಿ ಕೆಲಸ ಮಾಡುವ ಮಹಿಳೆಯರಿಗೆ ಪ್ರತಿದಿನ ಒಂದು ಊಟ ಹಾಗೂ ಐದು ರೂಪಾಯ ಕೂಲಿ ಕೊಡಲು ಪ್ರಾರಂಭಿಸಿದರು.

ಹೀಗೆ ಕಸೂತಿ ಕೆಲಸ ಮಾಡುವ ಮಹಿಳೆಯರು ಇಪ್ಪತ್ತೈದು ಮಂದಿ ಸೇರಿಕೊಂಡರು. ನಂತರ ಅರಮನೆಯಲ್ಲಿಯೇ ಸುಮಾರು ಹದಿನೈದು ವರ್ಷಗಳ ಕಾಲ ಕೆಲಸ ಮಾಡಿದ ಸೀತಾಬಾಯಿ ಈಗಿರುವ ಕೇಂದ್ರದಲ್ಲಿಯೇ ಕಸೂತಿ ಕೆಲಸ ಮಾಡುತ್ತಿದ್ದಾರೆ. ಇಲ್ಲಿ ಕೇಂದ್ರಕ್ಕೆ ಬಂದಾಗ ಪ್ರಾರಂಭದಲ್ಲಿ ಎಂಟು ರೂಪಾಯಿ ಕೂಲಿ ನೀಡಿದರಂತೆ. ಈ ವೇಳೆಗೆ ಹಲವು ಮಹಿಳೆಯರು ಕೇಂದ್ರದಲ್ಲಿ ಕೆಲಸಕ್ಕೆ ಸೇರಿದ ಮೇಲೆ ಅವರಿಗೆ ಕಲೆಯ ಕುರಿತು ತಿಳುವಳಿಕೆ ನೀಡಿದರು. ಅಲ್ಲದೆ ಲಂಬಾಣಿ ಉಡುಗೆಯ ಕಸೂತಿಯನ್ನು ಆಧುನಿಕ ಮಹಿಳೆಯರು ತೊಡುವ ಸೀರೆ, ಬ್ಯಾಗ್, ಕುಡ್ತಾ, ಪರ್ಸ್, ಪಿಲ್ಲೋ ಕವರ್, ಕುಶನ್ ಬೆಡ್, ವಾಲ್ ಹ್ಯಾಂಗಿಂಗ್ ಹೀಗೆ ಅನೇಕ ಮಾದರಿಯ ವಸ್ತುಗಳ ಮೇಲೆ ಇವರ ಕಸೂತಿ ಕಲೆಯು ಕಂಗೊಳಿಸಲು ಪ್ರಾರಂಭಿಸಿತು.

ನಂತರ ಮಹಿಳೆಯರಿಗೆ ಕೂಲಿ ಕಡಿಮೆ ಇದ್ದುದರಿಂದ ಹನ್ನೊಂದು ರೂಪಾಯಿವರೆಗೆ ಹಂತ ಹಂತವಾಗಿ ಕೂಲಿ ಹೆಚ್ಚಿಸಿದರು. ಆದರೆ ಕಡಿಮೆ ಕೂಲಿ ಇವರಿಗೆ ತೃಪ್ತಿ ತರದ ಕಾರಣ ನೀವು ಕೊಟ್ಟ ಕೆಲಸವನ್ನು ನಾವು ಮನೆಯಲ್ಲಿಯೇ ಮಾಡಿ ನಿಮಗೆ ತಂದು ಒಪ್ಪಿಸುತ್ತೇವೆ ಎಂದು ಹೇಳಿದರಂತೆ. ಆಗ ಸೀತಾಬಾಯಿ ಅವರು ಹಗಲಿನಲ್ಲಿ ಬೇರೆ ಹೊಲಗದ್ದೆಗಳಲ್ಲಿ ಕೂಲಿ ಕೆಲಸ ಮಾಡಿದರೆ, ಬಿಡುವಿನ ವೇಳೆಯಲ್ಲಿ ಕಸೂತಿ ಕೆಲಸ ಮಾಡಲು ಪ್ರಾರಂಭಿಸಿದರಂತೆ. ಆಗ ಕಸೂತಿ ಕೇಂದ್ರದ ಮೇಲ್ವಿಚಾರಕರಾದ ಈರಣ್ಣನವರು ಪೀಸ್‌ನ ಮೇಲೆ ಇವರಿಗೆ ಕೂಲಿ ನಿಗದಿಪಡಿಸಿದರು. ಸೀತಾಬಾಯಿ ಅವರು ಈ ರೀತಿಯ ಕೆಲಸ ಸರಿಯಾದದ್ದಲ್ಲ, ನಮಗೆ ಕೂಲಿಯನ್ನೇ ಕೊಡಿ, ದಿನದಿಂದ ದಿನಕ್ಕೆ ಕೂಲಿ ನಮಗೆ ಏರಿಕೆ ಆಗುತ್ತದೆ.

ಹೀಗಾಗಿ ಪೀಸ್‌ನ ಆಧಾರದ ಮೇಲೆ ನಾವು ಕೆಲಸ ಮಾಡಲ್ಲವೆಂದು ಹೇಳಿದರಂತೆ. ಸೀತಾಬಾಯಿಯ ಮಾತನ್ನು ಯಾವ ಮಹಿಳೆಯೂ ಕೇಳಲಿಲ್ಲ. ಅವರೆಲ್ಲ ಪೀಸ್‌ನ ಮೇಲೆ ಕಸೂತಿ ಹಾಕಲು ನಿರ್ಧರಿಸಿದರಂತೆ. ಅಂದಿನಿಂದ ಇಂದಿನವರೆಗೂ ಈ ಪೀಸ್‌ನ ಆಧಾರದ ಮೇಲೆ ಇವರಿಗೆ ಹಣ ನಿಗದಿಪಡಿಸಲಾಗಿದೆ. ಬೆಳಗ್ಗೆಯಿಂದ ಸಂಜೆಯವರೆಗೆ ಕೆಲಸ ಮಾಡಿದರೆ ಹದಿನೈದರಿಂದ ಇಪ್ಪತ್ತು ರೂಪಾಯಿ ಕೂಲಿ ಬೀಳುತ್ತದೆ ಎಂಬುದು ಸೀತಾಬಾಯಿ ಅವರ ಅಭಿಪ್ರಾಯ. ಏನಾದರೂ ಕಸೂತಿ ಕೆಲಸಕ್ಕೆ ಕಡಿಮೆ ಹಣ ಸಿಗುತ್ತೆ ಅಂತ ಕೇಳಿದರೆ ಕೇಂದ್ರದವರು ನಿಮಗೆ ಪಿ.ಎಫ್., ಬೋನಸ್, ರೇಷನ್ ಕೊಡುತ್ತಿವೆ. ಎಲ್ಲ ಅದರಲ್ಲಿ ಸರಿ ಹೊಂದುತ್ತದೆ ಎಂದು ಹೇಳುವರು. ಹಿಂದೆ ಬಹಳ ಬಡತನ. ಹೊಟ್ಟೆಗಾಗಿ ಮಕ್ಕಳನ್ನು ಸರಿಯಾಗಿ ಪರಿಗಣಿಸಲಿಲ್ಲ. ಆಗ ಮಕ್ಕಳು ಹಲವು ಕಾಯಿಲೆಗಳಿಗೆ ಒಳಗಾಗಿ ಸಾವನ್ನಪ್ಪಿದರು. ಚಿಕ್ಕ ಚಿಕ್ಕ ಮಕ್ಕಳನ್ನು ಬಿಟ್ಟು ಹೋಗುತ್ತಿದ್ದರಂತೆ. ಆದರೆ ಮಕ್ಕಳ ಲಾಲನೆ ಪಾಲನೆ ಕಡಿಮೆ. ಹುಲ್ಲು ಕೊಯ್ಯಲು, ಕಟ್ಟಿಗೆ ಮಾರಲು ಹೋಗುವ ಇವರ ಬದುಕು ಅಂದು ತುಂಬ ಕಷ್ಟದಾಯಕವಾಗಿತ್ತು. ಹೀಗಾಗಿಯೇ ಕುಶಲ ಕೇಂದ್ರದವರು ಕೊಡುತ್ತಿದ್ದ ಆಹಾರ ಸಾಮಗ್ರಿಗಳಿಂದ ಅವರು ಹೇಳಿದ ಹಾಗೆ ಕೆಲಸ ಮಾಡುತ್ತಿದ್ದರು.

ಸೀತಾಬಾಯಿ ಅವರು ಈಗ ಗಂಡನನ್ನು ಕಳೆದುಕೊಂಡು ಮಗ ಹಾಗೂ ಸೊಸೆಯ ಆಶ್ರಯದಲ್ಲಿದ್ದಾರೆ. ಇವರು ಕೇಂದ್ರದಲ್ಲಿಯೇ ಕೆಲಸಕ್ಕೆ ಹೋಗುತ್ತಿದ್ದಾರೆ. ಬೇರೆ ಕಡೆ ಕೆಲಸಕ್ಕೆ ಹೋದರೆ ಪ್ರತಿದಿನ ಕೆಲಸ ಸಿಗಲಾರದು. ಹೀಗಾಗಿ ಕೇಂದ್ರವನ್ನೇ ಇವರು ಹೆಚ್ಚು ಅವಲಂಬಿಸಿದ್ದಾರೆ. ಜೊತೆಗೆ ಕೇಂದ್ರದ ವತಿಯಿಂದ ನೀಡುವ ಆಹಾರ ಸಾಮಗ್ರಿ ಇವರಿಗೆ ಪ್ರಮುಖ ಆಧಾರವಾಗಿವೆ. ಈಗ ಸೀತಾಬಾಯಿಯವರು ತಿಂಗಳಿಗೆ ಒಂಬೈನೂರು ರೂಪಾಯಿ ಪಿಂಚಣಿಯನ್ನು ಪಡೆಯುತ್ತಿದ್ದಾರೆ. ಕೆಲಸ ಬಿಟ್ಟು ಈಗಾಗಲೇ ಐದರಿಂದ ಆರು ವರ್ಷಗಳಾದವು. ಆದರೂ ಕಸೂತಿಯ ಮೇಲಿನ ಆಸಕ್ತಿ ಜೊತೆಗೆ ಬರುವ ರೇಷನ್ ಇವುಗಳ ವ್ಯಾಮೋಹದಿಂದ

ಮತ್ತೆ ಕೇಂದ್ರದಲ್ಲಿ ಕೆಲಸಕ್ಕೆ ಹೋಗುತ್ತಿದ್ದಾರೆ. ಈಗ ಪಿ.ಎಫ್ ಮುರಿಯಲಾರರು. ಈ ಹಿಂದೆ ಮೂರು ನೂರು ರೂಪಾಯಿಯ ಕೆಲಸ ಮಾಡಿದರೆ ರೇಷನ್ ಕೊಡುತ್ತಿದ್ದರು. ಆದರೆ ಈಗ ಆರುನೂರು ರೂಪಾಯಿ ಕೆಲಸ ಮಾಡಿದರೆ ಸಾಕು ಬೇರೆ ಕಡೆಗೆ ಕೂಲಿ ಕೆಲಸಕ್ಕೆ ಹೋಗಬಹುದು. ಅಲ್ಲದೆ ಆರು ನೂರು ರೂಪಾಯಿ ಕೆಲಸ ಮಾಡಿದರೆ ತುಂಬಾ ರೇಷನ್ ಕೊಡುವರು. ಈಗ ಆರು ನೂರು ರೂಪಾಯಿ ಕೆಲಸ ಮಾಡಿದರೂ ಕುಟುಂಬ ನಿರ್ವಹಿಸಲು ಆಗಲಾರದು. ಏಕೆಂದರೆ ಪೇಟೆಯಲ್ಲಿ ಕೊಂಡುಕೊಳ್ಳುವ ವಸ್ತುಗಳೆಲ್ಲ ತುಂಬ ದುಬಾರಿ ಆಗುತ್ತಲಿವೆ ಎಂಬ ಅಭಿಪ್ರಾಯ ಸೀತಾಬಾಯಿ ಅವರದಾಗಿದೆ.

ಹೀಗಾಗಿ ಹದಿನೈದು ದಿನ ಕೇಂದ್ರದ ಕೆಲಸ ಮಾಡಿದರೆ ಉಳಿದ ಹದಿನೈದು ದಿನ ಹೊಲಗದ್ದೆಗಳ ಕೆಲಸ ಮಾಡುವರು. ಕೇಂದ್ರದ ವತಿಯಿಂದ ನಮಗೆ ಆದಾಯವೆಂದರೆ ಪಿ.ಎಫ್ ಹಾಗೂ ರೇಷನ್ ಮುಖ್ಯವಾದುದೆನ್ನುವರು. ಈಗ ಕೇಂದ್ರದಲ್ಲಿ ಕೆಲಸ ಮಾಡಿದ ಆರು ಮಂದಿ ಮಹಿಳೆಯರಿಗೆ ಪಿಂಚಣಿ ಬರುತ್ತದೆ. ಪಿಂಚಣಿ ಬರಬೇಕಾದರೆ ಹತ್ತು ವರ್ಷ ಕೇಂದ್ರದಲ್ಲಿ ಸೇವೆ ಸಲ್ಲಿಸಬೇಕು. ಐವತ್ತು ವರ್ಷದ ಬಳಿಕ ಇವರಿಗೆ ಪಿಂಚಣಿ ಬರುತ್ತದೆ. ಸೀತಾಬಾಯಿ, ರಾಮಬಾಯಿ, ಕಾಸಿಬಾಯಿ, ರುಕ್ಕುಬಾಯಿ ಹಾಗೂ ಸೀತಾಬಾಯಿ, ಪಾಪಬಾಯಿ ಆರು ಮಂದಿ ಈಗ ಕೇಂದ್ರದ ವತಿಯಿಂದ ಪಿಂಚಣಿ ಪಡೆಯುತ್ತಿದ್ದಾರೆ.

ಅಲ್ಪ ಸ್ವಲ್ಪ ಜಮೀನನ್ನು ಹೊಂದಿರುವ ಸೀತಾಬಾಯಿ ಕಸೂತಿ ಕಲೆಯಿಂದ ಕೇಂದ್ರದ ಬೆಳವಣಿಗೆಗೆ ಮುಖ್ಯ ಕಾರಣಕರ್ತರು. ಲೈಲಾ ತಯ್ಯಾಬ್ಜಿ ಮತ್ತು ಲಕ್ಷ್ಮಿ ಎಂಬ ಡಿಸೈನರ್‌ಗಳು ಈ ಕೇಂದ್ರಕ್ಕೆ ಮಹತ್ತರ ಸಹಾಯ ಮಾಡಿದ್ದಾರೆ. ಏಕೆಂದರೆ ಕಸೂತಿ ಕಲೆಯು ಹೊಸ ನಾವೀನ್ಯತೆ ಪಡೆಯಲು ಇವರ ಪ್ರೋತ್ಸಾಹ ಪ್ರಮುಖ ಕಾರಣ. ಸಂಡೂರು ಪ್ರದೇಶದ ಹಲವು ತಾಂಡಗಳ ಮಹಿಳೆಯರಲ್ಲದೇ ಬಳ್ಳಾರಿ ಜಿಲ್ಲೆಯ ಇತರೆ ತಾಲೂಕಿನಲ್ಲಿಯೂ ಇದರ ವ್ಯಾಪ್ತಿ ಹೆಚ್ಚಿದೆ.

ಬುಡಕಟ್ಟು ಸಮುದಾಯವಾದ ಲಂಬಾಣಿಗರ ಪಾರಂಪರಿಕ ಕಸೂತಿ ಕಲೆಯನ್ನು ಜೀವಂತಗೊಳಿಸುವಲ್ಲಿ ಕೇಂದ್ರದ ಪಾತ್ರ ಮಹತ್ತರವಾದದ್ದು. ಹಲವು ತಾಂಡಗಳಿಗೆ ಪೀಸ್‌ನ ಆಧಾರದ ಮೇಲೆ ಕೆಲಸ ಕೊಟ್ಟು ಅವರ ಶ್ರಮಕ್ಕೆ ತಕ್ಕಂತೆ ಕೂಲಿ ಹಣ ನೀಡುತ್ತಿದೆ. ಆದರೆ ಕೇಂದ್ರದಲ್ಲಿ ದುಡಿಯುವ ಮಹಿಳೆಯರಿಗೆ ಈ ಕೂಲಿ ಹಣ ಕುಟುಂಬ ಸಾಗಿಸಲು ಸಾಕಾಗುತ್ತಿಲ್ಲ. ಇಲ್ಲಿ ತಯಾರಿಸುವ ವಸ್ತುಗಳು ದೇಶ ವಿದೇಶದ ನಾನಾ ಭಾಗಗಳಲ್ಲಿ ಸರಬರಾಜಾಗುತ್ತವೆ. ದಾರ ಹಾಗೂ ಸೂಜಿಯ ಮೂಲಕ ಹೆಣೆಯುವ ಕಸೂತಿ ಕಲೆ ಇವರ ಸಂಸ್ಕೃತಿಯ ಪ್ರತೀಕವಾಗಿದೆ. ತಮ್ಮ ಮನೆಯ ಬದುಕಿನೊಂದಿಗೆ ಒಂದು ಪ್ರವೃತ್ತಿಯಾಗಿ ಬೆಳೆದ ಈ ಕಲೆಯು ಇಂದು ಆಧುನಿಕ ಜಗತ್ತಿನಲ್ಲಿ ಮಹತ್ತರ ಪಾತ್ರ ವಹಿಸುತ್ತಿವೆ. ಹೀಗೆ ಕಸೂತಿ ಕಲೆಯ ಮೂಲಕ ಸಂಸಾರವನ್ನು ಸಾಗಿಸುತ್ತಿರುವ

ಸೀತಾಬಾಯಿ ನಿವೃತ್ತಿಯ ನಂತರವು ಕೇಂದ್ರದಲ್ಲಿ ಕೆಲಸಕ್ಕೆ ಹೋಗುತ್ತಿದ್ದಾಳೆ. ಪಿಂಚಣಿ ಪಡೆಯುವುದರ ಜೊತೆಗೆ ಕೇಂದ್ರದವರು ಕೊಡುವ ಆಹಾರ ಸಾಮಗ್ರಿಗಳನ್ನು ಪಡೆಯುವ ಇವರು ೨೫ ಕೆ.ಜಿ. ಅಕ್ಕಿ, ೨೭ ಕೆ.ಜಿ. ಜೋಳ, ೩ ಕೆ.ಜಿ. ತೊಗರಿ ಬೇಳೆ, ೧ ಕೆ.ಜಿ. ಪುಟಾಣಿ, ೨ ಕೆ.ಜಿ. ಬೆಲ್ಲ, ೨ ಕೆ.ಜಿ. ರವೆ, ೧ ಕೆ.ಜಿ. ಒಣಮೆಣಸಿನಕಾಯಿ, ೨ ಕೆ.ಜಿ. ಎಣ್ಣೆ, ೫ ಕೆ.ಜಿ. ಗೋಧಿ, ಹೀಗೆ ಒಟ್ಟು ೯ ರೀತಿಯ ಆಹಾರ ಸಾಮಗ್ರಿಗಳನ್ನು ಕೇಂದ್ರದವರು ನೀಡುವರು. ಇವರ ತಿಂಗಳ ಕೆಲಸದಲ್ಲಿ ೧೧೫ ರೂ. ಮುರಿಯುವರು.

ಒಟ್ಟಾರೆ ಕುಶಲ ಕಲಾಕೇಂದ್ರದಲ್ಲಿ ತನ್ನ ಮುಪ್ಪಾದ ವಯಸ್ಸಿನಲ್ಲೂ ಕೆಲಸ ಮಾಡುತ್ತಿರುವ ಸೀತಾಬಾಯಿ ತುಂಬ ಶ್ರಮಜೀವಿ ಆಗಿದ್ದಾರೆ. ಸಂಡೂರು ಕೇಂದ್ರವು ಬೆಳೆಯಲು ಇವರ ಶ್ರಮವು ಅಪಾರವಾದದ್ದಾಗಿದೆ.

**ದುರ್ಗಿಬಾಯಿ ಬೈರಾ ನಾಯಕ**

ಸಂಡೂರು ಕುಶಲ ಕಲಾಕೇಂದ್ರಕ್ಕೆ ಅಡಿಗಲ್ಲಾದ ದುರ್ಗಿಬಾಯಿ ಅವರು ಸುಶೀಲ ನಗರದವರು. ಭೀಮ್ಲನಾಯ್ಕ ಹಾಗೂ ಹೆಮ್ಲಿಬಾಯಿ ಇವಳ ತಂದೆತಾಯಿಗಳು. ದುರ್ಗಿಬಾಯಿ ಅವರನ್ನು ಭೈರನಾಯ್ಕನಿಗೆ ಕೊಟ್ಟು ಮದುವೆ ಮಾಡಿಸಿದರು. ಇವರಿಗೊಬ್ಬ ಮಗ ಹಾಗೂ ಮೂವರು ಹೆಣ್ಣು ಮಕ್ಕಳು. ಎಲ್ಲ ಮಕ್ಕಳಿಗೂ ಮದುವೆ ಮಾಡಿದ್ದಾರೆ. ಸುಮಾರು ಎಂಬತ್ತು ವರ್ಷ ವಯಸ್ಸಿನ ದುರ್ಗಿಬಾಯಿ ಅವರು ಈ ಕೇಂದ್ರದ ಬೆಳವಣಿಗೆಗೆ ಇಪ್ಪತ್ತೈದು ವರ್ಷಗಳ ಕಾಲ ದುಡಿದಿದ್ದಾರೆ. ಆದರೆ ಇವರಿಗೆ ಕೇಂದ್ರದಿಂದ ಯಾವುದೇ ರೀತಿಯ ಸೌಲಭ್ಯ ದೊರೆಯುತ್ತಿಲ್ಲ. ಪಿಂಚಣಿ ಸಹ ಇವರಿಗೆ ನೀಡುತ್ತಿಲ್ಲ. ಕಾರಣ ಕೇಳಿದರೆ ಇವರು ಕೇಂದ್ರಕ್ಕೆ ಸೇರುವಾಗ ಇವರ ವಯಸ್ಸನ್ನು ಹೆಚ್ಚಾಗಿ ಬರೆದಿದ್ದರಿಂದ ಸೌಲಭ್ಯದಿಂದ ವಂಚಿತವಾಗಿದ್ದಾರೆ. ಆದರೂ ಈ ಕೇಂದ್ರಕ್ಕೆ ಕಸೂತಿ ಕೆಲಸ ಮಾಡಲಿಕ್ಕೆ ಸೊಸೆ ಹಾಗೂ ಮಕ್ಕಳನ್ನು ಸೇರಿಸಿದ್ದಾಳೆ. ನನಗೆ ಯಾವುದೇ ಸೌಲಭ್ಯ ಸಿಗದಿದ್ದರೂ ಪರವಾಗಿಲ್ಲ. ನನ್ನ ಮಕ್ಕಳು ಪಡೆಯಲಿ ಎಂಬುದು ದುರ್ಗಿಬಾಯಿ ಅವರ ಅಭಿಪ್ರಾಯ. ಇದರಿಂದ ಸಮುದಾಯದ ಕಸೂತಿ ಕಲೆಯು ಉಳಿಯುವಂತಾಗುತ್ತದೆ.

ಕಸೂತಿ ಕಲೆಯನ್ನು ಹೆಚ್ಚಾಗಿ ಅವಿದ್ಯಾವಂತರೇ ಕಲಿತಿರುತ್ತಾರೆ. ವಿದ್ಯಾವಂತರಾದ ಮಹಿಳೆಯರು ಈ ಕಲೆಯ ಕಡೆಗೆ ಮುಖ ಮಾಡುತ್ತಿಲ್ಲ. ಹಾಗಾಗಿ ಈ ಕಲೆ ಉಳಿಯಬೇಕಾದರೆ ಅವಿದ್ಯಾವಂತರಿಂದಲೇ ಸಾಧ್ಯ ಎಂದು ದುರ್ಗಿಬಾಯಿ ಹೇಳುವರು. ಪ್ರಾರಂಭದಲ್ಲಿ ಲಂಬಾಣಿ ಬಟ್ಟೆಗಳ ಮೇಲೆ ಕಸೂತಿ ಮಾಡುತ್ತಿದ್ದರು. ಆದರೆ ಈಗ ಆಧುನಿಕತೆಯ ಪ್ರಭಾವದಿಂದ ಅನೇಕ ಮಾದರಿಯ ಉಡುವ ಹಾಗೂ ತೊಡುವ ವಸ್ತುಗಳ ಮೇಲೆ ಈ ಸಮುದಾಯದ ಮೂಲಚಹರೆಗಳು ಕಂಗೊಳಿಸುತ್ತಿವೆ. ದೇಶ ವಿದೇಶದ ಜನರಿಗೆ



**ಕಸೂತಿ ಕಲಾವಿದರು**



ಸೀತಾಬಾಯಿ ಬದ್ಯಾ ನಾಯಕ



ತಿಪ್ಪಿಬಾಯಿ ಚಂದ್ಯಾ ನಾಯಕ



ಸೀತಾಬಾಯಿ ಕಸನ್ಯಾ ನಾಯಕ



ಕಸೂತಿ ಮಾಡುತ್ತಿರುವ ತಿಪ್ಪಿಬಾಯಿ

ತುಂಬ ಪ್ರಿಯವಾದ ಕಸೂತಿ ಕಲೆಯು ಇಂದು ಹೊಸ ಮಾದರಿಯಲ್ಲಿ ಬಳಕೆಯಾಗುತ್ತಿದೆ. ಪ್ರಸ್ತುತ ಸಂದರ್ಭದಲ್ಲಿ ಮಗ ಹಾಗೂ ಸೊಸೆಯ ಆಶ್ರಯದಲ್ಲಿ ಇವರು ಕಾಲ ಕಳೆಯುತ್ತಿದ್ದಾಳೆ.

**ಶಾಂತಿಬಾಯಿ ಕಾಸ್ಯಾ ನಾಯಕ**

ಶಾಂತಿಬಾಯಿ ಅವರು ಸಂಡೂರಿನ ಕುಶಲ ಕಲಾಕೇಂದ್ರದ ಬೆಳವಣಿಗೆಗೆ ಕಾರಣಕರ್ತರಲ್ಲಿ ಒಬ್ಬರು ಅತ್ಯಂತ ಹಿಂದುಳಿದ ಜಾತಿಯಾದ ಲಂಬಾಣಿ ಸಮುದಾಯದವರಾದ ಇವರು ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ಸುಶೀಲಾ ನಗರದಲ್ಲಿ ೨೨.೦೭.೧೯೭೪ರಲ್ಲಿ ಜನಿಸಿದರು. ತಂದೆ ಕಲ್ಹಳ್ಳಿ ಪೀರ್‍ಯಾ ನಾಯ್ಕ, ತಾಯಿ ಸೀತಾಬಾಯಿ. ತುಂಬ ಬಡತನದಲ್ಲಿಯೇ ಬಾಲ್ಯವನ್ನು ಕಳೆದ ಶಾಂತಿಬಾಯಿ ಅವರು ಮೂರನೇ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿದ್ದಾರೆ.

ಬಡತನದಲ್ಲಿಯೇ ಜನಿಸಿದ ಶಾಂತಿಬಾಯಿಗೆ ಬಾಲ್ಯದ ದಿನಗಳು ತುಂಬ ಕಷ್ಟಮಯವಾಗಿದ್ದವು. ಸ್ಮಶಾನದಲ್ಲಿ ಬಿಟ್ಟ ಬಟ್ಟೆಯನ್ನು ಚೆನ್ನಾಗಿ ತೊಳೆದು ಇವರ ತಂದೆ ಇವರಿಗೆ ಹೊಲಿಸಿಕೊಡುತ್ತಿದ್ದರಂತೆ. ಬಟ್ಟೆಯ ತುಂಡೇ ಇವರ ಜಡೆಗೆ ರಿಬ್ಬನ್ ಆಗಿದ್ದವು. ತಾಯಿ ಕೂಲಿ ಮಾಡಿ ಸಂಸಾರವನ್ನು ಸಾಕುತ್ತಿದ್ದಳು. ಇವರ ತಂದೆ ಆರು ತಿಂಗಳು ಜೈಲಲ್ಲಿದ್ದರೆ ಮತ್ತೆ ಆರು ತಿಂಗಳು ಊರಲ್ಲಿರುತ್ತಿದ್ದರಂತೆ. ಇವರ ತಂದೆ ಹೊಟ್ಟೆಯ ಹಸಿವೆಗೆ ಕಳ್ಳತನ ಮಾಡುತ್ತಿದ್ದ. ಆದರೆ ಕಳ್ಳತನ ಮಾಡಿದ್ದನ್ನು ಮನೆಗೆ ಕೊಡುತ್ತಿರಲಿಲ್ಲ. ಸ್ನೇಹಿತರಿಗೆ ಕೊಟ್ಟು ಸಹಕರಿಸುತ್ತಿದ್ದ. ಇವರ ತಂದೆತಾಯಿಗೆ ಹನ್ನೊಂದು ಜನ ಮಕ್ಕಳು. ಹೀಗಾಗಿ ತಾಯಿಯೇ ಇವರಿಗೆ ಆಸರೆ ಆಗಿದ್ದಳು. ಈ ಕಸೂತಿ ಕಲೆಗೆ ಬರಬೇಕಾದರೆ ಇವರ ತಂದೆಯೇ ಕಾರಣ.

ಇವರು ಇತ್ತೀಚೆಗೆ ಕನ್ನಡ ಓದಲು, ಬರೆಯಲು ಅಲ್ಪ ಸ್ವಲ್ಪ ಕಲಿತಿದ್ದಾರೆ. ಲಂಬಾಣಿ, ಕನ್ನಡ, ಹಿಂದಿ ಭಾಷೆಗಳು ಇವರಿಗೆ ಮಾತನಾಡಲು ಬರುತ್ತವೆ. ಸುಶೀಲಾ ನಗರದಲ್ಲಿ ೧೯೯೨ರಲ್ಲಿ ಕಾಸ್ಯಾನಾಯ್ಕನೊಂದಿಗೆ ಇವರಿಗೆ ಮದುವೆ ಮಾಡಿಸಿದರು. ಮದುವೆ ಆದ ಕೆಲ ದಿನಗಳ ನಂತರ ಇವರ ಸಂಬಂಧದಲ್ಲಿ ಒಡಕುಂಟಾಗಿ ಗಂಡ ಹೆಂಡತಿ ಈಗ ದೂರದೂರನೇ ಬದುಕುತ್ತಿದ್ದಾರೆ. ಈಗ ತನ್ನ ಮಗ ಸಾಹಿಲ್ ನಾಯ್ಕ್ ಆರನೇ ತರಗತಿ ಯಲ್ಲಿ ಅಭ್ಯಾಸ ಮಾಡುತ್ತಿದ್ದಾನೆ. ಮಗನನ್ನು ಚೆನ್ನಾಗಿ ಓದಿಸಿ ಈ ಕಸೂತಿ ಕಲೆಯ ವಲಯದಲ್ಲಿಯೇ ಬೆಳೆಯುವಂತೆ ಮಾಡುವ ಆಸೆಯನ್ನು ಶಾಂತಿಬಾಯಿಯ ಹೊಂದಿದ್ದಾಳೆ. ಶಾಂತಿಬಾಯಿಯ ತಾಯಿ ಕ್ಯಾನ್ಸರ್ ಕಾಯಿಲೆಯಿಂದ ಬಳಲಿ ಸಾವನಪ್ಪಿದರು. ತಂದೆ ತಾಯಿಗಿಂತ ಮುಂಚೆಯೇ ತೀರಿಕೊಂಡಿದ್ದಾರೆ. ಗಂಡ ದೂರವಿದ್ದರೂ ಅವರಿಂದ ಏನು ಸಮಸ್ಯೆಯಿಲ್ಲ. ಅತ್ತೆ ಮಾವಂದಿರ ಜೊತೆ ಚೆನ್ನಾಗಿದ್ದಾಳೆ. ಅವರು ಮಾತಾಡಿಸುತ್ತಾರೆ.

ಕೆಲವೊಂದು ಕಾರ್ಯಕ್ರಮಕ್ಕೆ ಮನೆಗೆ ಸಹ ಕರೆದು ಒಳ್ಳೆಯ ಸತ್ಕಾರ ಮಾಡುವರು. ಶಾಂತಿಬಾಯಿಗೆ ಹೊಲ ಗದ್ದೆಗಳಿಲ್ಲ. ಕೂಲಿ ಕೆಲಸ ಮಾಡಿ ಜೀವಿಸುತ್ತಿದ್ದರು. ಗಂಡಸಿನಂತೆ ಕಷ್ಟಪಟ್ಟು ಕೆಲಸ ಮಾಡಿ ಬದುಕನ್ನು ಕಟ್ಟಬೇಕೆಂಬ ಬಯಕೆ ಉಳ್ಳವಳಾಗಿದ್ದಳು.

ಶಾಂತಿಬಾಯಿಗೆ ಈಗಿನ ಬದುಕು ತುಂಬ ಸಂತೋಷಮಯವಾಗಿದೆ. ದೇವರ ದಯೆಯಿಂದ ಆರೋಗ್ಯ ಚೆನ್ನಾಗಿದ್ದರೆ ಈ ಕಸೂತಿ ಕಲೆಯ ಬದುಕಲ್ಲೇ ಹೊಸ ಬದುಕನ್ನು ಸೃಷ್ಟಿಸುತ್ತಾಳೆ ಎಂಬ ಭರವಸೆ ನೀಡಿದ್ದಾಳೆ. ಸದ್ಯ ಶಾಂತಿಬಾಯಿ ಅವರು ಕುಶಲ ಕಲಾಕೇಂದ್ರದಲ್ಲಿ ಗುಣಮಟ್ಟ ಪರಿಶೀಲನೆ, ಮಾದರಿಗಾಗಿ ಕ್ಷೇತ್ರಕಾರ್ಯಕ್ಕೆ ಹೋಗುವಳು. ಮೇಲ್ವಿಚಾರಕರಂತೆ ಕೆಲಸಗಳನ್ನು ನಿರ್ವಹಣೆ ಮಾಡುವಳು. ಕಸೂತಿ ಕೆಲಸಗಾರರ ಮೇಲೆ ಮೇಲ್ವಿಚಾರಕರಂತೆ ಗುಣಮಟ್ಟವನ್ನು ಪರಿಶೀಲನೆ ಸಹ ಮಾಡುವರು.

ಶಾಂತಿಬಾಯಿ ಮೊದಲು ಹೊಲಗದ್ದೆಗಳ ಕೆಲಸ ಮಾಡುತ್ತಿದ್ದಳು. ಅವಳ ಅಕ್ಕ ದೇವಿಬಾಯಿ ನರಸಾಪುರ ಎಂಬ ಊರಲ್ಲಿ(ಎನ್.ಎಂ.ಡಿ.ಸಿ. ಹತ್ತಿರ) ವಾಸವಾಗಿದ್ದಳು. ಅವರ ಹತ್ತಿರವೇ ಕೆಲವು ದಿನಗಳವರೆಗೆ ಬದುಕು ನಿರ್ವಹಿಸಿದಳು. ಅನಂತರ ಬಾವಳ್ಳಿಯಲ್ಲಿ ಕೆಲವು ದಿನಗಳವರೆಗೆ ಇದ್ದಳು. ನಂತರ ಅವರ ಅಪ್ಪ ಗೃಹಿಣಿ ಮಂಡಳಿಗೆ ಸೇರಿಸಿದ್ದರು. ಅದನ್ನು ಸಂಡೂರಿನ ಕೃಪಾ ನಿಲಯದವರಾದ ಚರ್ಚಿನವರು ನಡೆಸುತ್ತಿದ್ದರು. ಅಲ್ಲಿ ಹತ್ತು ತಿಂಗಳ ಕಾಲ ತರಬೇತಿ ಪಡೆದಳು. ಆಗ ಶಾಂತಿಬಾಯಿಗೆ ಹದಿನೇಳು ವಯಸ್ಸಾಗಿತ್ತು. ಗೃಹಿಣಿ ಮಂಡಳಿ ತರಬೇತಿ ಮುಗಿದ ನಂತರ ಹದಿನೆಂಟನೇ ವಯಸ್ಸಿನಲ್ಲಿ ಮದುವೆಯಾಗಿ ಸುಖಕರವಾದ ದಾಂಪತ್ಯ ಬದುಕನ್ನು ನಿರ್ವಹಿಸಿದಳು. ಮದುವೆ ಆದ ಮೇಲೆ ಅವರು ಪಡೆದ ತರಬೇತಿ ಯಾವುದೇ ರೀತಿಯಲ್ಲಿ ಅವರಿಗೆ ಪ್ರಯೋಜನ ಆಗಲಿಲ್ಲವೆಂದು ದುಃಖಿತರಾದರು. ಕೊನೆಗೆ ಗೃಹಿಣಿ ಮಂಡಳಿಯವರು ನೀಡಿದ ಪ್ರಮಾಣ ಪತ್ರದ ಮೇಲೆ ಗ್ರಾಮೀಣ ಪ್ರಗತಿ ಬ್ಯಾಂಕಿನಲ್ಲಿ ಮೂರು ಸಾವಿರ ರೂಪಾಯಿ ಸಾಲ ಪಡೆದಳು. ಆ ಹಣದಿಂದ ಹೊಲಿಗೆಯಂತ್ರ ಪಡೆದು ಬಡತನದಲ್ಲಿಯೇ ಬದುಕಿನ ಪ್ರಯಾಣ ಬೆಳೆಸಿದಳು.

ಸಂಡೂರಿನ ಕುಶಲ ಕಲಾಕೇಂದ್ರದಲ್ಲಿ ಆರು ತಿಂಗಳ ಕಾಲ ತರಬೇತಿ ಪಡೆದರು. ಈ ರೀತಿಯ ಕಸೂತಿ ಕಲೆಯ ತರಬೇತಿ ಪಡೆದ ಮೇಲೆ ಮೂರು ವರ್ಷಗಳ ಕಾಲ ಪೀಸ್ ರೇಟಿನ ಮೇಲೆ ಕೇಂದ್ರದಲ್ಲಿಯೇ ಕೆಲಸ ಮಾಡಿದ್ದಾಳೆ. ಶಾಂತಿಬಾಯಿ ಮಾಡುವ ಪ್ರತಿಯೊಂದು ಕಸೂತಿ ಕಲೆಯು ಸೃಜನಶೀಲವಾಗಿದ್ದವು. ಇವುಗಳಿಂದಾಗಿ ಆಕೆಯು ಕೆಲವೊಂದು ಉಸ್ತುವಾರಿಯ ಜವಾಬ್ದಾರಿಯನ್ನು ವಹಿಸಿದರು. ಏಕೆಂದರೆ ಕೇಂದ್ರದವರು ಕೊಡುವ ಪ್ರತಿಯೊಂದು ಸಲಹೆಗಳನ್ನು ಸ್ವೀಕರಿಸಿ ಆಕೆ ಪ್ರಾಮಾಣಿಕವಾಗಿ ಕೆಲಸವನ್ನು ನಿರ್ವಹಿಸಿದ್ದಾಳೆ. ಹೀಗಾಗಿ ಕೇಂದ್ರದ ಎಲ್ಲಾ ಅಧಿಕಾರಿಗಳಿಗೆ ಶಾಂತಿಬಾಯಿ ಪ್ರೀತಿ ಪಾತ್ರಳಾಗಿದ್ದಳು.

ಈ ಕೇಂದ್ರಕ್ಕೆ ದೊಡ್ಡ ದೊಡ್ಡ ವಿನ್ಯಾಸಗಾರರು ಬರುತ್ತಿದ್ದರು. ಬೆಂಗಳೂರು, ದೆಹಲಿ ಹೀಗೆ ಅನೇಕ ಕಡೆಯಿಂದ ಬರುತ್ತಿದ್ದರು. ಅವರು ಶಾಂತಿಬಾಯಿಯವರ ಕುಶಲಕಲೆಯನ್ನು ಗಮನಿಸುತ್ತಿದ್ದರು. ಕೊನೆಗೆ ಅವರು ಇವಳಿಗೆ ಕಾರ್ಯಾಗಾರಗಳಿಗೆ ಭಾಗವಹಿಸಲು ಅವಕಾಶ ಮಾಡಿಕೊಟ್ಟರು. ಆಗ ಬೆಂಗಳೂರು, ದೆಹಲಿ, ಮದ್ರಾಸ್‌ಗಳಲ್ಲಿ ಈ ಕಸೂತಿ ಕಲೆಯ ಪ್ರದರ್ಶನಕ್ಕೆ ಹೋಗಿದ್ದರು. ಕೇಂದ್ರಗಲ್ಲಿ ಕೆಲಸದ ಗುಣಾತ್ಮಕತೆ ಕಡಿಮೆಯಾಗಿತ್ತು. ಆಗ ಶಾಂತಿಬಾಯಿಗೆ ಕೆಲವೊಂದು ತಾಂಡಾಗಳಿಗೆ ಹೋಗಿ ಈ ಕೆಲಸದ ಬಗೆಗೆ ಮನವರಿಕೆ ಮಾಡಲು ತಿಳಿಸಿದರು. ಅಲ್ಲದೆ ಬಟ್ಟೆಗಳ ಮೇಲೆ ವಿವಿಧ ರೀತಿಯ ಕಸೂತಿ ಹಾಕಿಸಲು ತಾಂಡಗಳಲ್ಲಿ ಸಂಚರಿಸಿದರು. ಬೆಳಗ್ಗೆ ತಾಂಡಾಗಳಿಗೆ ಹೋಗಿ ಮಹಿಳೆಯರಿಗೆ ಪೀಸ್‌ಗಳ ಆಧಾರದ ಮೇಲೆ ಕೆಲಸ ಕೊಟ್ಟು, ನಂತರ ಮಧ್ಯಾಹ್ನ ಕೇಂದ್ರದಲ್ಲಿ ಬಂದು ಕಸೂತಿ ಕೆಲಸ ಮಾಡುತ್ತಿದ್ದಳು.

ಹೀಗೆ ಕೆಲಸ ಮಾಡಿದ ಶಾಂತಿಬಾಯಿ ಹಂತ ಹಂತವಾಗಿ ಬೆಳೆಯಲಾರಂಭಿಸಿದಳು. ಕೊನೆಗೆ ಈ ಕೆಲಸದ ಮೇಲುಸ್ತುವಾರಿಯಾಗಿ ಮೇಲ್ವಿಚಾರಕರು ಕೆಲಸ ಕೊಟ್ಟರು. ಗುಣಮಟ್ಟ ನಿಯಂತ್ರಣ ಮಾಡುವ ಜವಾಬ್ದಾರಿ ನೀಡಿದರು. ನಂತರ ಸಂಡೂರು ಕುಶಲ ಕಲಾಕೇಂದ್ರಕ್ಕೆ ಲೈಲಾ ತಯ್ಯಾಬ್ಜಿ ದೊಡ್ಡ ವಿನ್ಯಾಸಗಾರರಾಗಿದ್ದಾರೆ. ಅವರು ಈ ಕೇಂದ್ರಕ್ಕೆ ಬಲಗೈ ರೀತಿಯಲ್ಲಿದ್ದರು. ಒಳ್ಳೆಯ ರೀತಿಯಲ್ಲಿ ಈ ಕೇಂದ್ರಕ್ಕೆ ಸಹಾಯ ಮಾಡುತ್ತಿದ್ದಳು. ಅವರು ಶಾಂತಿಬಾಯಿಯನ್ನು ಗುರುತಿಸಿ ಈ ಕೆಲಸಕ್ಕೆ ತುಂಬಾ ಪ್ರೋತ್ಸಾಹಿಸಿದರು. ನಿನ್ನಲ್ಲಿ ಈ ಕಸೂತಿ ಕಲೆಯ ಬಗ್ಗೆ ಒಳ್ಳೆಯ ಬುದ್ಧಿವಂತಿಕೆ ಇದೆ ಎಂದು ಹುರಿದುಂಬಿಸಿದರಂತೆ. ನನಗೆ ಕೆಲಸ ಮಾಡಿಕೊಡುತ್ತೀಯ ಎಂಬ ನಂಬಿಕೆ ನನ್ನಲ್ಲಿದೆ ಎಂದು ಕೆಲವೊಂದು ಕಸೂತಿ ಕಲೆಯ ಕೆಲಸ ಕೊಟ್ಟರು.

ವಾಲ್‌ಹ್ಯಾಂಗಿಂಗ್ ಬಗ್ಗೆ ಲೈಲಾ ತಯಾಬ್ಜಿಯವರು ಒಂದು ಐಡಿಯ ನೀಡಿದರು. ಆ ಹ್ಯಾಂಗಿಂಗ್ ಮೇಲೆ ಅನೇಕ ರೀತಿಯ ಚಿತ್ರದ ರೂಪರೇಖೆ ಹಾಕಿ ಇವುಗಳ ಮೇಲೆ ಕಸೂತಿಯನ್ನು ನಿನ್ನ ಮನಸ್ಸಿನಂತೆ ಅಚ್ಚುಕಟ್ಟಾಗಿ ಮಾಡುವಂತೆ ಸಲಹೆ ನೀಡಿದರಂತೆ. ಆಗ ಬಟ್ಟೆ ವರ್ಣ ಸಂಯೋಜನೆ ಎಲ್ಲವನ್ನು ಲೈಲಾ ತಯ್ಯಾಬ್ಜಿಯವರು ನೀಡಿದರು. ಅವರು ಹೇಳಿದ ಒಂದು ವಾಲ್‌ಹ್ಯಾಂಗಿಂಗ್ ಮಾಡಲು ಆರು ತಿಂಗಳುಗಳ ಕಾಲ ಬೇಕಾಯಿತಂತೆ. ಐದು ಫೀಟ್ ವಾಲ್‌ಹ್ಯಾಂಗಿಂಗ್ ಚೆನ್ನಾಗಿ ಮೂಡಿ ಬಂದು ಎಲ್ಲರಿಗೂ ತುಂಬ ಇಷ್ಟವಾಯಿತು. ಕೊನೆಗೆ ಡಿಸಿ ಹ್ಯಾಂಡಿಕ್ರಾಫ್ಟ್‌ಗೆ ಆ ವಾಲ್‌ಹ್ಯಾಂಗಿಂಗ್ ರಾಷ್ಟ್ರೀಯ ಪ್ರಶಸ್ತಿಗೆ ಆಯ್ಕೆ ಆಯಿತು. ೨೦೦೧ರಲ್ಲಿ ಆಯ್ಕೆಯಾಗಿ ೨೦೦೨ರಲ್ಲಿ ರಾಷ್ಟ್ರೀಯ ಪ್ರಶಸ್ತಿ ಶಾಂತಿಬಾಯಿಗೆ ದೊರೆಯಿತು. ಎಲ್ಲಾ ರಾಜ್ಯಗಳಿಂದ ಇಂತಹ ಹಲವು ಪೀಸ್‌ಗಳನ್ನು ಸಂಗ್ರಹಿಸುವರು. ಹೀಗೆ ಸಂಗ್ರಹಿಸಿದ ಇಂತಹ ಕಸೂತಿ ಕಲೆಯ ಬಟ್ಟೆಗಳನ್ನು ನೋಡಿ



## ಕಸೂತಿ ಕಲಾವಿದರು

ಕಸೂತಿ ಕಲಾವಿದೆ ಶಾಂತಿಬಾಯಿ



ರಾಷ್ಟ್ರೀಯ ಪ್ರಶಸ್ತಿ ಪಡೆದಿರುವ ಕಸೂತಿ ಚಿತ್ರ



ಶಾಂತಿಬಾಯಿ ಅವರ ಕಸೂತಿ ಚಿತ್ರ



**ಕಸೂತಿ ಕಲಾವಿದರು**

ಅಟಲ್ ಬಿಹಾರಿ ವಾಜಪೇಯಿ ಅವರೊಂದಿಗೆ ಶಾಂತಿಬಾಯಿ




ಎ.ಪಿ.ಜೆ.ಅಬ್ದುಲ್ ಕಲಾಮ್ ಅವರಿಂದ ೨೦೦೧ರ ರಾಷ್ಟ್ರೀಯ ಪುರಸ್ಕಾರ ಸ್ವೀಕರಿಸುತ್ತಿರುವ ಶಾಂತಿಬಾಯಿ



## ಕಸೂತಿ ಕಲಾವಿದರು

ತರಬೇತಿ ನಿಡುತ್ತಿರುವ ಶಾಂತಿಬಾಯಿ



ಕಸೂತಿ ಕಲೆಯಲ್ಲಿ ನಿರತರಾಗಿರುವ ಶಾಂತಿಬಾಯಿ

ಕರ್ನಾಟಕದ ಲಂಬಾಣಿ ಕರಕುಶಲ ಕಲೆಗಳು



ಕಸೂತಿ ಕಲಾವಿದೆ ಶಾಂತಿಬಾಯಿ ಅವರು ಪಡದ ಪ್ರಶಸ್ತಿ ಪತ್ರಗಳು





**World Craft Council - Asia Pacific Region**
**&**
**Crafts Council of India**

*Jewellery Grass to Gold*
*Young Craftsperson Competition 2004*

*This is to Certify* ........Shanti Bai K.........

*Has participated in the Young Craftsperson Jewellery Competition held in October 2004 at Chennai.*

President
World Craft Council - Asia Pacific Region



Secretary
Crafts Council of India

Barcelona, June 2, 2004

Universal Forum of Cultures – Barcelona 2004

# Certificate of Attendance

This is to certify that SHANTHI BAI KALLHALLI has participated in the embroidering demonstration workshop, from May 9 to June 1, at the Creation Space of the Lotus Bazaar, run by the Asian Heritage Foundation at Universal Forum of Cultures held in Barcelona from May 9 to September 26, 2004.

For the records, we sign this certificate
on the date and at the place mentioned above.



Forum
BARCELONA
2004

Laura Mendoza
Head of the Markets Department, Universal Forum of Cultures – Barcelona 2004

ಪ್ರಶಸ್ತಿಗೆ ಆಯ್ಕೆ ಮಾಡುವರು. ಹೀಗೆ ಆಯ್ಕೆ ಆದ ಮೇಲೆ ಶಾಂತಿಬಾಯಿಗೂ ಹಾಗೂ ಕೇಂದ್ರಕ್ಕೆ ಒಳ್ಳೆಯ ರೀತಿಯ ಗೌರವವನ್ನು ಈ ಲಂಬಾಣಿ ಕಸೂತಿ ಕಲೆಯು ದೊರಕಿಸಿಕೊಟ್ಟಿತು. ಆಗ ಹಲವು ಮಂದಿ ಶಾಂತಿಬಾಯಿಯವರ ಬಗೆಗೆ ಮೆಚ್ಚುಗೆಯ ಮಾತನ್ನಾಡಿದರು. ಮತ್ತೆ ಒಳ್ಳೆಯ ರೀತಿಯಲ್ಲಿ ಕಸೂತಿ ಕಲೆಯನ್ನು ಮಾಡಿ ಲಂಬಾಣಿ ಸಮುದಾಯದ ಒಂದು ಅನನ್ಯತೆಯನ್ನು ಜಗತ್ತಿಗೆ ತೋರಿಸು ಎಂದು ಹೇಳಿದರಂತೆ.

ಹೀಗೆ ಪ್ರಶಸ್ತಿ ಬಂದ ಮೇಲೆ ಶಾಂತಿಬಾಯಿಯವರನ್ನು ಅನೇಕ ಸಂಘಸಂಸ್ಥೆಗಳು ಸನ್ಮಾನ ಮಾಡಿದವು. ಮೈಸೂರು, ಬಳ್ಳಾರಿ, ಬೆಂಗಳೂರಿನಲ್ಲಿ ಸನ್ಮಾನಗಳು ನಡೆದವು. ಚಿತ್ರದುರ್ಗದ ಶ್ರೀ ಸರ್ದಾರ್ ಸೇವಾಲಾಲ್ ಸ್ವಾಮಿಗಳು ಬಳ್ಳಾರಿಯಲ್ಲಿ ಸನ್ಮಾನ ಮಾಡಿ ಹಿತವಚನಗಳನ್ನು ಹೇಳಿದರು. ಅಲ್ಲದೆ ಮಾಜಿ ಸಚಿವರಾದ ದಿ. ಎಂ.ವೈ. ಘೋರ್ಪಡೆಯವರು ಸಹ ಸನ್ಮಾನಿಸಿದರು. ಈ ವೇಳೆಯಲ್ಲಿ ಗೋರ್ ಕೋರ್(ಲಂಬಾಣಿಗರು, ಲಂಬಾಣೇತರರು) ಎಲ್ಲರೂ ಶಾಂತಿಬಾಯಿಯನ್ನು ಕುರಿತು ಮಹತ್ವದ ಮಾತುಗಳನ್ನಾಡಿದರು.

ಸಂಡೂರಿನಲ್ಲಿ ಹಲವು ಸಂಘಸಂಸ್ಥೆಗಳು ಸನ್ಮಾನ ಮಾಡಿವೆ. ಅಲ್ಲದೆ ಪತ್ರಿಕೆ, ರೇಡಿಯೋ ಹಾಗೂ ಟಿ.ವಿ.ಮಾಧ್ಯಮಗಳು ಸಹ ಅವರ ಕುರಿತು ಅನೇಕ ವಿಚಾರಗಳನ್ನು ಬಿತ್ತರಿಸಿದವು. ಅತ್ಯಂತ ಬಡತನದಲ್ಲಿಯೇ ಜೀವಿಸುವ ಶಾಂತಿಬಾಯಿಯ ಬಗೆಗೆ ನಾಡಿನಾದ್ಯಂತ ಪರಿಚಯಿಸಿದರು. ಬಡತನದಲ್ಲಿಯೇ ಬದುಕಿದ ಇವರು ಅನೇಕ ರೀತಿಯ ಏಳುಬೀಳುಗಳನ್ನು ಅನುಭವಿಸಿದ್ದಾರೆ. ತುಂಬ ನೊಂದು ಬೆಂದು ಬದುಕನ್ನು ಕಟ್ಟಿದವರು. ಏನೆಲ್ಲಾ ತೊಂದರೆ, ನೋವುಗಳು ಬಂದರೂ ಎಲ್ಲವನ್ನು ಸಹಿಸಿಕೊಂಡು ಈ ಕಸೂತಿ ಕಲೆಯಲ್ಲಿಯೇ ಮುಂದುವರೆದಿದ್ದಾರೆ. ಹೆಚ್ಚು ಮನಸ್ಸಿಗೆ ದುಃಖ ಬಂದಾಗ ಕಸೂತಿ ಕಲೆಯೇ ಅವಳ ಮನಸ್ಸನ್ನು ಹಗುರ ಮಾಡುತ್ತದೆ.

ಅನಾಗರಿಕತೆಯಂತಿರುವ ಹಿಂದುಳಿದ ಜನರಾದ ಲಂಬಾಣಿಗರ ಕಸೂತಿ ಕಲೆಯಿಂದ ರಾಷ್ಟ್ರೀಯ ಪ್ರಶಸ್ತಿ ಪಡೆದ ಶಾಂತಿಬಾಯಿ ಅವರು ಇಡೀ ಸಂಡೂರಿಗೆ ಮಾತ್ರವಲ್ಲ ಇಡೀ ದೇಶಕ್ಕೆ ಹೆಸರು ತಂದರೆಂದು ಘೋರ್ಪಡೆಯವರು ಹೇಳಿದರಂತೆ. ಅಲ್ಲದೆ ಶಾಂತಿಬಾಯಿ ಬಗೆಗೆ ಬಹಳ ಕಾಳಜಿ ವಹಿಸಿ ಕೇಂದ್ರದಲ್ಲಿಯೇ ಸೇವೆನಿರ್ವಹಿಸಲು ನೇಮಕ ಮಾಡಿದರು. ಈಗ ಐದು ಸಾವಿರ ರೂಪಾಯಿ ಸಂಬಳ ಕೊಡುತ್ತಾರೆ. ರೇಷನ್ ಹಾಗೂ ವಾಸಿಸಲು ಮನೆಯನ್ನು ಕೊಟ್ಟಿದ್ದಾರೆ. ಅಲ್ಲದೆ ಮಗನಿಗೆ ಉಚಿತವಾಗಿ ಶಿಕ್ಷಣವನ್ನು ಎಸ್.ಆರ್.ಎಸ್. ಶಾಲೆಯಲ್ಲಿ ನೀಡುತ್ತಿದ್ದಾರೆ. ರಾಷ್ಟ್ರೀಯ ಪ್ರಶಸ್ತಿ ಪಡೆದ ಶಾಂತಿಬಾಯಿಗೆ ಅವರ ಹೆತ್ತೂರಲ್ಲಿಯೇ ಸರಿಯಾದ ಪ್ರೋತ್ಸಾಹ ದೊರೆಯಲಿಲ್ಲ. ಯಾಕೆಂದರೆ ಒಬ್ಬ ಒಳ್ಳೆಯ ವ್ಯಕ್ತಿ ಹೊರಜಗತ್ತಿಗೆ ಏನೆಂದು ಗೊತ್ತಾದರೂ ಅವಳ ಸ್ವಂತ ಊರಿನವರಿಗೆ ಗೊತ್ತಾಗಲಿಲ್ಲ. ಆದರೂ ಕೆಲವು ಪ್ರಜ್ಞಾವಂತ ಹಿರಿಯರು ಹಾಗೂ ಸ್ವಾಮಿಗಳು ಸೇರಿ ಊರಲ್ಲಿ ಸಹ ಸನ್ಮಾನಿಸಿದರು.

ತನ್ನ ತಾಂಡದ ಸುತ್ತಮುತ್ತಲಿನ ಹಳ್ಳಿಗಳನ್ನು ಬಿಟ್ಟರೆ ಬೇರೆಲ್ಲೂ ಹೋಗಿರದ ಇವರು ನಾನಾ ದೇಶಗಳಿಗೆ ತೆರಳಿ ತನ್ನ ಕಸೂತಿ ಕಲೆಯ ಬಗ್ಗೆ, ಉಡುಗೆ ತೊಡುಗೆಯ ಬಗೆಗೆ ಮಾಹಿತಿ ನೀಡಿ ಬಂದಿದ್ದಾರೆ. ಒಂದು ಸಲ ಚೆನ್ನೈನಲ್ಲಿ ಒಂದು ಪ್ರದರ್ಶನ ಇಟ್ಟಿದ್ದರು. ಅದರಲ್ಲಿ ಹಲವು ದೇಶಗಳ ಕಸೂತಿ ಕಲೆಯ ಕುರಿತು ಪರಸ್ಪರ ಮಾಹಿತಿ ತಿಳಿದುಕೊಳ್ಳಲು ಲೈಲಾ ತಯಾಬ್ಜಿ ಅವರು ಕಾರ್ಯಾಗಾರ ನಡೆಸಿದರು. ಆಗ ಗೌರಿಬಾಯಿ ಮತ್ತು ಶಾಂತಿಬಾಯಿ ಅವರು ಆಯ್ಕೆಯಾದರು. ಈ ಕಾರ್ಯಾಗಾರದಲ್ಲಿ ಒಂದು ಕಸೂತಿ ಕಲೆಯ ಚಿತ್ರಗಳ ಮೂಲ ಕಸೂತಿ ಮಾಡಲಾಗಿತ್ತು. ಮಹಿಳೆಯ ಪೂತಿಮೆಯ ರೂಪ ಆ ಕಸೂತಿ ಕಲೆ ಒಳಗೊಂಡಿತು. ಈ ಮಹತ್ತರವಾದ ಕಲೆ ಪ್ರದರ್ಶನದಲ್ಲಿ ಆಯ್ಕೆಯಾಗಿ ವಿದೇಶಕ್ಕೆ ಹೋಗಲು ಅನುವು ಮಾಡಿಕೊಟ್ಟಿತ್ತು. ಅವರಿಗೆ ಕಲೆಯ ಕುರಿತು ಹಣಕಾಸಿನ ಸೌಕರ್ಯಗಳೇನು ಕೊಡಲಿಲ್ಲ, ಆದರೆ ವಿದೇಶಕ್ಕೆ ಹೋಗಲು ಅನುವು ಮಾಡಿಕೊಟ್ಟರು. ಮೊದಲು ಸ್ವೀಡನ್, ಸ್ಪೇನ್ ದೇಶಕ್ಕೆ ಹೋಗಿದ್ದರು. ದೆಹಲಿಯ ರಾಜೀವ ಸೆಥಿಯೊಬ್ಬರು ಭಾರತದ ಎಲ್ಲಾ ಕಸೂತಿ ಕಲೆಗಳನ್ನು ಸಂಗ್ರಹಿಸಿ ಹೊರದೇಶದಲ್ಲಿ ಪ್ರದರ್ಶನ ಮಾಡುತ್ತಿದ್ದರು.

ಒಂದು ವರ್ಷದಲ್ಲಿ ಎರಡು ಸಾರಿ ಈ ರೀತಿಯ ಕಸೂತಿ ಕಲೆಯ ಬಗೆಗೆ ಪ್ರದರ್ಶನ ವನ್ನು ಏರ್ಪಡಿಸುವರು. ಪ್ರತಿ ಕೇಂದ್ರಕ್ಕೆ ಒಂದು ಲಕ್ಷ ರೂಪಾಯಿಯ ಕೆಲಸ ಕೊಡುವರು. ಅವುಗಳಿಂದ ಒಳ್ಳೆಯ ಕಸೂತಿ ಕಲೆಯ ವಸ್ತುಗಳನ್ನು ತೆಗೆದುಕೊಂಡು ಹೊರದೇಶಕ್ಕೆ ಸಾಗಿಸುವರು. ಸ್ಪೇನ್‌ನಲ್ಲಿ ಕಸೂತಿಕಲೆಗೆ ಎರಡು ಸಾವಿರ ರೂಪಾಯಿ ಕೂಲಿಯನ್ನು ನೀಡಿದರು. ಅಲ್ಲಿ ಕೆಲಸ ಮಾಡುವ ವಿನ್ಯಾಸಗಳ ಬಗೆಗೆ ಮಾಹಿತಿ ನೀಡಿದರು. ನಂತರ ಅಮೆರಿಕಕ್ಕೆ ಹೋದರು. ಒಳ್ಳೆಯ ಆರ್ಟಿಜನ್‌ನ ಆಯ್ಕೆ ಮಾಡಿ ನ್ಯೂಮೆಕ್ಸಿಕೋದಲ್ಲಿ ಮಾರಾಟ ಮಾಡಲಿಕ್ಕೆ ಉಚಿತವಾಗಿ ಮಳಿಗೆ ನೀಡಿದರು. ಇಲ್ಲಿ ಮೂರರಿಂದ ನಾಲ್ಕು ಸಲ ಅಲ್ಲಿಗೆ ಹೋಗಲು ಅವರಿಗೆ ಅವಕಾಶ ನೀಡಿದರು. ಮೂರು ಸಲ ಶಾಂತಿಬಾಯಿ, ಒಂದು ಸಲ ಗೌರಿಬಾಯಿ ಹಾಗೂ ಒಂದು ಸಲ ಮರಿಯಮ್ಮನ ಹಳ್ಳಿ ತಾಂಡದ ಲಕ್ಷ್ಮೀಬಾಯಿ ಅಮೆರಿಕದ ನ್ಯೂಮೆಕ್ಸಿಕೋಗೆ ಹೋಗಿದ್ದರು. ಈ ಅವಕಾಶಗಳು ಎಲ್ಲರಿಗೂ ಸಿಗಲಿ ಎಂದು ಈಗ ಕೇಂದ್ರದಲ್ಲಿ ಬೇರೆಯವರನ್ನು ಕಳಿಸಲಾಗುತ್ತದೆ. ಚೀನಾ ದೇಶದ ರಾಜಧಾನಿಯಾದ ಬೀಜಿಂಗ್‌ನಲ್ಲಿ ಸರ್ಕಾರದ ವತಿಯಿಂದ ವಸ್ತುಪ್ರದರ್ಶನ ಮಾಡಿದರು.

ಅಲ್ಲಿ ಏನೂ ಕೆಲಸ ಮಾಡಲಿಲ್ಲ. ಆದರೆ ಕೆಲಸ ಮಾಡಲು ಕೆಲವು ಆರ್ಡರ್‌ಗಳನ್ನು ತೆಗೆದುಕೊಳ್ಳುತ್ತಿದ್ದರು. ಅವರು ಯಾವ ಮಾದರಿಯ ಕಸೂತಿ ಕಲೆಯನ್ನು ಹೇಳುತ್ತಾರೆಯೋ ಹಾಗೆಯೇ ಸಂಡೂರಿಂದ ಮಾಡಿ ಕಳಿಸುತ್ತಿದ್ದರು. ಪ್ರಸ್ತುತ ಹೊರದೇಶಕ್ಕೆ ಹೋಗಲು ಕಸೂತಿ ಕಲೆಯ ಕುರಿತು ಅರ್ಜಿ ಸಲ್ಲಿಸಿದ್ದಾರೆ. ಆದರೆ ಅವುಗಳ ಕುರಿತು ಮಾಹಿತಿ

ತಿಳಿದುಬಂದಿಲ್ಲ. ರಾಷ್ಟ್ರೀಯ ಪ್ರಶಸ್ತಿ ಪಡೆದ ಶಾಂತಿಬಾಯಿ ಅವರು ಕಲಿಯುವವರಿಗೆ ತರಬೇತಿಯನ್ನು ಸಹ ನೀಡಿದ್ದಾರೆ. ಆಗ ಅವರಿಗೆ ಒಂದು ಸಾವಿರ ಸಂಬಳ ನೀಡುತ್ತಿದ್ದರು. ಅಲ್ಲದೇ ತರಬೇತಿ ಅಭ್ಯರ್ಥಿಗಳಿಗೆ ಎಂಟು ನೂರು ರೂಪಾಯಿಗಳಿದ್ದವು.

ಕಸೂತಿ ಕಲಾಕೇಂದ್ರದಲ್ಲಿ ಕೆಲಸ ಮಾಡುವ ಶಾಂತಿಬಾಯಿಗೆ ವಾಸಿಸಲು ಮನೆ, ಆಹಾರ ಪದಾರ್ಥ ಹಾಗೂ ಮಗನಿಗೆ ಶಿಕ್ಷಣ ಇವೆಲ್ಲವೂ ಉಚಿತವಾಗಿ ದೊರೆಯುತ್ತವೆ. ಎರಡು ಸಾವಿರ ರೂಪಾಯಿ ರೇಷನ್ ತಿಂಗಳಿಗೆ ಉಚಿತವಾಗಿ ನೀಡುವರು. ಹೀಗೆ ಕೊಡುವುದರಿಂದ ಇವರ ಸಂಬಳಗಳಲ್ಲಿ ಒಂದು ನೂರ ಐವತ್ತು ರೂಪಾಯಿಗಳನ್ನು ಮಾತ್ರ ಮುರಿಯುವರು. ಕುಶಲ ಕಲಾಕೇಂದ್ರ ಎಲ್ಲಾ ನೌಕರರಿಗೆ ಈ ರೀತಿಯ ಆಹಾರ ಸಾಮಗ್ರಿಯನ್ನು ನೀಡುತ್ತದೆ. ಇವೆಲ್ಲವನ್ನು ಸೇರಿಸಿದರೆ ತಿಂಗಳಿಗೆ ಏಳು ಸಾವಿರ ರೂಪಾಯಿ ದೊರೆಯುತ್ತದೆ. ಇಲ್ಲಿ ಕೆಲಸ ಮಾಡುವ ಎಲ್ಲಾ ನೌಕರರಿಗೆ ರಿಯಾಯಿತಿಯ ಮೇಲೆ ಆಹಾರ ಸಾಮಗ್ರಿಯನ್ನು ನೀಡುವರು.

ಕುಶಲ ಕಲಾಕೇಂದ್ರದಲ್ಲಿಯೇ ಕಸೂತಿ ಮಾಡುವ ಎಲ್ಲಾ ಲಂಬಾಣಿ ಮಹಿಳೆಯರಿಗೆ ಮಾರ್ಗದರ್ಶನ ನೀಡುವರು. ಬಳ್ಳಾರಿ ಜಿಲ್ಲೆಯ ಸುಮಾರು ತಾಂಡಾಗಳಲ್ಲಿ ಸಂಡೂರು ಕುಶಲ ಕಲಾಕೇಂದ್ರದ ಅಡಿಯಲ್ಲಿ ಈ ರೀತಿಯ ಕಸೂತಿ ಕಲೆಯನ್ನು ಮಹಿಳೆಯರು ಮಾಡುವರು. ಶಾಂತಿಬಾಯಿ ಕೆಲವೊಮ್ಮೆ ಮೇಲ್ವಿಚಾರಕರಾಗಿ ಹೋಗುವುದುಂಟು. ಏಕೆಂದರೆ ಪ್ರೊಡಕ್ಷನ್ ಮ್ಯಾನೇಜರ್ ಪ್ರವೀಣ್ ಅವರ ಸಲಹೆಯ ಮೇರೆಗೆ ಈ ಕೆಲಸಗಳೆಲ್ಲವನ್ನು ಮಾಡಿಸುವರು. ಇಂಥ ಕೆಲಸ ಈ ವೇಳೆಗೆ ಮುಗಿಯಬೇಕು ಅಂದರೆ ಆ ವೇಳೆಗೆ ಮುಗಿಸಿಕೊಡುವ ಜವಾಬ್ದಾರಿ ಶಾಂತಿಬಾಯಿಯ ಮೇಲಿರುತ್ತದೆ.

ಹೀಗಾಗಿ ಕಸೂತಿ ಮಾಡುವ ತಾಂಡಾದ ಮಹಿಳೆಯರಿಗೆ ಕಸೂತಿ ಕಲೆಯ ಕುರಿತಾಗಿ ಮಾಹಿತಿ ನೀಡುವರು. ಈಗ ಲಂಬಾಣಿ ಮಹಿಳೆಯರಿಗೆ ತಮ್ಮ ಉಡುಪಿನ ಮೇಲೆ ವ್ಯಾಮೋಹ ಕಡಿಮೆಯಾಗಿದೆ. ಆದರೆ ಲಂಬಾಣಿ ಕಸೂತಿ ಕಲೆಯ ಮಾದರಿಯನ್ನು ಆಧಾರವಾಗಿಟ್ಟುಕೊಂಡು ಬೇರೆ ಬೇರೆ ಬಟ್ಟೆಗಳ ಮೇಲೆ ಬಳಕೆಯಾಗುತ್ತಿವೆ. ಉದಾಹರಣೆಗೆ ಕುಡ್ತಾ, ಶರ್ಟ್. ಈ ಕಸೂತಿ ಕಲಾ ಕೇಂದ್ರಕ್ಕೆ ದೇಶ ವಿದೇಶ ಕಂಪನಿಗಳಿಂದ ಆರ್ಡರ್ ಬರುತ್ತವೆ. ಸ್ಯಾರಿ, ಶರ್ಟ್, ಕುಷನ್ ಕವರ್, ಬ್ಯಾಗ್ ಮುಂತಾದ ವಿವಿಧ ಮಾದರಿಯ ಬಟ್ಟೆಗಳ ಮೇಲೆ ಈ ಕಸೂತಿ ಕಲೆಗಳು ವೈವಿಧ್ಯಮಯವಾಗಿ ಮೂಡಿಬಂದಿವೆ. ಸರ್ಕಾರದಿಂದ ಬರುವ ಎಲ್ಲಾ ಸೌಲಭ್ಯವನ್ನು ಈ ಕೇಂದ್ರದವರು ಈ ಜನಾಂಗಕ್ಕೆ ಒದಗಿಸುವರು. ಇವರಿಗೆ ಮನೆ ಕಟ್ಟಿಸಿಕೊಟ್ಟಿದ್ದಾರೆ. ಆರೋಗ್ಯದ ಬಗೆಗೆ ಕಾಳಜಿಯಿದೆ, ಬೋರ್‌ವೆಲ್ ಹಾಕಿಸಿಕೊಟ್ಟಿದ್ದಾರೆ. ಆದರೆ ಬೇರೆ ಜಿಲ್ಲೆಗಳಲ್ಲಿ ಕೆಲವು ಕುಶಲ ಕಲಾಕೇಂದ್ರಗಳು ಲಂಬಾಣಿ ಮಹಿಳೆಯ ಕಸೂತಿ

ಕಲೆಯ ಅಡಿಯಲ್ಲಿ ಸ್ಥಾಪಿತವಾಗಿವೆ. ಅವು ಯಾವುವೂ ಈ ಸಮಾಜದ ಮಹಿಳೆಯರ ಪರವಾಗಿ ದುಡಿಯುತ್ತಿಲ್ಲ. ಕೇವಲ ಪುಸ್ತಕದಲ್ಲಿ ಫ್ಲೇಕ್ಸ್‌ಗಳ ಮೇಲೆ ಈ ಕೇಂದ್ರದ ಬೆನ್ನೆಲುಬು ಲಂಬಾಣಿ ಮಹಿಳೆ ಎಂದು ತೋರಿಕೆಗಾಗಿ ಬರೆದಿಡುವ ಪರಿಪಾಠವಿದೆ.

ಹೀಗಾಗಿ ಇತರೆ ಕೇಂದ್ರಗಳಿಗಿಂತ ಸಂಡೂರು ಕುಶಲ ಕಲಾಕೇಂದ್ರವು ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಕೆಲವೊಂದು ರಾಜ್ಯದಲ್ಲಿ ಆರ್ಟಿಜನ್‌ರಿಂದ ಕಸೂತಿ ಕೆಲಸವನ್ನು ಹಳ್ಳಿಯ ಜನರಿಂದ ಮಾಡಿಸಿ ಅದನ್ನೇ ರಾಷ್ಟ್ರೀಯ ಪ್ರಶಸ್ತಿಗೆ ಕಳಿಸುವರು. ಆರ್ಟಿಜನ್‌ಗೆ ಕೇವಲ ಹಣಕೊಟ್ಟು ಅವರಿಗೆ ಸಮಾಧಾನ ಪಡಿಸಿದರೆ ಅವುಗಳಿಂದ ಬರುವ ಪ್ರೋತ್ಸಾಹ ಹಣವನ್ನು ಬೇರೆಯವರು ಪಡೆಯುವರು.

ಈ ಕೇಂದ್ರದಲ್ಲಿ ಸಂಬಳ ಕಡಿಮೆ ಇದ್ದರೂ, ಇಲ್ಲಿಯ ಜನರಿಗೆ ಅನೇಕ ರೀತಿಯ ಸೌಲಭ್ಯಗಳಿವೆ. ಇಲ್ಲಿ ಕಸೂತಿ ಕೆಲಸ ಮಾಡುವ ಮಹಿಳೆಯರಿಗೆ ಹತ್ತು ವರ್ಷ ಆದ ಮೇಲೆ ಪಿಂಚಣಿ ಕೊಡುವರು. ಈ ಕೇಂದ್ರಕ್ಕೆ ಸರಕಾರದ ಯಾವ ಸೌಲಭ್ಯಗಳಿಲ್ಲ. ತರಬೇತಿ ಏನಾದರೂ ಬಂದರೆ ಆರ್ಟಿಜನ್‌ಗೆ ಮಾತ್ರ ಬರುತ್ತದೆ. ಇಲ್ಲಿಯ ವಸ್ತುಗಳನ್ನು ಮಾರಾಟ ಮಾಡಲು ಹೋದಾಗ ಮಳಿಗೆಯ ಬಾಡಿಗೆ, ವಿದ್ಯುತ್‌ಬಿಲ್ಲು ಇನ್ನೂ ಮುಂತಾದ ವನ್ನೆಲ್ಲ ಈ ಕೆಲಸದಿಂದಲೇ ತೆಗೆದು ಉಳಿದ ಹಣವನ್ನು ಕಸೂತಿಗಾರರಿಗೆ ಕೊಡುವರು. ಶಾಂತಿಬಾಯಿ ಅವರಿಗೆ ಅಲ್ಪಸ್ವಲ್ಪ ಕನ್ನಡ ಓದಲು, ಬರೆಯಲು ಬರುತ್ತದೆ. ಇಂಗ್ಲಿಷ್ ಜ್ಞಾನ ಸ್ವಲ್ಪ ಇದೆ. ಈ ಕೆಲಸದಲ್ಲಿ ಎಷ್ಟು ವೇಳೆ ತೆಗೆದುಕೊಂಡು ಕೆಲಸ ಮಾಡುತ್ತಾರೋ ಅದರ ಮೇಲೆ ಇವರಿಗೆ ಹಣ ದೊರೆಯುತ್ತದೆ. ಇಲ್ಲಿಯ ಕಸೂತಿ ಕೆಲಸಗಾರರು ತಮ್ಮ ಮನೆ ಹೊಲದ ಕೆಲಸದ ಜೊತೆಗೆ ಕಸೂತಿ ಕೆಲಸ ಮಾಡುವರು.

ಹೀಗಾಗಿ ಅವರ ಶ್ರಮಕ್ಕೆ ತಕ್ಕಂತೆ ಸಂಬಳ ದೊರೆಯುತ್ತದೆ. ಹದಿನೈದು ದಿನ ದುಡಿದರೆ ಇವರಿಗೆ ಆರು ನೂರು ರೂಪಾಯಿ ದೊರೆಯುತ್ತದೆ. ಬಹುಶಃ ಒಂದು ತಿಂಗಳಿಗೆ ಒಬ್ಬ ಮಹಿಳೆಗೆ ಮೂರು ಸಾವಿರ ರೂಪಾಯಿ ಕೇಂದ್ರದಲ್ಲಿ ಪಡೆಯುವರು. ಅಲ್ಲದೆ ಬೇರೆ ಕಡೆಗೆ ಮಾರಾಟಕ್ಕೆ ಹೋದಾಗ ಅಲ್ಲಿ ಮಳಿಗೆ ಬಾಡಿಗೆ ಖರ್ಚು ವೆಚ್ಚ ಎಲ್ಲಾ ತೆಗೆದು ಉಳಿದ ಹಣವನ್ನು ಕಸೂತಿ ಕೆಲಸ ಮಾಡುವವರಿಗೆ ಕೊಡಲಾಗುತ್ತದೆ.

ಲಂಬಾಣಿಗರು ಬಟ್ಟೆಗಳ ಮೇಲೆ ಹಾಕುವ ಕಸೂತಿ ಕಲೆಯು ಯಾವ ಸಮುದಾಯದಲ್ಲೂ ಕಾಣಲಾರದು. ಅಂತಹ ಮಹತ್ವದ ಆಕರ್ಷಣೀಯ ಕೆಲಸ ಈ ಸಮುದಾಯದ ಮಹಿಳೆಯರಿಗೆ ದಕ್ಕಿದೆ. ಇಂತಹ ಮಹತ್ವದ ಕಸೂತಿ ಕಲೆಗಾರಿಕೆಯು ಬೇರೆ ಬೇರೆ ವಸ್ತುಗಳ ಮೇಲೆ ಮರುಸೃಷ್ಟಿಯಾಗುತ್ತಲಿವೆ. ಅವು ಮಾರುಕಟ್ಟೆಯಲ್ಲಿ ಹೆಚ್ಚು ಬೇಡಿಕೆಯ ವಸ್ತುಗಳಾಗುತ್ತಿವೆ. ದೇಶ ವಿದೇಶಗಳಲ್ಲಿ ಇವುಗಳ ಮಾರುಕಟ್ಟೆ ಜೋರಾಗಿ ನಡೆಯುತ್ತಿವೆ. ಹೀಗಾಗಿ ಮಹತ್ವದ

ಕಸೂತಿ ಕಲೆಯು ಇಂದು ಆಧುನಿಕ ಉಡುಗೆ ತೊಡುಗೆಗಳ ಮೇಲೆ ನಾವೀನ್ಯತೆಯ ಸ್ವರೂಪ ಪಡೆದುಕೊಳ್ಳುತ್ತಲಿವೆ.

ಶಾಂತಿಬಾಯಿ ಅವರು ಕಸೂತಿ ಕಲೆಯ ಕುರಿತು ಲಂಬಾಣಿ ಮಹಿಳೆಯರಿಗೆ ತಿಳುವಳಿಕೆ ಮೂಡಿಸುವ ಪ್ರಯತ್ನ ಮಾಡುವರು. ಈ ಕಲೆಗೆ ಮುಂದೆ ಮಹತ್ವದ ಬೆಲೆ ಬರುವುದೆಂದು ಪ್ರತಿ ತಾಂಡದ ಸ್ತ್ರೀಯರಿಗೆ ಜಾಗೃತಿ ಮೂಡಿಸುವರೆಂದು ತಿಳಿಸಿದ್ದಾರೆ. ಈ ಕಲೆಗಾರಿಕೆ ಸಮುದಾಯದ ಹಿರಿಯ ತಲೆಮಾರಿಗೆ ಮಾತ್ರ ಸೀಮಿತವಾಗಿದೆ. ಹೀಗಾಗಿ ಪ್ರತಿಯೊಬ್ಬರು ಈ ಕಲೆಯನ್ನು ಕಲಿಯಬೇಕು ಎನ್ನುವರು ಈ ಕಲೆಯನ್ನು ಉಳಿಸಿ ಬೆಳೆಸಬೇಕು. ಇದಕ್ಕೆ ಸಮಾಜದಲ್ಲಿ ಒಳ್ಳೆಯ ಬೆಲೆಯಿದೆ. ವಿದ್ಯಾವಂತರು ಹೇಗೆ ಓದು ಬರಹ ಕಲಿತು ಮುಂದೆ ಬರುವರೋ ಹಾಗೆ ನಾವೂ ಸಹ ಈ ಕಲೆಯ ಮೂಲಕ ಮುಂದೆ ಬರಬೇಕೆನ್ನುವರು. ಕಸೂತಿ ಕಲೆಯೇ ಸಮಾಜದ ಅವಿದ್ಯಾವಂತ ಮಹಿಳೆಯರಿಗೆ ಬದುಕನ್ನು ಕಟ್ಟುವ ವಿದ್ಯೆಯಾಗುತ್ತದೆ ಎಂಬ ಮನೋಸ್ಥೈರ್ಯ ಸಮಾಜದ ಮಹಿಳೆಯರಲ್ಲಿ ಮೂಡಬೇಕು ಎಂಬುದು ಶಾಂತಿಬಾಯಿಯವರ ಅಭಿಪ್ರಾಯ.

ಹೊಲಗದ್ದೆ ಇಲ್ಲದವರು ಈ ಕೆಲಸವನ್ನು ದಿನವೂ ಬಂದು ಮಾಡುವರು. ಆದರೆ ಹೊಲಗದ್ದೆ ಇದ್ದವರು ಈ ಎರಡು ಕೆಲಸಗಳನ್ನು ಕೆಲವೇ ದಿನಗಳವರೆಗೆ ಮಾಡುವರು. ತಾಂಡದ ಎಲ್ಲಾ ಯುವ ಪೀಳಿಗೆಗೂ ಈ ಕೆಲಸವನ್ನು ಮಾಡಲು ತಿಳುವಳಿಕೆ ಮೂಡಿಸಬೇಕೆಂದು ಶಾಂತಿಬಾಯಿ ಹೇಳುವರು. ಶಾಂತಿಬಾಯಿ ಅವರ ಒಂದು ಮನದಾಸೆ ಎಂದರೆ ದೇಶದೆಲ್ಲೆಡೆ ಹಲವು ವಿಷಯಗಳ ಹಿನ್ನೆಲೆಯಲ್ಲಿ ಶಾಲೆಗಳು ತೆರೆದಿವೆ. ಆದರೆ ಈ ಮಾದರಿಯ ಕಸೂತಿ ಕಲೆಯ ಕುರಿತು ಶಾಲೆಗಳನ್ನು ತೆರೆಯಬೇಕೆಂಬ ಮಹತ್ತರವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸಾಮಾನ್ಯ ಜನರಿಗೂ ಈ ಕಸೂತಿ ಕಲೆಯನ್ನು ಕಲಿಯುವ ವ್ಯವಸ್ಥೆ ಸರಕಾರ ಮಾಡಬೇಕೆನ್ನುವರು. ಏಕೆಂದರೆ ಸಂಗೀತಶಾಲೆ ಚಿತ್ರಕಲಾ, ಕ್ರಾಫ್ಟ್ ವರ್ಕ್ ಬಗೆಗೆ ಸಂಸ್ಥೆಗಳಿವೆ. ಇವುಗಳಂತೆ ಲಂಬಾಣಿ ಕಸೂತಿ ಕಲೆಯ ಬಗೆಗೆ ಇಂತಹ ಸಂಸ್ಥೆಗಳನ್ನು ಹುಟ್ಟುಹಾಕಿದರೆ ಇವುಗಳ ಒಂದು ಪರಂಪರೆ ಉಳಿದು ನಾವೀನ್ಯ ಸ್ವರೂಪ ಪಡೆಯುವುದು.

ಈಗ ಶಾಂತಿಬಾಯಿ ಅವರು 'ಗುರುಪರಂಪರೆ' ಎಂಬ ಪ್ರಶಸ್ತಿಯ ಬಗೆಗೆ ಕೆಲಸ ಮಾಡಬೇಕೆನ್ನುವರು. ಇದು ದೊಡ್ಡ ಪ್ರಶಸ್ತಿಯಾಗಿದೆ. ಐವತ್ತೈದು ವರ್ಷ ಆದ ಮೇಲೆ ಒಂದು ಒಳ್ಳೆಯ ಪೀಸ್ ಕೆಲಸ ಮಾಡಿದರೆ ಪ್ರಶಸ್ತಿ ಬರುತ್ತದೆ. ಅದಕ್ಕೆ ಗುರು ರಾಷ್ಟ್ರೀಯ ಪ್ರಶಸ್ತಿ ಎನ್ನುವರು. ಈ ಪ್ರಶಸ್ತಿ ಪಡೆಯಬೇಕೆಂಬ ಬಹುದೊಡ್ಡ ಆಸೆ ಈ ಮಹಿಳೆಗಿದೆ. ಈ ಹಿಂದೆ ಅವರು ಮಾಡಿದ ಪೀಸ್ ಕೆಲಸಕ್ಕೆ ರಾಷ್ಟ್ರೀಯ ಪ್ರಶಸ್ತಿ ಸಿಕ್ಕಿದೆ. ಅದಕ್ಕೆ ಐವತ್ತು

ಸಾವಿರ ರೂಪಾಯಿ ಬಹುಮಾನ ನೀಡಿದರು. ಈಗ ಅದಕ್ಕೆ ಒಂದು ಲಕ್ಷ ರೂಪಾಯಿ ಬಹುಮಾನವಿದೆ. ಹೀಗೆ ಗುರು ಪ್ರಶಸ್ತಿಗೆ ಏಳೂವರೆ ಲಕ್ಷ ರೂಪಾಯಿ ಬಹುಮಾನವಿದೆ. ಅದಕ್ಕಾಗಿ ಒಂದು ಒಳ್ಳೆಯ ಪೀಸ್ ಕೆಲಸ ಮಾಡಿ ಪ್ರಶಸ್ತಿ ಪಡೆಯಬೇಕೆಂಬ ಬಯಕೆ ಶಾಂತಿಬಾಯಿದಾಗಿದೆ. ಇವರಿಗೆ ರಾಷ್ಟ್ರೀಯ ಪ್ರಶಸ್ತಿಯನ್ನು ಅಂದಿನ ರಾಷ್ಟ್ರಪತಿ ಡಾ. ಅಬ್ದುಲ್ ಕಲಾಮ್ ಅವರು ಪ್ರದಾನ ಮಾಡಿದರು. ಮಾಜಿ ಪ್ರಧಾನಿ ಅಟಲ್‌ಬಿಹಾರಿ ವಾಜಪೇಯಿ ಅವರೊಂದಿಗೆ ಮಾತನಾಡಿದ ಪ್ರಸಂಗ ಅವರಿಗೆ ತುಂಬ ಸಂತೋಷವನ್ನುಂಟು ಮಾಡಿದೆ. ಮಾಜಿ ಸಚಿವೆ ಬಿ.ಟಿ. ಲಲಿತನಾಯಕರಿಗೆ ಈ ಕಲೆಯ ಕುರಿತು ಮಾಹಿತಿ ನೀಡಿದ್ದಾರೆ. ಗುಲಬರ್ಗಾ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಡಾ. ಡಿ.ಬಿ. ನಾಯಕ ಅವರು ನ್ಯೂಮೆಕ್ಸಿಕೋದ ಡಿಜನ್ನೈರ್ ನೋರಾ ಫಿಶರ್‌ರೊಂದಿಗೆ ಇಲ್ಲಿಗೆ ಬಂದು ಭೇಟಿ ಆದಾಗ ಈ ಕೆಲಸದ ಕುರಿತು ನೋರಾ ಫಿಶರ್ ಅವರು ಮಹತ್ವದ ಮಾಹಿತಿಯನ್ನು ಶಾಂತಿಬಾಯಿಗೆ ನೀಡಿದ್ದಾರೆ. ಈ ಕೇಂದ್ರಕ್ಕೆ ಯಾರಾದರೂ ಸಂದರ್ಶಕರು ಬಂದರೆ ಶಾಂತಿಬಾಯಿ ಅವರೇ ಎಲ್ಲಾ ತಾಂಡಾಗಳಿಗೆ ಕರೆದುಕೊಂಡು ಹೋಗಿ ಮಾಹಿತಿ ನೀಡುವರು.

ಹೀಗೆ ಹಂತ ಹಂತವಾಗಿ ಬೆಳೆದ ಇವರನ್ನು ಕಂಡು ಅನೇಕ ಮಂದಿ ಅಸೂಯೆ ಪಡುತ್ತಿದ್ದರು. ಏನು ಕಲಿಯದ ಅವಿದ್ಯಾವಂತೆ ಎಷ್ಟು ವೇಗವಾಗಿ ಬೆಳೆದಳೆಂಬ ತಿರಸ್ಕಾರದ ಭಾವನೆ ಕೆಲವು ಜನರಲ್ಲಿ ಇಂದಿಗೂ ಇದೆ. ಆದರೆ ಇಷ್ಟೆಲ್ಲ ಬೆಳೆದ ಶಾಂತಿಬಾಯಿ ಕಲೆಗೆ ಒಳ್ಳೆಯ ರೀತಿಯ ಬೆಲೆ ಇದೆ ಎಂದು ಅವುಗಳಲ್ಲೇ ತನ್ನ ಬದುಕನ್ನು ಸಾಗಿಸುತ್ತಿದ್ದಾಳೆ. ಈ ಕಲೆಯನ್ನು ಹೀಗೆ ಮುಂದುವರಿಸಿದರೆ ಬದುಕಿಗೆ ಮತ್ತಷ್ಟು ಆಸರೆ ಆಗಬಹುದೆಂಬ ನಿರೀಕ್ಷೆ ಅವರಲ್ಲಿದೆ.

ಈ ಕೇಂದ್ರವು ಸುಮಾರು ಎರಡು ನೂರ ಐವತ್ತು ಮಹಿಳೆಯರಿಗೆ ಕೆಲಸ ನೀಡಿದೆ. ಇವರ ಮೇಲುಸ್ತುವಾರಿಯನ್ನು ಶಾಂತಿಬಾಯಿ ನೋಡಿಕೊಳ್ಳುವಳು. ಇವರು ತಿಂಗಳಿಗೆ ಆರುನೂರು ರೂಪಾಯಿಯ ಕೆಲಸ ಮಾಡಲೇಬೇಕು. ಇವರ ಮಕ್ಕಳಿಗೆ ಸರಕಾರದ ಕಡೆಯಿಂದ ಶಿಷ್ಯವೇತನ ಕೇಂದ್ರವೇ ಕೊಡಿಸುತ್ತದೆ. ಆರ್ಟಿಜನ್ ಮಕ್ಕಳು ಈ ಕಸೂತಿ ಕಲೆಯನ್ನು ಕಲಿತಿದ್ದರೆ ಅವರಿಗೆ ಪ್ರಮಾಣ ಪತ್ರ ಹಾಗೂ ವರ್ಷಕ್ಕೆ ಮೂರು ಸಾವಿರ ರೂಪಾಯಿ ಹಣ ದೊರೆಯುತ್ತದೆ. ಕೇಂದ್ರದ ವತಿಯಿಂದ ಅನೇಕ ತಾಂಡಾಗಳಿಗೆ ತೆರಳಿ ಈ ಕೆಲಸ ಮಾಡುವಂತೆ ಪ್ರೋತ್ಸಾಹಿಸುವರು. ಆದರೆ ಈಗ ಕೇವಲ ಹತ್ತು ತಾಂಡಾಗಳು ಕೇಂದ್ರದ ಅಡಿಯಲ್ಲಿ ಕಸೂತಿ ಕೆಲಸ ಮಾಡುತ್ತಿವೆ.

ಸಂಡೂರು ಕೇಂದ್ರದಲ್ಲಿ ಈಗ ಇಪ್ಪತ್ತು ಜನ ಕಸೂತಿ ಕಲೆಗಾರರು ಬರುತ್ತಿದ್ದಾರೆ. ಅವರಿಗೆ ಪ್ರಯಾಣಭತ್ಯೆ ನೀಡುವರು. ಜೊತೆಗೆ ಆಹಾರ ಸಾಮಗ್ರಿಗಳನ್ನು ತಿಂಗಳಿಗೆ

ಕೇಂದ್ರದ ವತಿಯಿಂದ ನೀಡುವರು. ಕಸೂತಿ ಕೇಂದ್ರ ಬೆಳೆಯಲು ತನ್ನ ಸಮುದಾಯದ ಮಹಿಳೆಯರೊಂದಿಗೆ ಕೈಜೋಡಿಸುತ್ತಿರುವ ಶಾಂತಿಬಾಯಿ ಅವರು ಮಹತ್ವದ ಪಾತ್ರವನ್ನು ವಹಿಸುತ್ತಿದ್ದಾರೆ. ಈ ಕಲೆಯ ರುಚಿಯನ್ನು ಒಮ್ಮೆ ಅನುಭವಿಸಿದರೆ ಸಾಕು ಕಣ್ಣು ಕಾಣುವವರೆಗೂ ಅವುಗಳ ಬಗೆಗಿನ ಆಸಕ್ತಿ ಕಡಿಮೆ ಆಗುವುದಿಲ್ಲ. ಮನಸ್ಸಿಗೆ ನೋವು, ದುಃಖ ಹಾಗೂ ಚಿಂತೆಗಳಾದಾಗ ಕಸೂತಿ ಕಲೆಯು ಆ ಕ್ಷಣದಲ್ಲಿ ಎಲ್ಲವನ್ನು ಮರೆಸುತ್ತಿದೆ ಎಂದು ಶಾಂತಿಬಾಯಿ ಹೇಳುವರು.

ಒಟ್ಟಾರೆ ಶಾಂತಿಬಾಯಿ ಅವರು ಈ ಕಸೂತಿ ಕಲೆಯ ಮೂಲಕ ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದ್ದಾರೆ. ಈಗ ಅವರಂತೆ ಬೆಳೆಯಲು ಅನೇಕ ಲಂಬಾಣಿ ಮಹಿಳೆಯರಿಗೆ ಸ್ಫೂರ್ತಿಯಾಗಿದ್ದಾರೆ. ಇವರ ಕೈಲಾದ ಮಟ್ಟಿಗೆ ಮತ್ತಷ್ಟು ಮಹಿಳೆಯರನ್ನು ಬೆಳೆಸಲು ಪ್ರಯತ್ನಿಸುವರು. ಅವರ ಮಗನನ್ನು ಇದೇ ಕಸೂತಿ ಕಲೆಯ ಜಾಡಿನಲ್ಲಿ ಬೆಳೆಸಿ ಈ ಸಮುದಾಯದ ಕಸೂತಿ ಕಲೆಯ ಚಹರೆಯನ್ನು ಉಳಿಸುವಂತಾಗಬೇಕೆಂಬ ಬಹುದೊಡ್ಡ ಆಸೆ ಅವರಿಗಿದೆ.

**ಗೌರಿಬಾಯಿ ಹನುಮ ನಾಯಕ**

ಸಂಡೂರು ಕುಶಲಕಲಾ ಕೇಂದ್ರದಲ್ಲಿ ಕೆಲಸ ಮಾಡಿ ರಾಷ್ಟ್ರಮಟ್ಟದಲ್ಲಿ ಪ್ರಶಸ್ತಿ ಪಡೆದವರಲ್ಲಿ ಗೌರಿಬಾಯಿ ಒಬ್ಬರಾಗಿದಾರೆ. ಸುಮಾರು ವರ್ಷಗಳಿಂದ ಕೆಲಸ ಮಾಡುತ್ತಿರುವ ಇವರು ಈಗಲೂ ಸಹ ಆ ಕೇಂದ್ರದ ಕಸೂತಿ ಕಲೆಯಲ್ಲಿ ತೊಡಗಿದ್ದಾರೆ. ಗೌರಿಬಾಯಿಯ ಊರು ಸಂಡೂರು ಪಕ್ಕದಲ್ಲಿರುವ ಸುಶೀಲಾ ನಗರ. ಇವರು ಗಿಡ್ಡ ನಾಯ್ಕ ಹಾಗೂ ಬದ್ದಿಬಾಯಿಯ ಮಗಳು. ಸುಶೀಲಾ ನಗರದಲ್ಲಿಯೇ ಹನುಮ ನಾಯ್ಕ ಎಂಬುವರಿಗೆ ಮದುವೆ ಮಾಡಿಸಿದರು. ೧೯೬೬ರಲ್ಲಿ ಗೌರಿಬಾಯಿ ಅವರ ಜನನವೆಂದು ಕುಶಲಕಲಾ ಕೇಂದ್ರದಲ್ಲಿ ದಾಖಲಾಗಿದೆ.

ಪ್ರತಿಯೊಂದು ಲಂಬಾಣಿ ತಾಂಡಾದಲ್ಲಿ ಗೌರಿಬಾಯಿ ವಯಸ್ಸಿನ ಮಹಿಳೆಯರು ಯಾರೂ ಸಹ ಅಕ್ಷರಜ್ಞಾನ ಬಲ್ಲವರಾಗಿಲ್ಲ. ಕಾರಣ, ಹಿಂದೆ ಈ ಸಮುದಾಯ ಎಲ್ಲಾ ದೃಷ್ಟಿಯಿಂದ ತುಂಬಾ ಹಿಂದೆ ಉಳಿದಿತ್ತು. ತಂದೆ ತಾಯಿಗಳು ಕೆಲಸ ಕಾರ್ಯಗಳಿಗೆ ತಮ್ಮ ಜೊತೆಯಲ್ಲಿಯೇ ಕರೆದುಕೊಂಡು ಹೋಗುತ್ತಿದ್ದರು. ಇಲ್ಲವೇ ಚಿಕ್ಕಮಕ್ಕಳನ್ನು ಮನೆಯಲ್ಲಿಯೇ ಬಿಟ್ಟು ಕೂಲಿ ಕೆಲಸಕ್ಕೆ ಪಾಲಕರು ಹೋದಾಗ ಅವರನ್ನು ನೋಡಿಕೊಳ್ಳಲು ಇವರನ್ನು ಶಾಲೆ ಬಿಡಿಸಿದರೆಂಬ ಬಹುತೇಕ ಮಹಿಳೆಯರಿಂದ ಈ ಮಾತು ಕೇಳಿಬರುತ್ತದೆ. ಅಲ್ಲದೆ ಕೂಲಿ ಕೆಲಸಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಗುಳೆ ಹೋಗುವ ಪದ್ಧತಿ ಈಗಲೂ ಈ ಸಮುದಾಯದಲ್ಲಿದೆ. ಆದರೆ ಅವಿದ್ಯಾವಂತರ ಸಂಖ್ಯೆ ಈಗ ತುಂಬಾ ಕಡಿಮೆ ಪ್ರಮಾಣದಲ್ಲಿದೆ.

ಈ ಸಮಾಜವು ಮತ್ತೊಂದು ನಾಗರಿಕ ಸಮುದಾಯವನ್ನು ಅನುಕರಿಸತೊಡಗಿದೆ. ಇದರಿಂದ ತಮ್ಮ ಮಕ್ಕಳನ್ನು ಶಿಕ್ಷಣಕ್ಕಾಗಿ ಶಾಲಾ ಕಾಲೇಜುಗಳಿಗೆ ಕಳಿಸುತ್ತಿದ್ದಾರೆ. ಸರ್ಕಾರದಿಂದ ಸಿಗುವ ಎಲ್ಲಾ ರೀತಿಯ ಸೌಲಭ್ಯವನ್ನು ಉಪಯೋಗಿಸಿಕೊಂಡು ಈಗ ಬೆಳೆಯುತ್ತಿದೆ. ಆದರೆ ಗೌರಿಬಾಯಿಯ ಕಾಲಕ್ಕೆ ಲಂಬಾಣಿ ಸಮುದಾಯವು ವೈಚಾರಿಕವಾಗಿ ಬೆಳೆದಿರಲಿಲ್ಲ. ಹೀಗಾಗಿ ಇವರಂತಹ ಅನೇಕ ಮಹಿಳೆಯರು ಶಿಕ್ಷಣ ಕ್ಷೇತ್ರದಿಂದ ದೂರ ಉಳಿಯಬೇಕಾಯಿತು. ಈಗ ಗೌರಿಬಾಯಿಗೆ ೪೫-೪೬ ವಯಸ್ಸಾಗಿದೆ. ೧೯೮೮ರಲ್ಲಿ ಇವರಿಗೆ ಮದುವೆಯಾಗಿ ಕುಟುಂಬ ಜೀವನ ನಡೆಸಿದರು. ಇವರಿಗೆ ಐದು ಜನ ಮಕ್ಕಳು ಒಂದು ಹೆಣ್ಣು, ನಾಲ್ಕು ಜನ ಗಂಡು ಮಕ್ಕಳು. ನಾಲ್ಕು ಜನ ಗಂಡು ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಒಬ್ಬ ಮಗ ಇಂಜಿನಿಯರಿಂಗ್ ಆಗಿ ಪಿಡಿಲಿಟಿ ಮ್ಯಾನೆಜ್‌ಮೆಂಟ್ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದಾನೆ.

ಗೌರಿಬಾಯಿ ಮನೆತನ ಮೊದಲು ತುಂಬಾ ಬಡತನದಿಂದ ಕೂಡಿತ್ತು. ಹುಲ್ಲು ಮತ್ತು ಕಟ್ಟಿಗೆಯನ್ನು ಮಾರಿ ಬದುಕನ್ನು ಸಾಗಿಸಬೇಕಾಗಿತ್ತು. ಆ ವೇಳೆಗೆ ಹೊಲಗದ್ದೆಗಳಿರಲಿಲ್ಲ. ಚಿಕ್ಕವಳಿರುವಾಗಲೇ ಗೌರಿಬಾಯಿ ತುಂಬಾ ಕಷ್ಟ ಪಟ್ಟಿದ್ದಾಳೆ. ಹುಲ್ಲು, ಕಟ್ಟಿಗೆ ಮಾರಿ ತಮ್ಮ ಕುಟುಂಬಕ್ಕೆ ಆಸರೆ ಆಗಿದ್ದಳು. ಅಲ್ಲದೇ ಹೊಲಗದ್ದೆಗೆ ಕೂಲಿ, ಗಣಿ ಮುಂತಾದ ಕೆಲಸಕ್ಕೆ ಹೋಗುತ್ತಿದ್ದಳು. ಆಗ ನಾಲ್ಕರಿಂದ ಐದು ರೂಪಾಯಿ ಕೂಲಿ ಹಣ ದೊರೆಯುತ್ತಿತ್ತು. ಮದುವೆ ಆದ ಮೇಲೆ ಮೈನ್ಸ್‌ನಲ್ಲಿ ಕೆಲಸ ಮಾಡುತ್ತಿದ್ದಳು.

ಈ ಕಸೂತಿ ಕೆಲಸಕ್ಕೆ ಮೊದಲು ಐದು ಮಂದಿ, ನಂತರ ಹನ್ನೊಂದು ಮಂದಿ ಮಹಿಳೆಯರಲ್ಲಿ ಗೌರಿಬಾಯಿಯೂ ತರಬೇತಿಗೆ ಹೋದರು. ತಿಂಗಳಿಗೆ ಎರಡನೂರ ಐವತ್ತು ರೂಪಾಯಿ ಸಂಬಳ ಕೊಡುತ್ತಿದ್ದರು. ಆಗ ಪ್ರಯಾಣಭತ್ಯೆ ಇತರೆ ಯಾವುದೇ ಸೌಲಭ್ಯ ಇರಲಿಲ್ಲ. ಆರು ತಿಂಗಳುಗಳ ಕಾಲ ತುಂಬ ಕಷ್ಟದಿಂದ ಈ ತರಬೇತಿಯನ್ನು ಪಡೆದಳು. ತರಬೇತಿ ಮುಗಿದ ಮೇಲೆ 'ಪೀಸ್' ರೇಟಿನ ಆಧಾರದ ಮೇಲೆ ಇವರಿಗೆ ಹಣ ನಿಗದಿಪಡಿಸಿದರು. ಆಗ ಹದಿನೈದು ದಿನಕ್ಕೆ ಒಮ್ಮೆ ಸಂಬಳ ಕೊಡುತ್ತಿದ್ದರು. ಇವರ ಶ್ರಮಕ್ಕೆ ತಕ್ಕಂತೆ ಹಣ ದೊರೆಯುತ್ತಿತ್ತು. ನೂರ ಇಪ್ಪತ್ತರಿಂದ ನೂರ ಐವತ್ತರವರೆಗೆ ಇವರಿಗೆ ಆಗ ಸಂಬಳ ಸಿಗುತ್ತಿತ್ತು. ಕಡಿಮೆ ಪ್ರಮಾಣದ ಸಂಬಳ ಇರುವ ಕೆಲಸಕ್ಕೆ ಹೋಗಬಾರದೆಂದು ಮನಸ್ಸು ಮಾಡಿದರಂತೆ. ಆದರೆ ಗಂಡನ ಒತ್ತಾಯದ ಮೇರೆಗೆ ಈ ಕೆಲಸಕ್ಕೆ ಬರಬೇಕಾಯಿತು. ಕಸೂತಿ ಕೆಲಸದಿಂದಲೇ ಈಗ ನಾನು ಬೆಳೆಯುವಂತಾಯಿತು. ಏನೂ ಕಲಿಯದ ಗೌರಿಬಾಯಿ ಈಗ ದೇಶವಿದೇಶಗಳ ಕಡೆಗೆ ಸುತ್ತಾಡಿ ಬರಬೇಕಾದರೆ ಈ ಕಲೆಯೇ ಪ್ರಮುಖ ಕಾರಣ ಎನ್ನುವರು.

ಸುಮಾರು ನಾಲ್ಕು ವರ್ಷಗಳವರೆಗೆ ಕೆಲಸ ಮಾಡಿದ ಮೇಲೆ ಕುಶಲ ಕಲಾಕೇಂದ್ರದ ವತಿಯಿಂದ 'ರೇಷನ್' ಕೊಡಲು ಪ್ರಾರಂಭಿಸಿದರು. ಮೊದಲು ಅರ್ಧ ಪ್ರಮಾಣದ 'ರೇಷನ್' ದೊರೆಯುತ್ತಿತ್ತು. ಮೂರು ನೂರು ರೂಪಾಯಿ ಕೆಲಸ ಮಾಡಿದರೆ ಅರ್ಧ 'ರೇಷನ್' ಸಿಗುತ್ತಿತ್ತು. ಹೀಗೆ ಗೌರಿಬಾಯಿ ಹಂತ ಹಂತವಾಗಿ ಕೆಲಸ ಮಾಡಿ ಈಗ ಇಪ್ಪತ್ಮೂರು ವರ್ಷವಾಗಿದೆ. ಈಗಲೂ ಕಸೂತಿ ಕಲೆಯಲ್ಲಿ ನಿರತರಾಗಿದ್ದಾರೆ. ತಮ್ಮ ಪಾರಂಪರಿಕ ಕಲೆಯ ಜೊತೆಗೆ ಆಧುನಿಕ 'ಡಿಜೈನ್' ಕಸೂತಿಯನ್ನು ಸಹ ಕಲಿಯುತ್ತಿದ್ದಾರೆ. ಚಿಕ್ಕವಳಿರುವಾಗ ಶಾಲೆಯ ಬಾಗಿಲ ಮುಖವನ್ನು ನೋಡದ ಗೌರಿಬಾಯಿ ಕಸೂತಿ ಕೇಂದ್ರಕ್ಕೆ ಸೇರಿದ ಮೇಲೆ ಹೊರಗಿನ ಪ್ರಪಂಚಜ್ಞಾನ ಪಡೆದುಕೊಂಡಿದ್ದಾಳೆ. ಇದರಿಂದ ಇವರ ಮಕ್ಕಳ ವಿದ್ಯಾಭ್ಯಾಸ ಮಾಡಿಸಲು ಸಾಧ್ಯವಾಯಿತೆನ್ನುವರು. ಐದು ಮಂದಿ ಅಕ್ಕತಂಗಿಯರಲ್ಲಿ ಯಾರೂ ಸಹ ಓದುವ ಕಡೆಗೆ ಮುಖ ಮಾಡಿಲ್ಲವೆಂದು ಗೌರಿಬಾಯಿ ಹೇಳುವರು. ಆದರೆ ನನ್ನಂತೆ ಮಕ್ಕಳು ಅವಿದ್ಯಾವಂತರಾಗಬಾರದೆಂದು ಚೆನ್ನಾಗಿ ಅಭ್ಯಾಸ ಮಾಡಿಸಿದ್ದಾರೆ.

ಕಸೂತಿ ಕಲೆಗೆ ಆರು ತಿಂಗಳ ಕಾಲ ತರಬೇತಿ ಕೊಡುತ್ತೇವೆ ಎಂದು ಕುಶಲ ಕಲಾ ಕೇಂದ್ರದ ವತಿಯಿಂದ ತಾಂಡಾದಲ್ಲಿ ಬಂದು ಕರೆದರು. ಹೀಗಾಗಿ ಈ ಕೆಲಸಕ್ಕೆ ಬಂದು ಕೆಲಸ ಮಾಡುವಂತಾಯಿತು. ಬೆಂಗಳೂರು, ಮುಂಬೈ, ಚೆನ್ನೈ, ದೆಹಲಿ ಹಾಗೂ ಕಲ್ಕತ್ತ ಹೀಗೆ ಅನೇಕ ಪ್ರದೇಶಗಳನ್ನು ಈ ಕಸೂತಿ ಕಲೆಯ ಮೂಲಕ ನೋಡುವಂತಾಯಿತು ಎಂದು ಹೇಳುವರು. ಅತಿ ಹೆಚ್ಚು ಬಾರಿ ದೆಹಲಿಗೆ ಹೋಗಿ ತಮ್ಮ ಕಸೂತಿ ಕಲೆಯ ಕುರಿತು ಮಾಹಿತಿ ನೀಡಿದ್ದಾರೆ. ಶಾಲಾ-ಕಾಲೇಜುಗಳ ವಿದ್ಯಾರ್ಥಿಗಳಿಗೆ ಈ ಕಸೂತಿ ಕಲೆಯನ್ನು ದೆಹಲಿಯಲ್ಲಿ ಕಲಿಸಿದ್ದಾರೆ. ಅಲ್ಲದೆ ಕಲಾಪ್ರದರ್ಶನ ಇರುವಲ್ಲಿಯೂ ಈ ಕಲೆಯ ಕುರಿತು ಮಾಹಿತಿ ನೀಡಿದ್ದಾರೆ. ಕಾರ್ಯಾಗಾರಗಳಲ್ಲಿ ಸಹ ಕಸೂತಿಯ ಕುರಿತು ಕಲಾಸಕ್ತರಿಗೆ ಮಾಹಿತಿ ಕೊಟ್ಟಿದ್ದಾರೆ.

ಲೈಲಾ ತಯ್ಯಾಬ್ಜಿ ಎಂಬ ದೆಹಲಿಯ ಒಬ್ಬ ವಿನ್ಯಾಸಗಾರರು ಈ ಕೇಂದ್ರಕ್ಕೆ ಬಹಳ ಸಹಾಯ ಮಾಡಿದ್ದಾರೆ. ಬೇರೆ ಬೇರೆ ಕಡೆಯಿಂದ ಆರ್ಡರ್‌ಗಳನ್ನು ತಂದುಕೊಡುತ್ತಿದ್ದರು. ಚೆನ್ನೈನಲ್ಲಿ ಒಂದು ಕಾರ್ಯಗಾರದಲ್ಲಿ ಪಾರ್ವತಿ, ಶಾಂತಿಬಾಯಿ ಹಾಗೂ ಗೌರಿಬಾಯಿ ಸೇರಿ ಒಂದು ಸುಂದರ ಕಸೂತಿ ಕಲೆಯನ್ನು ರಚಿಸಿದರು. ಆ ಕಲಾ ಕಸೂತಿಯನ್ನು ಸ್ವೀಡನ್ ದೇಶದವರು ಕೊಂಡೊಯ್ದರು. ಈ ಸಮುದಾಯಕ್ಕೆ ಅಕ್ಷರ ಜ್ಞಾನವಿಲ್ಲದಿದ್ದರೂ ಬಹುದೊಡ್ಡ ಕಲೆ ಇವರಲ್ಲಿ ಮನೆ ಮಾಡಿಕೊಂಡಿದೆ.

ರಕ್ತಗತವಾಗಿ ಬಂದಿರುವ ಕಸೂತಿ ಕಲೆಯನ್ನು ಈ ಜನ ಉಳಿಸಿ ಬೆಳೆಸಬೇಕೆಂಬ ಅಭಿಪ್ರಾಯವನ್ನು ವಿದೇಶಿ ಕಲಾಸಕ್ತರು ನೀಡಿದರು. ಸ್ವೀಡನ್‌ನಲ್ಲಿ ಹತ್ತು ದಿನಗಳ ಕಾಲ ಕಸೂತಿ ಕಲೆಯ ಕುರಿತು ಮಾಹಿತಿ ನೀಡಿದರಂತೆ. ಅಲ್ಲದೇ ಪ್ರವಾಸಿ ತಾಣಗಳನ್ನು ನೋಡಿ ತುಂಬಾ ಸಂತೋಷ ಇವರಿಗಾಯಿತಂತೆ. ನಂತರ ಲಂಡನ್‌ಗೆ ಒಂದು ಸಾರಿ ಗೌರಿಬಾಯಿ ಹೋಗಿದ್ದಾಳೆ. ಇವರು ಅಮೆರಿಕಾ, ಲಂಡನ್, ಸ್ವೀಡನ್ ದೇಶಗಳಿಗೆ ಕಸೂತಿ ಕಲೆಯ ಅಭಿವೃದ್ಧಿಗಾಗಿ ಹೋಗಿರುವರು. ಕಲ್ಲಿನ ಕೆಲಸಕ್ಕೆ, ಕಟ್ಟಿಗೆ ಮಾರಲು ಹೋಗುತ್ತಿದ್ದ ಗೌರಿಬಾಯಿ ಇಂದು ಅಮೆರಿಕದಂತಹ ಹಲವು ದೇಶಗಳಿಗೆ ಹೋಗಿ ಬಂದಿರುವುದು ಸಂತೋಷದ ಸಂಗತಿಯಾಗಿದೆ.

ಗೌರಿಬಾಯಿಯು ಹಲವು ಕಡೆ ಪ್ರಶಸ್ತಿ ಹಾಗೂ ಸನ್ಮಾನ ಪಡೆದಿದ್ದಾಳೆ. ದೆಹಲಿಯಲ್ಲಿ ರಾಷ್ಟ್ರ ಪ್ರಶಸ್ತಿ ಪಡೆದರು. ಅಲ್ಲಿ ಈಗಿನ ರಾಷ್ಟ್ರಪತಿಯಾದ ಪ್ರಣವ್ ಮುಖರ್ಜಿ ಅವರು ಗೌರವಿಸಿದರು. ಸಂಡೂರು ಮಂಟಪದಲ್ಲಿ ಕೇಂದ್ರದ ವತಿಯಿಂದ ಸನ್ಮಾನ ಮಾಡಿದರು. ಹೊಸಪೇಟೆಯ 'ಬ್ಯಾಂಕ್ ಆಫ್ ಇಂಡಿಯಾ' ಅವರು ಸನ್ಮಾನ ಮಾಡಿ ಗೌರವಿಸಿದರು. ರೋಟರಿ ಬಾಲಭವನ್, ಲಾರಿ ಮಾಲೀಕರು ಹೀಗೆ ಅನೇಕ ಜನರಿಂದ ಗೌರಿಬಾಯಿ ಗೌರವಕ್ಕೆ ಒಳಗಾಗಿದ್ದಾರೆ. ಬೇರೆ ಕಡೆಗೆ ಹೊರಗಡೆಗೆ ಹೋದರೆ ಇವರಿಗೆ ಮೂವತ್ತೆಂಟು ರೂಪಾಯಿ ಪ್ರಯಾಣ ಭತ್ಯೆ ಕೊಡುವರು. ಆಗ ಅವರು ಕೊಡುವ ಹಣವನ್ನು ಹಾಗೆಯೇ ಉಳಿಸಿ, ತಾವು ಕೊಂಡೊಯ್ದ ಬುತ್ತಿಯನ್ನು ಬಳಸುತ್ತಿದ್ದರು. ಆ ಹಣದಿಂದ ಮಕ್ಕಳಿಗೆ ಬಟ್ಟೆ, ಪುಸ್ತಕ ಇಂತಹ ವಸ್ತುಗಳನ್ನು ಖರೀದಿಸುತ್ತಿದ್ದರಂತೆ.

ಗೌರಿಬಾಯಿಗೆ ಲಂಬಾಣಿ, ಹಿಂದಿ, ಕನ್ನಡ ಭಾಷೆಗಳು ಬರುತ್ತವೆ. ಹೊರಗಡೆಗೆ ಹೋದಾಗ ಹಿಂದಿಯಲ್ಲಿಯೇ ವ್ಯವಹರಿಸುವರು. ಈ ಕೆಲಸಕ್ಕೆ ಮೊದಲು ಸೇರಿದಾಗ ದಿನಕ್ಕೆ ಎಂಟು ರೂಪಾಯಿ ಕೂಲಿ ದೊರೆಯುತ್ತಿತ್ತು. ತಿಂಗಳಿಗೆ ಎರಡು ನೂರ ಐವತ್ತು ರೂಪಾಯಿ ಸಂಬಳ ಇವರಿಗೆ ನಿಗದಿಯಾಗಿತ್ತು. ಈಗ ಕೂಲಿ ಅಂದರೆ ಮೂವತ್ತು ರೂಪಾಯಿ ನೀಡುವರು. ಅಲ್ಲದೇ ಪಿ. ಎಫ್, ಬೋನಸ್ ಹಾಗೂ ತಿಂಗಳ ರೇಷನ್ ಕೊಡುವರು. ತಿಂಗಳಿಗೆ ಒಂದು ನೂರ ಇಪ್ಪತ್ತು ರೂಪಾಯಿ ಮುರಿದು ಹದಿನೆಂಟು ನೂರು ರೂಪಾಯಿಯ ಆಹಾರ ಸಾಮಗ್ರಿ ನೀಡುವರು. ಇವೆಲ್ಲವನ್ನು ಪರಿಗಣಿಸಿದರೆ ದಿನಕ್ಕೆ ಎಂಬತ್ತು ರೂಪಾಯಿ ಕೂಲಿ ಇವರಿಗೆ ದೊರೆಯುವುದು.

ಐವತ್ತು ವರ್ಷ ದಾಟಿದ ಮೇಲೆ ಇವರಿಗೆ ಸರ್ಕಾರದ ವತಿಯಿಂದ ಪಿಂಚಣಿ ದೊರೆಯುತ್ತಿದೆ. ಗೌರಿಬಾಯಿಗೆ ಇನ್ನೂ ಆರು ವರ್ಷ ದಾಟಿದ ಮೇಲೆ ಪಿಂಚಣಿ ಬರುತ್ತದೆ. ಪಿಂಚಣಿ ಪಡೆದ ಅನೇಕ ಮಹಿಳೆಯರು ಈಗಲೂ ಸಹ ಆಸಕ್ತಿಯಿಂದ ಕೇಂದ್ರದಲ್ಲಿ ಕಸೂತಿ ಕಲೆಗೆ ಬರುತ್ತಿದ್ದಾರೆ. ಸುಮಾರು ನಾಲ್ಕರಿಂದ ಐದು ಮಂದಿ



**ಕಸೂತಿ ಕಲಾವಿದರು**




ಪ್ರಣಬ್ ಮುಖರ್ಜಿ ಅವರಿಂದ ೨೦೦೬ರ ರಾಷ್ಟ್ರೀಯ ಪುರಸ್ಕಾರ ಸ್ವೀಕರಿಸುತ್ತಿರುವ ಗೌರಿಬಾಯಿ



ಕಸೂತಿ ಕೆಲಸದಲ್ಲಿ ನಿರತಳಾದ ಗೌರಿಬಾಯಿ



## ಕಸೂತಿ ಕಲಾವಿದೆ ಗೌರಿಬಾಯಿ ಅವರು ಪಡೆದ ಪ್ರಶಸ್ತಿ ಪತ್ರಗಳು



COCKPIT ARTS

**Holborn Studios and Head Office**
Cockpit Yard
Northington Street
London WC1N 2NP
t 020 7419 1959 f 020 7916 2455
info@cockpitarts.com
www.cockpitarts.com

**Deptford Studios**
18-22 Creekside
London SE8 3DZ
t 020 8692 4463 f 020 8692 3735

*Certificate of Appreciation*

This is to certify that: **Gowri Bai**
Of: **Karnataka**

Has participated in a collaborative workshop and demonstrated skill in: **Lambani Embroidery**

Sharing with designer-makers in England at: Cockpit Arts, London

From: June 21st to June 22nd 2005

We have enjoyed working with you very much.

Thank you.

Chief Executive



भारत सरकार
कृषि एवं ग्रामीण उद्योग मंत्रालय
खादी और ग्रामोद्योग आयोग

**राष्ट्रीय पुरस्कार -2006**

खादी एवं ग्रामोद्योग क्षेत्र में उत्कृष्टता के लिए
श्रीमती अम्बु गौरी बाई
सन्डूर कुशाला कला केन्द्र
सन्डूर, बेलारी (कर्नाटक)
को राष्ट्रीय उत्कृष्टता पुरस्कार प्रदान किया जाता है।

सी. चन्द्रन
मुख्य कार्यकारी अधिकारी
खादी और ग्रामोद्योग आयोग

स्थान नई दिल्ली
दिनांक अक्तूबर 7 2006

कुमुद जोशी
अध्यक्ष
खादी और ग्रामोद्योग आयोग

Government of India
Ministry of Agro & Rural Industries
Khadi and Village Industries Commission

**NATIONAL AWARD - 2006**

*conferred for*
*Excellence in the field of Khadi and Village Industries* to
Smt. Ambu Gowri Bai
Sandur Kaushala Kala Kendra,
Sandur, Bellary - Karnataka

C. CHANDRAN, IAS
Chief Executive Officer
Khadi and Village Industries Commission

Place New Delhi
Date October 7, 2006

KUMUD JOSHI
Chairperson
Khadi and Village Industries Commission



SANTA FE INTERNATIONAL
**FOLK ART MARKET**

IN APPRECIATION OF
Ambu Gowri Bai

OFFICIAL PARTICIPANT OF THE
2009 SANTA FE INTERNATIONAL FOLK ART MARKET

Charlene Cerny
Executive Director
**Santa Fe International Folk Art Market**

Tom Aageson
Director
**Museum of New Mexico Foundation**

Stuart Ashman
Cabinet Secretary
**New Mexico Department of Cultural Affairs**

Marsha Bol
Director
**Museum of International Folk Art**

ಮಹಿಳೆಯರು ಪಿಂಚಣಿ ಪಡೆಯುವವರು, ಈಗ ಈ ಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರಿಗೆ ಇವರ ಶ್ರಮಕ್ಕೆ ತಕ್ಕಂತೆ ಹಣ ನೀಡುವರು. ಅಲ್ಲದೇ ಆಹಾರ ಸಾಮಗ್ರಿಯನ್ನು ಸಹ ನೀಡುವರು. ಈ ಕಲೆಗೆ ವಯಸ್ಸು ಮುಖ್ಯವಲ್ಲ, ಕಣ್ಣು ಮುಖ್ಯ. ಕಣ್ಣು ಕಾಣುವವರೆಗೂ ಈ ಕೆಲಸ ಮಾಡಬಹುದು. ಹೀಗಾಗಿ ಕೇಂದ್ರದ ವತಿಯಿಂದ ಅಲ್ಪ ಪ್ರಮಾಣದ ಹಣ ತೆಗೆದುಕೊಂಡು ಕೆಲವು ಹಿರಿಯ ಮಹಿಳೆಯರಿಗೆ ಕನ್ನಡಕ ಕೊಟ್ಟಿದ್ದಾರೆ.

ಈ ಕಸೂತಿ ಕೆಲಸವನ್ನು ಚಿಕ್ಕವಳಿರುವಾಗಲೇ ಲಂಬಾಣಿ ಮಹಿಳೆಯರು ಕಲಿತಿರುತ್ತಾರೆ. ಏಕೆಂದರೆ ಹಿಂದೆ ಹೆಚ್ಚಾಗಿ ಲಂಬಾಣಿ ಉಡುಗೆಯಿಂದಲೇ ಮದುವೆ ಮಾಡಿಕೊಡುತ್ತಿದ್ದರು. ಕೆಲವು ಮಹಿಳೆಯರು ಮದುವೆ ಆಗುವ ಮುಂಚೆಯೇ ಅವರ ತಾಂಗಡಿ(ಮದುಮಗಳಿಗೆ ಕೊಡುವ ಬಟ್ಟೆ) ಸಾಮಾನುಗಳನ್ನು ಅವರೇ ಮಾಡುತ್ತಿದ್ದರು. ಇಂತಹ ಪರಿಸ್ಥಿತಿ ಅಂದು ನಿರ್ಮಾಣವಾಗಿತ್ತು. ಆದರೆ ಈಗ ಲಂಬಾಣಿ ಉಡುಗೆಯಿಂದ ಯಾರೂ ಮದುವೆ ಮಾಡಿಕೊಟ್ಟು ಕಳುಹಿಸುವುದಿಲ್ಲ. ಅನಿವಾರ್ಯವಾಗಿ ತಾಯಿಯ ಕೆಲಸವನ್ನು ಮಗಳು ಕಲಿಯಲೇಬೇಕು. ಕುಶಲ ಕಲಾಕೇಂದ್ರದಲ್ಲಿ ಲಂಬಾಣಿಗರ ಪಾರಂಪರಿಕ ಕಸೂತಿಯನ್ನೇ ನಾವೀನ್ಯಗೊಳಿಸಿ ಕಲಿಸಲು ಇವರಿಗೆ ತರಬೇತಿ ಕೊಡುವರು. ಈ ಕಸೂತಿ ಕೆಲಸವನ್ನು ಇಪ್ಪತ್ತುಮೂರು ವರ್ಷಗಳಿಂದ ಗೌರಿಬಾಯಿ ಮಾಡುತ್ತಿದ್ದಾಳೆ. ಈ ಕೆಲಸ ಬಿಡಲು ಇವರಿಗೆ ಇಷ್ಟವಿಲ್ಲ. ಒಂದು ದಿನವೂ ಕೆಲಸಕ್ಕೆ ಬಾರದ ದಿನಗಳೆ ಇಲ್ಲ. ಎಷ್ಟೇ ಕೆಲಸವಿದ್ದರೂ ರಾತ್ರಿ ಸಹ ಕಸೂತಿ ಮಾಡುವುದು ಗೌರಿಬಾಯಿಯ ಹವ್ಯಾಸವಾಗಿತ್ತು.

ಈ ಕುಶಲ ಕಲಾಕೇಂದ್ರದವರು ಕಡಿಮೆ ಕೂಲಿ ನೀಡಿದರು. ಇವರು ದಿನನಿತ್ಯ ಕೆಲಸ ನೀಡುವರು. ಅಲ್ಲದೇ ಇತರೆ ಸೌಲಭ್ಯವು ಸಹ ದೊರೆಯುವುದು. ಆದರೆ ಹೊಲಗದ್ದೆಗಳಲ್ಲಿ ಕೂಲಿ ಕೆಲಸ ದಿನವೂ ಸಿಗಲಾರದು ಎಂಬ ಹಿನ್ನೆಲೆಯಲ್ಲಿ ಈ ಕೇಂದ್ರಕ್ಕೆ ಬರುವುದುಂಟು ಎಂದು ಹೇಳುವರು. ಈ ಕಲೆಯನ್ನು ಬಿಡಬಾರದು. ಇದರಿಂದಲೇ ಹೊರಗಿನ ಪ್ರಪಂಚ ಅರಿವು ಉಂಟಾಗಿದ್ದೆಂದು ಗೌರಿಬಾಯಿ ತಮ್ಮ ಪಾರಂಪರಿಕ ಕಲೆಯ ಬಗೆಗೆ ಹೆಚ್ಚು ಆಸಕ್ತಿ ಹೊಂದಿದ್ದಾರೆ. ಹೊಲಗದ್ದೆಗಳಿಗೇನಾದರೂ ಹೋದರೆ ಈ ಕೆಲಸ ಯಾವಾಗ ಆದೀತು, ಕಸೂತಿ ಕೆಲಸ ಯಾವಾಗ ಹೋಗಿ ಮಾಡಬೇಕು ಎಂದು ಅವರ ಮನಸ್ಸು ತುಡಿಯುತ್ತಿದೆ ಎನ್ನುವರು. ಈ ಲಂಬಾಣಿ ಕಲೆಯನ್ನು ಮರೆಯಬಾರದು. ಯಾವುದೇ ಒಂದು ಮೂಲೆಯಲ್ಲಿದ್ದ ನಾನು ವಿದೇಶದ ನೆಲ ನೋಡಿ, ಪ್ರಶಸ್ತಿ ಪಡೆದಿದ್ದು ಈ ಕಲೆಯ ಮೂಲಕ ಎನ್ನುವರು. ದೊಡ್ಡ ದೊಡ್ಡ ವ್ಯಕ್ತಿಗಳ ನಡುವೆ ಮಾತನಾಡಲು, ಎಲ್ಲವನ್ನೂ ಅನುಕೂಲ ಮಾಡಿಕೊಟ್ಟಿದ್ದು ಈ ಸಮುದಾಯದ ಕಲೆಯೇ ಎಂಬ ಅಭಿಪ್ರಾಯ ಗೌರಿಬಾಯಿಯವರದು. ಓದು, ಬರಹ ಇಲ್ಲದಿದ್ದರೂ, ಈ ಕಲೆಯ ಮೂಲಕ ಅಪಾರ ಗೌರವ ಲಭಿಸಿದೆ. ಈ ಕಲೆಯ ಮೂಲಕ ಹೊರನಾಡಿಗೆ ಗುರುತಿಸಿಕೊಂಡೆ ಎನ್ನುವರು.

ಈ ಕಸೂತಿ ಕಲೆಯನ್ನು ಯಾಕೆ ಬಿಡಲು ಆಗಲಿಲ್ಲವೆಂದರೆ, ಎಷ್ಟೇ ಶ್ರೀಮಂತರಾಗಿರಲಿ, ಓದು ಬರಹ ಕಲಿತಿರಲಿ, ಆದರೆ ಮದುವೆಯ ವೇಳೆಗೆ ಗಣ್ಣೊ, ಪುಲ್ಯಾ, ಫೇಟಿಯಾ, ಕಾಂಚಳಿ(ಲಂಬಾಣಿಗರ ಉಡುಗೆ) ಬೇಕೇ ಬೇಕು. ಅಲ್ಲದೇ ಹಬ್ಬ ಹರಿದಿನಗಳಲ್ಲೂ ಈ ಉಡುಗೆ ತೊಡಲು ಬೇಕೆನ್ನುವರು. ಇವುಗಳೆಲ್ಲದಕ್ಕೂ ಈ ಉಡುಗೆ ಪ್ರಮುಖವಾಗಿ ಬೇಕು. ಹೀಗಾಗಿ ಈ ಕಲೆಯನ್ನು ಮರೆಯಬಾರದೆನ್ನುವರು. ಗೌರಿಬಾಯಿಯ ಮಗಳು ಸಹ ಕಸೂತಿ ಕಲೆಯನ್ನು ಕಲಿತಿದ್ದಾಳೆ.

ಕೇಂದ್ರದವರು ಹದಿನೈದು ಮಂದಿಗೆ ತರಬೇತಿ ನೀಡುತ್ತಿದ್ದಾಗ ಗೌರಿಬಾಯಿ ಸೇರಿಕೊಂಡರು. ಇದರಲ್ಲಿ ಕೆಲವರು ಆಸಕ್ತಿಯಿಂದ ಕೆಲಸ ಮಾಡಿದರೆ ಮತ್ತೆ ಕೆಲವರು ಬಿಟ್ಟರು. ಸುಶೀಲಾ ನಗರದಲ್ಲಿ ಅರವತ್ತು ಜನ ಮಹಿಳೆಯರು ಕೆಲಸ ಮಾಡುತ್ತಿದ್ದಾರೆ. ಈ ರೀತಿಯ ಕಸೂತಿ ಕಲೆಯನ್ನು ಕೋಗಳಿ ತಾಂಡಾ, ಮರಿಯಮ್ಮನಹಳ್ಳಿ ತಾಂಡ, ಕಡ್ಡಿರಾಂಪುರ ತಾಂಡಾ, ದೂಪದ ಹಳ್ಳಿ ತಾಂಡಾ ಮುಂತಾದ ಸುಮಾರು ಹತ್ತು ತಾಂಡಾಗಳಲ್ಲಿ ಕಸೂತಿ ಕಲೆಯು ಕೇಂದ್ರದ ವತಿಯಿಂದ ನಡೆಯುತ್ತಿದೆ.

ಕೇಂದ್ರದ ವತಿಯಿಂದ ಮಕ್ಕಳಿಗೆ ಪಿ.ಯು.ಸಿ. ವಿದ್ಯಾಭ್ಯಾಸದವರೆಗೆ ವರ್ಷಕ್ಕೆ ಹನ್ನೆರಡು ನೂರು ರೂಪಾಯಿ ಕೊಡುತ್ತಿದ್ದರು. ಈಗ ಹುಡುಗಿಯರಿಗೆ ಐದನೇ ತರಗತಿಯಿಂದ ಹನ್ನೆರಡನೇ ತರಗತಿಯವರೆಗೆ ಎರಡೂವರೆ ಸಾವಿರ ರೂಪಾಯಿ ವರ್ಷಕ್ಕೆ ಕೊಡುವರು. ಮೊದಲು ಐ.ಸಿ.ಪಿ.ಸಿ ಹೆಲ್ತ್ ಕಾರ್ಡ್ ಕೊಟ್ಟಿದ್ದಾರೆ. ಅಲ್ಲದೇ ಕುಟುಂಬದವರಿಗೆ ಏನಾದರೂ ಕಾಯಿಲೆಗಳು ಬಂದರೆ ತೋರಿಸುವ ಸೌಲಭ್ಯವಿದೆ. ಪಿ.ಎಫ್. ಅಲ್ಲದೇ ಗೌರಿಬಾಯಿ ಅವರು ಸ್ವಸಹಾಯ ಸಂಘಗಳಿಗೆ ಹಣ ಕಟ್ಟುವರು. ರೇಷನ್‌ಗೆ ಕಡಿತವಾಗುತ್ತದೆ ಇದರಿಂದ ಸಂಬಳ ಮನೆಗೆ ಹೋಗುವುದು ಕಡಿಮೆ ಎನ್ನುವರು. ಆ ಕೇಂದ್ರದಿಂದ ರೇಷನ್ ಕೊಡುವರು. ೨೫ ಕೆ.ಜಿ. ಅಕ್ಕಿ, ೨೭ ಕೆ.ಜಿ. ಜೋಳ, ೩ ಕೆ.ಜಿ. ಮೆಣಸಿನಕಾಯಿ, ೨. ಕೆ.ಜಿ. ಒಳ್ಳೆಣ್ಣೆ, ೫. ಕೆ.ಜಿ. ಗೋಧಿ ಹೀಗೆ ಒಂಬತ್ತು ತರಹದ ಆಹಾರ ಸಾಮಗ್ರಿಗಳು ಕೇಂದ್ರದಿಂದ ದೊರೆಯುತ್ತದೆ. ಈ ಜನರಿಗೆ ಇದೇ ಮುಖ್ಯ ಆಧಾರ. ಕೂಲಿ ಕೆಲಸದ ಹಣಕ್ಕಿಂತ ಇವರು ಕೊಡುವ ಆಹಾರ ಸಾಮಗ್ರಿಯಿಂದ ಒಂದು ತಿಂಗಳ ಕಾಲ ಕುಟುಂಬ ನಿರ್ವಹಿಸಬಹುದೆಂದು ಇಲ್ಲಿಯ ಮಹಿಳೆಯರ ಅಭಿಪ್ರಾಯವಾಗಿದೆ. ಈ ಮೇಲಿನ ಆಹಾರ ಸಾಮಗ್ರಿ ದೊರೆಯಬೇಕಾದರೆ ಆರುನೂರು ರೂಪಾಯಿಯ ಕಸೂತಿ ಕೆಲಸ ಮಾಡಿರಬೇಕು. ಒಂದು ವೇಳೆ ಕಸೂತಿ ಕೆಲಸ ಕಡಿಮೆ ಮಾಡಿದರೆ ಕಡಿಮೆ ರೇಷನ್ ದೊರೆಯುವುದು.

ಕೇಂದ್ರದಲ್ಲಿ ಕಸೂತಿ ಕೆಲಸ ಮಾಡುವವರೆಲ್ಲರೂ ಲಂಬಾಣಿ ಸಮುದಾಯದ ಮಹಿಳೆಯರು. ಕೆಲಸ ಮಾಡಲು ಬೇಕಾದ ಎಲ್ಲ ಪರಿಕರಗಳನ್ನು ಕೇಂದ್ರವೇ ಇವರಿಗೆ ಒದಗಿಸುತ್ತದೆ. ಇಲ್ಲಿ ತಯಾರಾಗುವ ಹೊಸ ಮಾದರಿಯ ಬಟ್ಟೆಗಳ ಹೊಲಿಗೆ, ಕಸೂತಿ ಮುಂತಾದ ಎಲ್ಲ ಖರ್ಚು, ವೆಚ್ಚ, ತೆಗದು, ಬಟ್ಟೆಯ ಬೆಲೆಯನ್ನು ನಿಗದಿಪಡಿಸುವರು. ಇಲ್ಲಿ ಕೋತಳಿ, ಶಾಪಿಂಗ್ ಬ್ಯಾಗ್‌ಗೆ ಕೆಲವರು ಆದೇಶ ನೀಡಿದರೆ ಲಂಬಾಣಿ ಉಡುಗೆ ತಯಾರಿಸುವರು. ಬೆಡ್ ಕವರ್, ತೋರಣ, ಲೋಲಕ, ಹೇರ್‌ಬ್ಯಾಂಡ್ ಪ್ರತಿಯೊಂದನ್ನು ಲಂಬಾಣಿ ಕಸೂತಿ ಕಲೆಯಿಂದ ಹೊಸ ಮಾದರಿಯ ವಸ್ತುಗಳನ್ನು ಇಲ್ಲಿ ತಯಾರಿಸುವರು. ಈ ಕಲೆಯು ಲಂಬಾಣಿಗರಿಂದ ಲಂಬಾಣೇತರರಿಗೆ ತುಂಬಾ ಇಷ್ಟವಾದ ಕಲೆಯಾಗಿದೆ. ಅದರಲ್ಲೂ ಹೊರರಾಜ್ಯದ ಜನರಿಗೆ, ವಿದೇಶಿಯರಿಗೆ ಈ ಕಸೂತಿ ಕಲೆಯಿಂದ ತಯಾರಿಸುವ ಪರಿಕರಗಳು ಬಹು ಮನ್ನಣೆ ಪಡೆದಿವೆ ಎಂದು ಗೌರಿಬಾಯಿ ಹೇಳುವರು.

ಫ್ಯಾಬ್ ಇಂಡಿಯಾ ಕಂಪನಿಗೆ ಬಟ್ಟೆಗಳ ಮೇಲೆ ಬೇಕಾಗುವ ಎಲ್ಲಾ ರೀತಿಯ ಕಲೆಯನ್ನು ಈ ಕೇಂದ್ರದಿಂದಲೇ ತಯಾರಿಸುವರು. ಕುಡ್ತಾ, ಬೆಡ್ ಕವರ್ ಮುಂತಾದವನ್ನು ಮಾಡಲು ಇಲ್ಲಿ ಆರ್ಡರ್ ಕೊಡುವರು. ಒಂದು ಪೀಸಿಗೆ ಇಷ್ಟು ಅಂತ ನಿಗದಿಪಡಿಸಿ ಇವರಿಗೆ ಕಸೂತಿ ಹಾಕಲು ಕೊಡುವರು. ಮೊದಲೇ ಬಟ್ಟೆ ಎಲ್ಲಾ ರೀತಿಯಿಂದ ಹೊಲಿದಿರುತ್ತವೆ. ಆದರೆ ಅವುಗಳ ಮೇಲೆ 'ಕಸೂತಿಯನ್ನು' ಲಂಬಾಣಿಗರು ಹಾಕುವರು. ಇವರು ಮಾಡಿಕೊಟ್ಟ ಕಸೂತಿಯಿಂದ ಫ್ಯಾಬ್ ಇಂಡಿಯಾ ಕಂಪನಿ ಹೆಚ್ಚು ಬಟ್ಟೆಗಳನ್ನು ಮಾರುತ್ತಿವೆಯಂತೆ. ಈ ಭಾಗದ ಜನರಿಗೆ ಕಡಿಮೆ ಕೂಲಿ ಅಲ್ಲದೆ ಸ್ವಲ್ಪ ಸಾಲ ಮಾಡಿಕೊಂಡಿರುವ ಸಮುದಾಯದ ಮಹಿಳೆಯರು ಕೆಲವು ದಿನಗಳವರೆಗೆ ಬೇರೆ ಕಡೆಗೆ ಗುಳೆ ಹೋಗಿದ್ದಾರೆ. ನಂತರ ಕೇಂದ್ರದ ಕೆಲಸಕ್ಕೆ ಬಂದರೆ ತೆಗೆದುಕೊಳ್ಳುವರು. ಇಲ್ಲಿ ವಯಸ್ಸಾದ ಮಹಿಳೆಯರು ಕಂಡುಬರುವರು. ಗೌರಿಬಾಯಿ ನಲವತ್ತಾರು ವರ್ಷ ವಯಸ್ಸಾದರೂ ಹೆಚ್ಚು ಲವಲವಿಕೆಯಿಂದ ಕಸೂತಿ ಕಲೆಯಲ್ಲಿ ತೊಡಗಿರುವರು. ಒಂದು ದಿನ ರಜೆ ಮಾಡಿದರೆ, ಯಾವಾಗ ಕೆಲಸಕ್ಕೆ ಹೋಗಲಿ ಎಂದು ಗೌರಿಬಾಯಿ ಅವರ ಮನಸ್ಸು ತುಡಿಯುತ್ತದೆ.

ಲಂಬಾಣಿಗರ ಉಡುಗೆ ಬಹಳ ದುಬಾರಿ. ಹೀಗಾಗಿ ಹಲವು ಮಹಿಳೆಯರು ಈ ಉಡುಗೆಯನ್ನು ಬಿಟ್ಟು ಸೀರೆಯ ಕಡೆಗೆ ವಾಲಿರುವರು. ಲಂಬಾಣಿಗರು ಉಡುವ ಉಡುಪನ್ನು ಸಹ ತಯಾರಿಸುವರು. ಕೇವಲ ಕಸೂತಿ ಮಾಡಲು ಐದನೂರು ರೂಪಾಯಿ ತೆಗೆದುಕೊಳ್ಳುವರು. ಒಂದು ಕುಪ್ಪಸ(ಕಾಂಚಳಿ) ತಯಾರಾಗಬೇಕಾದರೆ ಒಂದು ಸಾವಿರ

ರೂಪಾಯಿ ಬೇಕು. ಒಂದು ಜೊತೆ ಬಟ್ಟೆಗೆ ಆರರಿಂದ ಎಂಟು ಸಾವಿರ ರೂಪಾಯಿ ಬೇಕೆನ್ನುವರು. ಒಂದು ಜೊತೆ ಮದುವೆ ಬಟ್ಟೆ ತಯಾರಿಸಲು ಕನಿಷ್ಠವೆಂದರೂ ಹನ್ನೆರಡು ಸಾವಿರಕ್ಕೂ ಹೆಚ್ಚು ಹಣ ಖರ್ಚಾಗುವುದು. ಈ ಉಡುಗೆಗೆ ಇಂದು ತುಂಬ ಬೆಲೆ ಇದೆ. ಹೀಗಾಗಿ ಸುಶೀಲ ನಗರದಲ್ಲಿ ಸುಮಾರು ಅರವತ್ತೈದು ಮಹಿಳೆಯರು ಕೆಲಸ ಮಾಡುತ್ತಿದ್ದಾರೆ.

ಗೌರಿಬಾಯಿಗೆ ಪ್ರಶಸ್ತಿ ಬಂದಾಗ ಮಾಜಿ ಸಚಿವರಾದ ಎಂ.ವೈ. ಘೋರ್ಪಡೆಯವರು ತುಂಬಾ ಸಂತೋಷಪಟ್ಟರು. ಈ ಪ್ರಶಸ್ತಿಯಿಂದ ಕೇವಲ ನಮ್ಮ ಸಂಸ್ಥೆ, ಮಾತ್ರವಲ್ಲ, ಇಡೀ ಕರ್ನಾಟಕಕ್ಕೆ ಗೌರವ ತಂದಿರುವೆ ಎಂದು ಮಾತಾಡಿದರು. ಮುಂಬೈ, ಹೈದ್ರಾಬಾದ್, ಮದ್ರಾಸ್, ದೆಹಲಿ, ಬೆಂಗಳೂರು ಮುಂತಾದ ಕಡೆ ಪ್ರದರ್ಶನಕ್ಕೆ ಹೋಗಿದ್ದಾರೆ. ಶ್ರೀಮತಿ ಸೋನಿಯಾ ಗಾಂಧಿ, ಶೋಭಾ ಕರಂದ್ಲಾಜೆ, ಯಡಿಯೂರಪ್ಪ, ಬಿ.ಟಿ. ಲಲಿತಾನಾಯಕ ಮುಂತಾದವರ ಜೊತೆಗೆ ಮಾತಾಡಿದ್ದಾರೆ. ಕಸೂತಿ ಕಲೆಯ ಕುರಿತು ಚರ್ಚಿಸಿದ್ದಾರೆ. ದೇಹದಲ್ಲಿ ಶಕ್ತಿ ಹಾಗೂ ಕಣ್ಣು ಕಾಣುವವರೆಗೂ ಈ ಕೆಲಸ ಬಿಡುವುದಿಲ್ಲ ಎಂದು ಗೌರಿಬಾಯಿ ಅವರು ಹೇಳುವರು. ಏಕೆಂದರೆ ಕೇಂದ್ರದ ಕೆಲಸಕ್ಕೆ ಬಂದ ಮೇಲೆ ಮಕ್ಕಳಿಗೆ ಶಿಕ್ಷಣ ಕೊಡಿಸಿ ಹೊರಪ್ರಪಂಚದ ಅರಿವು ಮೂಡಿತು ಎಂಬುದು ಗೌರಿಬಾಯಿಯ ಮನದಾಳದ ಮಾತಾಗಿದೆ. ಇಲ್ಲಿ ಯಾವುದೇ ರೀತಿಯ ಊಟ, ತಿಂಡಿ ನೀಡಲಾರರು. ಹೋಗಿ ಬರುವ ಪ್ರಯಾಣದ ಖರ್ಚು ಕೊಡುವರು.

ಹೀಗಾಗಿ ಕಸೂತಿ ಕಲೆಗಾರರಿಂದ ಕೇಂದ್ರ ಮತ್ತು ಕೇಂದ್ರದಿಂದ ಕಲೆಗಾರರು ಬದುಕುತ್ತಿವೆ. ಮಹಿಳೆಯರಿಗೆ ಕುಡಿಯಲು ನೀರು, ಶೌಚಾಲಯ ಇವೆಲ್ಲ ವ್ಯವಸ್ಥೆ ಮಾಡಲಾಗಿದೆ. ಯಾವುದೇ ರೀತಿಯ ತೊಂದರೆ ಇಲ್ಲ. ಒಳ್ಳೆಯ ರೀತಿಯಿಂದ ಇಲ್ಲಿಯ ಅಧಿಕಾರಿಗಳು ಸಹಕರಿಸುವರು. ಡೇವಿಡ್ ಎಂಬ ಲಂಡನ್ ವ್ಯಕ್ತಿ ಒಂದನೇ ತರತಿಯಿಂದ ಇಂಗ್ಲಿಷ್ ಕಲಿಯುವಂತೆ ಇವರು ಕಲಾಕಾರರ ಇಬ್ಬರು ಮಕ್ಕಳಿಗೆ ಓದಲು ಹಣದ ಸಹಾಯ ಮಾಡಿದ್ದಾರೆ. ಅವರಲ್ಲಿ ಶಾಂತಿಬಾಯಿ ಮಗ, ಹೆಮ್ಲಿಬಾಯಿಯ ಮೊಮ್ಮಗಳನ್ನು ಆಯ್ಕೆ ಮಾಡಿ ಅವರ ಹೆಸರಲ್ಲಿ ಎಂಬತ್ತು ಸಾವಿರ ರೂಪಾಯಿ ಬ್ಯಾಂಕ್‌ನಲ್ಲಿ ಇಡಲಾಗಿದೆ. ಅದೇ ಹಣದಿಂದ ಅವರ ಶಿಕ್ಷಣ ನಡೆಯುತ್ತಿದೆ.

ಹೊಲ, ಗದ್ದೆ ಇರುವ ಕಸೂತಿ ಕಲಾಕಾರರಿಗೆ ಸರ್ಕಾರದಿಂದ ಬರುವ ಬೋರ್‌ವೆಲ್‌ಗಳನ್ನು ಕೇಂದ್ರದವರು ಹಾಕಿಸಿದ್ದಾರೆ. ಸುಮಾರು ಹದಿನೆಂಟು ಮಂದಿಯಿಂದ ಹದಿನಾರು ಸಾವಿರ ರೂಪಾಯಿ ತೆಗೆದುಕೊಂಡು ಇವರು ಸ್ವಲ್ಪ ಹಣ ಹಾಕಿ ವ್ಯವಸ್ಥಿತವಾದ ಮನೆಯನ್ನು ಕಟ್ಟಿಸಿಕೊಟ್ಟಿದ್ದಾರೆ. ಈಗ ಈ ಕೇಂದ್ರದ ಉಸ್ತುವಾರಿಯನ್ನು 'ನಾಜೀಮ್ ಸೇಕ್' ನೋಡಿಕೊಳ್ಳುತ್ತಿದ್ದಾರೆ. ಹಳ್ಳಿಯಲ್ಲಿ ಕೃಷಿಕರಾದ ಈ ಮಹಿಳೆಯರಿಗೆ ತಿಂಗಳ

ಸಂಬಳಕ್ಕೆ ಆಯ್ಕೆ ಮಾಡಿಲ್ಲ. ಏಕೆಂದರೆ ಇವರು ಮನೆ ಹೊಲ ಕೆಲಸಗಳ ಜೊತೆಗೆ ಈ ಕೆಲಸವನ್ನು ಮಾಡುವರು. ಒಂದು ಬ್ಯಾಗಿಗೆ ಐವತ್ತು ರೂಪಾಯಿ ಬೆಲೆಯನ್ನು ನಿಗದಿ ಪಡಿಸಿರುವರು.

ಸಾಮಾನ್ಯವಾಗಿ ಕಸೂತಿ ಮಾಡಿದ 'ಪೀಸ್' (ತುಂಡು) ನೋಡಿದರೆ ಕಡಿಮೆ ಹಣ ದೊರೆಯುತ್ತದೆಂದು ಅನಿಸುತ್ತದೆ. ಆದರೆ ಐವತ್ತು ರೂಪಾಯಿ ಮೇಲೆ ಅವರಿಗೆ ೨೮% ಪಿ.ಎಫ್. ಕೊಟ್ಟರೆ ಇನ್ನುಳಿದ ೫೦% ಕೇಂದ್ರದವರು ಕೊಡುವರು. ಬೋನಸ್ ಇದೇ, ಒಂದು ತಿಂಗಳಲ್ಲಿ ೨೪ ದಿನ ಮಾತ್ರ ಕೆಲಸ ಅದರಲ್ಲಿ ಆರುನೂರು ರೂಪಾಯಿ ರೇಷನ್ ಕೊಡುವರು. ನೇರವಾಗಿ ಈ ಸಮುದಾಯದ ಕೈಯಲ್ಲಿ ಹಣ ಕೊಟ್ಟರೆ ದುರ್ಬಳಕೆ ಆಗುತ್ತದೆ ಎಂಬ ಹಿನ್ನೆಲೆಯಲ್ಲಿ ಆಹಾರ ಸಾಮಗ್ರಿಗಳನ್ನು ಕೊಡುವರು. ಮೂರು ಸಾವಿರ ಮೂರುನೂರು ರೂಪಾಯಿ ಇವರು ತಿಂಗಳಿಗೆ ದುಡಿಯುವರೆಂದು ಗೌರಿಬಾಯಿ ಅವರು ಹೇಳುತ್ತಾರೆ.

**ಶಾರದಾ ನೀಲೂ ಪವಾರ್**

ಕೇವಲ ಕಪ್ಪು ಬಣ್ಣದವಳೆಂದು ಗಂಡನಿಂದ ಪರಿತ್ಯಜಿಸಲ್ಪಟ್ಟ ಓರ್ವ ಮಹಿಳೆ ಹೇಗೆ ತನಗೆ ಎದುರಾದ ಅಡ್ಡಿ ಆತಂಕಗಳನ್ನೆಲ್ಲಾ ಮೆಟ್ಟಿನಿಂತು ನಾಲ್ಕು ಮಕ್ಕಳ ವಿದ್ಯಾಭ್ಯಾಸದ ಹೊರೆಯನ್ನು ಸ್ವಂತ ಪರಿಶ್ರಮದಿಂದ ಹೊರುವಲ್ಲಿ ಯಶಸ್ವಿಯಾಗಿದ್ದಾಳೆ, ಮಾತ್ರವಲ್ಲದೇ ತನ್ನಂತಹ ಎಷ್ಟೋ ಮಹಿಳೆಯರಿಗೆ ಶಾರದ ಪವಾರ್ ಅವರು ಆದರ್ಶವಾಗಿದ್ದಾಳೆ.

೧೯೭೬ರಲ್ಲಿ ಬಿಜಾಪುರ ಜಿಲ್ಲೆಯ ಮಿಂಚನಾಳ ತಾಂಡಾದ ಸಾಂಪ್ರದಾಯಿಕ ಅನಕ್ಷರಸ್ಥ ಲಂಬಾಣಿ ಕುಟುಂಬದಲ್ಲಿ ಜನಿಸಿದ ಶಾರದಾ ನೀಲೂ ಪವಾರ್ ಕಡುಬಡತನದಿಂದಾಗಿ ಯಾವುದೇ ವಿದ್ಯಾಭ್ಯಾಸ ಪಡೆಯಲಿಲ್ಲ.

ತನ್ನ ೨೨ನೇ ವಯಸ್ಸಿನಲ್ಲೇ ಮದುವೆಯಾದ ಶಾರದಾರ ಜೀವನ ಮೊದಮೊದಲು ಚೆನ್ನಾಗಿತ್ತಾದರೂ ಗಂಡನ ದುರಾಸೆ ಹೆಚ್ಚಾದಂತೆ ವರದಕ್ಷಿಣೆ ಕಿರುಕುಳವೂ ಹೆಚ್ಚಾಯಿತು. ಮೂರು ಮಕ್ಕಳಾದ ನಂತರವೂ ಅವಳ ಪತಿ ನೀನು ಕಪ್ಪು ಬಣ್ಣದವಳೆಂದು ಜರಿದು ಮಕ್ಕಳ ಸಮೇತ ಮನೆಯಿಂದ ಹೊರಹಾಕಿದನು. ಅದೃಷ್ಟದ ಚಕ್ರ ಮುರಿದು ಬಿದ್ದು ಗಂಡನೆಂಬ ಭಂಡನೂ ತನ್ನ ಜವಾಬ್ದಾರಿಯಿಂದ ವಿಮುಖನಾದಾಗ, ಜೀವನ ನಡೆಸುವುದೇ ದುರ್ಭರವಾಯಿತು. ಈ ಆಘಾತದಿಂದ ಹೊರಬಂದು ಮಕ್ಕಳಿಗೆ ವಿದ್ಯಾಭ್ಯಾಸ ನೀಡಿ ತನ್ನಂತೆ ಚಿಂತಿಸುತ್ತಾ ಅವರ ಆರೋಗ್ಯವೂ ಹದಗೆಟ್ಟಿತು.

ಈ ಅಂಧಕಾರದ ಸಮಯದಲ್ಲಿ 'ಸಬಲಾ' ಎಂಬ ಎನ್.ಜಿ.ಓ. ಅವಳ ಬಾಳಿಗೆ ಹೊಸಬೆಳಕು ಮೂಡಿಸಿತು. ಅಬಲೆಯರ ಸಬಲೀಕರಣದ ಧ್ಯೇಯವುಳ್ಳ ಸಬಲಾದವರು

ಒಮ್ಮೆ ಶಾರದಾರ ತಾಂಡಾಗೆ ಭೇಟಿ ನೀಡಿದಾಗ ತನ್ನೆಲ್ಲಾ ಕಷ್ಟಗಳ ನಡುವೆಯೂ ಮಕ್ಕಳಿಗೆ ವಿದ್ಯಾಭ್ಯಾಸ ನೀಡಲು ಹೋರಾಡುತ್ತಿದ್ದ ಶಾರದಾರ ಸಂಪರ್ಕವಾಯಿತು. ಪಾರಂಪರಿಕ ಲಂಬಾಣಿ ಕಲೆಯ ಬಗ್ಗೆ ಅವರಿಗಿದ್ದ ಆಸಕ್ತಿಯಿಂದಾಗಿ ಸುಲಭವಾಗಿ ಆ ಕಲೆಯಲ್ಲಿ ಪಾರಂಗತರಾದರು. ತಮ್ಮೆಲ್ಲಾ ಹತಾಶೆಯನ್ನು ಛಲವನ್ನಾಗಿ ಮಾರ್ಪಡಿಸಿಕೊಂಡ ಶಾರದಾಗೆ ಕಸೂತಿ ಕೆಲಸವೆನ್ನುವುದು ಜೀವನೋಪಾಯದ ಮಾರ್ಗವಲ್ಲ, ಬದಲಿಗೆ ಆನಂದದ ಅನುಭೂತಿ ಎಂದೆನಿಸಿತು. ಸಹೋದರಿಯರ ಒತ್ತಾಸೆ, ಸಬಲಾದ ಸಹಾಯ ಇತ್ಯಾದಿಗಳಿಂದಾಗಿ ಅವರ ಜೀವನ ಹೊಸ ಚೈತನ್ಯ ಪಡೆದು ಮಕ್ಕಳಿಗೆ ವಿದ್ಯಾಭ್ಯಾಸ ನೀಡಲು ಸಾಧ್ಯವಾಗಿದೆಯಲ್ಲದೆ ಗ್ರಾಮ ಪಂಚಾಯಿತ್‌ನಲ್ಲಿ ಭಾಗವಹಿಸುವ ನಂಬಿಕೆ ಮೂಡಿದೆ. ಸಬಲಾದ ತಜ್ಞ ಕಲಾವಿದೆಯಾದ ಶಾರದಾ ಹಲವಾರು ಪ್ರದರ್ಶನಗಳಲ್ಲಿ ಸಬಲಾವನ್ನು ಪ್ರತಿನಿಧಿಸಿದ್ದಾರೆ.

"ನನ್ನ ಜೀವನ ಸಂಪೂರ್ಣ ಬದಲಾಗಿದೆ. ಈ ಹಿಂದಿನ ಜೀವನ ತುಂಬಾ ದುರ್ಭರವಾಗಿದ್ದರೂ ನನ್ನ ಹಾಗೂ ನನ್ನ ಮಕ್ಕಳ ಮುಂದಿನ ಜೀವವ ಉತ್ತಮವಾಗಿರುತ್ತದೆಂಬ ನಂಬಿಕೆ ನನಗಿದೆ. ನನ್ನ ಜೀವನ ಹಾಗೂ ದೃಷ್ಟಿಕೋನವನ್ನು ಮಾರ್ಪಡಿಸಿದ ಸಬಲಾಕ್ಕೆ ಅನಂತ ಧನ್ಯವಾದಗಳು" ಎಂದು ಶ್ರೀಮತಿ ಶಾರದಾ ಹೇಳುತ್ತಾರೆ.

ಎಷ್ಟೆಲ್ಲಾ ಕಷ್ಟಗಳ ನಡುವೆಯೂ ತನ್ನ ಮಕ್ಕಳಿಗೆ ವಿದ್ಯಾಭ್ಯಾಸ ನಡೆಯಲೇಬೇಕೆಂಬ ಇವರ ಛಲ ಶ್ಲಾಘನೀಯ. ಪತಿಯಿಂದ ಪರಿತ್ಯಕ್ತಳಾದರೂ ಕೂಡಾ ಸಮಾಜದಲ್ಲಿ ಒಳ್ಳೆಯ ಗೌರವ ಪಡೆಯುವಲ್ಲಿ ಯಶಸ್ವಿಯಾಗಿರುವ ಶಾರದಾರಂತಹವರು ಬಹಳ ಅಪರೂಪ.

**ಲಲಿತಾಬಾಯಿ ಶೇವು ಚವ್ಹಾಣ್**

೧೯೭೦ರಲ್ಲಿ ಬಿಜಾಪುರ ಜಿಲ್ಲೆಯ ತಾಂಡಾವೊಂದರ ಬಡಕುಟುಂಬದಲ್ಲಿ ಜನಿಸಿದ ಲಲಿತಾಬಾಯಿ ೧೦ನೇ ತರಗತಿಯವರೆಗೂ ಓದಿ ಕೂಲಿ ನಾಲಿ ಕೆಲಸಕ್ಕೆ ತೊಡಗಿಕೊಂಡರು. ೨೨ನೇ ವಯಸ್ಸಿಗೆ ಶೇವು ಚವ್ಹಾಣ್‌ನನ್ನು ಮದುವೆಯಾದ ನಂತರದ ಒಂದೇ ವರ್ಷದಲ್ಲಿ ಒಂದು ಗಂಡು ಮಗು ಹುಟ್ಟಿತು. ಅಲ್ಲಿಂದಲೇ ಅವರ ಜೀವನದ ಕಷ್ಟದ ದಿನಗಳು ಆರಂಭವಾದವು. ಮದುವೆಯಲ್ಲಿ ೩ ತೊಲ ಬಂಗಾರವನ್ನು ವರದಕ್ಷಿಣೆಯಾಗಿ ನೀಡಿದ್ದರೂ ಶೇವೂ ಚವ್ಹಾಣ್ ಇನ್ನಷ್ಟು ಹಣಕ್ಕಾಗಿ ಪೀಡಿಸತೊಡಗಿದ. ಲಲಿತಾ ಇದನ್ನು ವಿರೋಧಿಸಿದಾಗ ನೀನು ಕಪ್ಪಗಿದ್ದೀಯ, ನನಗೆ ಇಷ್ಟವಿಲ್ಲ ಎಂದು ಕಿರುಕುಳ ನೀಡುತ್ತಾ ಒಂದು ದಿನ ಇದ್ದಕ್ಕಿದಂತೆ ಹಳ್ಳಿಯಿಂದಲೇ ಮಾಯವಾಗಿ ಬಿಟ್ಟ. ಆಸರೆಗಾಗಿ ಇದ್ದೊಬ್ಬ ಮಗನನ್ನು ಕರೆದುಕೊಂಡು ತವರಿಗೆ ಹೋದವಳಿಗೆ ಮುಪ್ಪಿನ ತಂದೆ ತಾಯಿಗಳನ್ನು ಸಾಕುವ ಜವಾಬ್ದಾರಿಯೂ ಬಿತ್ತು. ಅಲ್ಲಿಂದ ಅವರ ಸಂಕಷ್ಟಗಳು ಇನ್ನೂ ಹೆಚ್ಚಾದವು. ಆದರೂ ದುಡಿಯುವ ಛಲ ಅವರಲ್ಲಿತ್ತು.

ಸಂಸಾರ ನಿರ್ವಹಣೆ ತುಂಬಾ ಕಷ್ಟವಾದಾಗ ಸಬಲಾ ಸಂಸ್ಥೆಯವರು ಅದೇ ಪ್ರದೇಶದಲ್ಲಿ ಕೆಲಸಕ್ಕಾಗಿ ಹೆಣ್ಣುಮಕ್ಕಳನ್ನು ಹುಡುಕುತ್ತಿದ್ದಾಗ ಲಲಿತಾ ಅವರು ಕಣ್ಣಿಗೆ ಬಿದ್ದರು. ಅಲ್ಲಿಂದ ಅವರ ಜೀವನವೇ ಹೊಸ ತಿರುವು ಪಡೆಯಿತು. ಹಿರಿಯರಿಂದ ಕಲಿತಿದ್ದ ಕಸೂತಿ ಕಲೆ ಅವರ ಕೈಹಿಡಿಯಿತು. ಇಂದು ಸಬಲಾದ ಅತ್ಯಂತ ಪರಿಣತ ಕಲಾವಿದರಲ್ಲೊಬ್ಬರಾಗಿರುವ ಲಲಿತಾ ಬೆಂಗಳೂರು, ದೆಹಲಿಗಳಲ್ಲಿ ಸಬಲಾದ ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ.

ಲಲಿತಾಬಾಯಿ ಹೇಳುವಂತೆ ಅವರ ಜೀವನ ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ರಾಜಕೀಯವಾಗಿ ಸಂಪೂರ್ಣ ಬದಲಾಗಿದ್ದು ಕೇವಲ ೯೦೦ ರೂಪಾಯಿಗಳ ಕೃಷಿ ಕೂಲಿಯಿಂದ ೩೦೦೦ರೂ.ಗಳನ್ನು ಗಳಿಸುವವರೆಗೆ ಬೆಳೆದಿದ್ದು ಜೀವನವನ್ನು ಹೆಚ್ಚು ಆತ್ಮವಿಶ್ವಾಸದಿಂದ ಎದುರಿಸುತ್ತಿದ್ದಾರೆ. S.H.G. (Self Help Group)ಯ ಸದಸ್ಯರಾಗಿರುವ ಇವರು ಅನ್ಯಾಯಗಳ ವಿರುದ್ಧ ದನಿ ಎತ್ತುತ್ತಾರಲ್ಲದೆ ಸಕ್ರಿಯ ರಾಜಕೀಯದ ಬಗ್ಗೆ ಮಹಿಳೆಯರಲ್ಲಿ ಜಾಗೃತಿ ಮೂಡಿಸುತ್ತಿದ್ದಾರೆ.

**ಸೋಮಿಬಾಯಿ ದಿಲ್ಪು ಜಾಧವ್**

೫೫ ವರ್ಷದ ಸದಾ ನಗು ಮೊಗದ, ಇತರರ ಕಾಳಜಿ ಮಾಡುವ ಸೋಮಿಬಾಯಿ ತನ್ನ ಕರಕುಶಲತೆಯಿಂದಲೇ ತನ್ನ ಮಕ್ಕಳಿಗೆಲ್ಲಾ ವಿದ್ಯಾಭ್ಯಾಸ ಮಾಡಿಸುವ ಮೂಲಕ ಹಳ್ಳಿಯ ಇತರ ಸ್ತ್ರೀಯರಿಗೆ ಮಾದರಿಯಾಗಿದ್ದಾಳೆ.

ಆಹೇರಿ ತಾಂಡಾದ ಅನಕ್ಷರಸ್ಥ ಕುಟುಂಬದಲ್ಲಿ ಜನಿಸಿದ ಸೋಮಿಬಾಯಿಗೆ ತಂದೆ ತಾಯಿಗಳು ಯಾವುದೇ ಶಿಕ್ಷಣ ಕೊಡಿಸದೆ ಸಂಸಾರಕ್ಕೆ ಅವಶ್ಯವಾದ ಮನೆಕೆಲಸಗಳನ್ನು ಮಾತ್ರ ಕಲಿಸಿದರು. ೨೧ನೇ ವಯಸ್ಸಿನಲ್ಲೇ ದಿಲ್ಪು ಜಾಧವ್ ಎಂಬ ಕಟ್ಟಡ ಕಾರ್ಮಿಕನನ್ನು ಮದುವೆಯಾದ ಸೋಮಿಬಾಯಿ ಬಡತನವನ್ನೇ ಹಾಸಿ ಹೊದ್ದವರು. ಇಬ್ಬರು ಮಕ್ಕಳು ಹುಟ್ಟಿದ ಮೇಲಂತೂ ಜೀವನ ಕಷ್ಟವಾಗಿ ಮನೆಯಲ್ಲೇ ಮಕ್ಕಳನ್ನು ನೋಡಿಕೊಳ್ಳುತ್ತಲೇ ಹಣ ಗಳಿಸುವುದು ಹೇಗೆ ಎಂದು ಯೋಚಿಸುತ್ತಿರುವಾಗ ಅದೃಷ್ಟವಶಾತ್ 'ಸಬಲಾ' ಎನ್.ಜಿ.ಓ.ದವರು ಆ ಹಳ್ಳಿಗೆ ಬಂದು ಮನೆಯಲ್ಲೇ ಕಸೂತಿ ಕೆಲಸ ಮಾಡಿ ಹಣಗಳಿಸುವ ತರಬೇತಿ ನೀಡಿದರು. ಮೊದಮೊದಲು ಗಂಡ ಇದನ್ನು ವಿರೋಧಿಸಿದರೂ ಪ್ರತಿ ತಿಂಗಳು ಗಳಿಸುವ ರೂ. ೩೦೦೦ ಹಣ ಅವರಲ್ಲೂ ಉತ್ಸಾಹ ಮೂಡಿಸಿತು. ೧೨ ವರ್ಷಗಳಿಂದ ಸಬಲಾ ಜೊತೆಯಲ್ಲಿರುವ ಸೋಮಿಬಾಯಿ ದೇಶದ ಉದ್ದಗಲಕ್ಕೂ ಸಂಚರಿಸಿ ಸಬಲಾದ ಪ್ರದರ್ಶನಗಳಲ್ಲಿ ಭಾಗವಹಿಸಿ ನಾಯಕತ್ವ ಗುಣಗಳನ್ನು ಮೈಗೂಡಿಸಿಕೊಂಡರು. ತಮ್ಮಲ್ಲಿರುವ ಕಲೆ ಎಷ್ಟು ಅಪರೂಪ ಮತ್ತು ಅಮೂಲ್ಯ ಎಂದು ಕಂಡುಕೊಂಡ ಸೋಮಿಬಾಯಿ ಇಂದು ಅಧಿಕಾರಯುತವಾಗಿ ಮಾತಾಡಬಲ್ಲರು.

ಸಬಲಾ ಸಂಸ್ಥೆ ಕೇವಲ ಕಸೂತಿ ಮಾತ್ರವಲ್ಲದೆ ಉಳಿತಾಯ, ಬ್ಯಾಂಕ್ ಖಾತೆ ನಿರ್ವಹಣೆ, ಗ್ರಾಮ ಪಂಚಾಯಿತಿ, ಆರೋಗ್ಯ, ನೈರ್ಮಲ್ಯ, ಎರೆಗೊಬ್ಬರ ಮುಂತಾದವುಗಳಲ್ಲೂ ತರಬೇತಿ ನೀಡಿ ಸರ್ವಾಂಗೀಣ ಅಭಿವೃದ್ಧಿಗೆ ನೆರವಾಗಿದೆ. ಸ್ವಸಹಾಯ ಸಂಘದ ಸಕ್ರಿಯ ಸದಸ್ಯರೂ ಆಗಿರುವ ಸೋಮಿಬಾಯಿ ಕುಟುಂಬದ ನಿರ್ಧಾರಗಳನ್ನು ಕೈಗೊಳ್ಳುವ ಹಾಗೂ ಇತರರಿಗೆ  ಶಿಕ್ಷಣದ ಮಹತ್ವ ತಿಳಿಸಿಕೊಡುವ ಹಂತದಲ್ಲಿದ್ದಾರೆ ಮತ್ತು ಎಲ್ಲರ ಮೆಚ್ಚುಗೆ ಪಡೆದಿದ್ದಾರೆ.

**ಲಾಲಿಬಾಯಿ ನಂದು ರಾಠೋಡ್**

ಸುಮಾರು ೪೫ ವರ್ಷಗಳ ಲಾಲಿಬಾಯಿ ಹುಟ್ಟಿದ್ದು ಬಿಜಾಪುರದಿಂದ ೩೦ ಕಿ.ಮೀ. ದೂರದ ಮಿಂಚನಾಳ ತಾಂಡಾದಲ್ಲಿ. ಎಲ್ಲ ಲಂಬಾಣಿ ತಾಯಿರಂತೆ ಇವರ ತಾಯಿಯೂ ಪಾರಂಪರಿಕ ಕಲೆಯ ತರಬೇತಿ ನೀಡಿದರು. ಅದೇ ತಾಂಡಾದ ನಂದು ರಾಠೋಡ್ ಎಂಬ ಕಟ್ಟಡ ಕಾರ್ಮಿಕನ ಜೊತೆ ೧೯ನೇ ವರ್ಷಕ್ಕೆ ಮದುವೆಯಾದ ಲಾಲಿಬಾಯಿ ಅವರ ಬದುಕು ಮಕ್ಕಳಾಗುವವರೆಗೂ ಚೆನ್ನಾಗಿಯೇ ಇತ್ತು. ಆದರೆ ಮಕ್ಕಳ ವಿದ್ಯಾಭ್ಯಾಸದ ಖರ್ಚು ಭರಿಸಲು ಕಷ್ಟವಾದಾಗ ತಾನೂ ಕಟ್ಟಡ ಕೂಲಿಗೆ ಸೇರಿಕೊಂಡರೂ ಆರ್ಥಿಕ ಸ್ಥಿತಿ ಸುಧಾರಿಸಲಿಲ್ಲ. ಜೊತೆಗೆ ಆ ಕೆಲಸಕ್ಕೆ ಹೋದರೆ ಮಕ್ಕಳನ್ನು ನೋಡಿಕೊಳ್ಳುವುದು ತುಂಬಾ ಕಷ್ಟವಾಗುತ್ತಿತ್ತು. ಹೀಗಾಗಿ ಮನೆಯಲ್ಲೇ ಕುಳಿತು ಹಣ ಗಳಿಸುವ, ಮಕ್ಕಳನ್ನು ಸಾಕ್ಷರರನ್ನಾಗಿಸುವ ಯೋಚನೆಯಲ್ಲಿದ್ದಾಗ ಅವರು 'ಸಬಲಾ ಸಂಸ್ಥೆ'ಯ ಬಗ್ಗೆ ತಿಳಿದು ಕಸೂತಿ ಕಲೆಯನ್ನು ಕಲಿತಿದ್ದರೂ ಸಬಲಾ ನೀಡಿದ ಗುಣಾತ್ಮಕ ತರಬೇತಿಯಿಂದಾಗಿ ಅವರ ಆದಾಯ ಹೆಚ್ಚಾಗಿ ಜೀವನದಲ್ಲಿ ನೆಮ್ಮದಿ ಸಂತೋಷ ಮೂಡಿದವು. ಉಳಿತಾಯ ಖಾತೆಯ ಬಗ್ಗೆ ಸಬಲಾ ನೀಡಿದ ತರಬೇತಿಗಳು ತುಂಬಾ ವೈವಿಧ್ಯಮಯವಾಗಿದ್ದು, ಲೆಕ್ಕಪತ್ರ ನಿರ್ವಹಣೆ, ಡಿಸೈನ್ ಕಾರ್ಯಾಗಾರ, ಎರೆಹುಳು ಗೊಬ್ಬರಗಳನ್ನು ಒಳಗೊಂಡಿತ್ತು. ಇವೆಲ್ಲವುಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ S.H.G.(Self Helf Group)ಯ ಸದಸ್ಯೆಯೂ ಆಗಿ ಅದರ ಸಾಲ ಸಹಾಯ ಪಡೆದು ಇಂದು ಎರಡು ಕೋಣೆಗಳ ಮನೆ ಕಟ್ಟಿಸಿಕೊಳ್ಳುವಷ್ಟು ಸ್ಥಿತಿವಂತರಾಗಿದ್ದಾರೆ. ಸಮಾಜದ ಮನ್ನಣೆ ಪಡೆದ ಲಾಲಿಬಾಯಿ ಇತರರಿಗೂ ಮಕ್ಕಳ ವಿದ್ಯಾಭ್ಯಾಸದ ಪ್ರಾಮುಖ್ಯತೆಯ ಬಗ್ಗೆ ಅರಿವು ಮೂಡಿಸಿದ್ದಾರೆ.

ಲಾಲಿಬಾಯಿಯವರೇ ಹೇಳುವಂತೆ "ಕಟ್ಟಡದ ಕೂಲಿ ಕೆಲಸ ಮಾಡುತ್ತಿದ್ದಾಗ ಕೇವಲ ಮಾಸಿಕ ೯೫೦ ರೂಪಾಯಿಗಳು ಮಾತ್ರ ಸಿಗುತ್ತಿತ್ತು. ಆಗೆಲ್ಲಾ ಮಕ್ಕಳನ್ನು ಓದಿಸುವುದನ್ನು ನೆನೆದರೆ ಭಯವಾಗುತ್ತಿತ್ತು. ಆದರೆ ಸಬಲಾ ಸೇರಿದ ಮೇಲೆ ಜೀವನ ಬದಲಾಯಿತು. ಗಳಿಕೆ–ಉಳಿಕೆಗಳನ್ನು ಕಲಿಸಿದ ಸಬಲಾದಿಂದಾಗಿ ಇಂದು ನನ್ನ ಮೂರು ಮಕ್ಕಳು ಅಕ್ಷರಸ್ಥರಾಗಿದ್ದಾರೆ ಎಂದು ಹಿಂದಿನ ತಮ್ಮ ಬದುಕಿನ ಪುಟಗಳನ್ನು ತೆರೆದಿಡುತ್ತಾರೆ.



## ಕಸೂತಿ ಕಲಾವಿದರು



ಶಾರದಾ ನೀಲು ಪವಾರ



ಲಲಿತಾಬಾಯಿ ಶೇವು ಚವ್ಹಾಣ



ಸೋಮಿಬಾಯಿ ದಿಲ್ಲು ಜಾದವ್



ಲಾಲಿಬಾಯಿ ನಂದು ರಾಠೋಡ

### ೫.೨. ಕಲಾವಿದರ ಶೈಕ್ಷಣಿಕ ಸ್ಥಿತಿಗತಿಗಳು

ಕಸೂತಿ ಕಲೆಯು ಸಾಮಾನ್ಯವಾಗಿ ಹಿರಿತಲೆಮಾರಿನ ಮಹಿಳೆಯರಲ್ಲಿ ಕಾಣಲು ಸಾಧ್ಯ. ಬಡತನದಲ್ಲಿ ಬಾಳನ್ನು ಸಾಗಿಸುತ್ತಿರುವ ಇವರಿಗೆ ಕಲಿಕೆಯ ಕಡೆಗೆ ಗಮನ ಕಡಿಮೆ. ಕಲಿಕೆ ಇದ್ದರೂ ಆ ಸಂದರ್ಭದಲ್ಲಿ ಇವರಿಗೆ ಕಲಿಕೆಯ ಕಡೆಗೆ ಆಸಕ್ತಿ ಕಡಿಮೆ. ಹೀಗಾಗಿ ಕುಶಲಕಲಾ ಕೇಂದ್ರದಲ್ಲಿ ಇರುವ ಕೆಲವೇ ಈಗಿನ ಪೀಳಿಗೆಯ ಮಹಿಳೆಯರಿಗೆ ಓದು ಬರಹ ಬರುವುದುಂಟು. ಇವರು ಸಾಮಾನ್ಯವಾಗಿ ಹಿರಿಯ ಪ್ರಾಥಮಿಕ ಶಾಲೆಯ ಮಟ್ಟದವರೆಗೆ ಕಲಿತವರಿದ್ದಾರೆ. ಮೂರನೇ ತರಗತಿಯಿಂದ ಏಳನೇ ತರಗತಿಯವರೆಗೆ ಓದಿದ ಮಹಿಳೆಯರ ಸಂಖ್ಯೆ ಸುಮಾರು ೨೦ರವರೆಗೆ ಕಂಡುಬರುವುದು.

ಲಂಬಾಣಿ ಉಡುಗೆ ಧರಿಸುವ ಅಜ್ಜಿಯಂದಿರಿಗೆ ಅಕ್ಷರಲೋಕದ ಪರಿಚಯವಿಲ್ಲ. ಆದರೆ ತಮ್ಮ ಮಕ್ಕಳನ್ನು ಚೆನ್ನಾಗಿ ಓದಿಸುತ್ತಿದ್ದಾರೆ. ಇವರು ಮಾಡುವ ಕಸೂತಿ ಕಲೆಗೆ ಯಾವುದೇ ಅರ್ಹತೆ ಬೇಕಾಗಿಲ್ಲ. ತಾವು ಸ್ವಸಾಮರ್ಥ್ಯದಿಂದ ಕಲಿಯುವರು. ಕಸೂತಿ ಕಲೆಯನ್ನು ಹಿಂದಿನ ಕಾಲದಲ್ಲಿ ಪ್ರತಿಯೊಬ್ಬ ಮಹಿಳೆಯೂ ಕಲಿಯುತ್ತಿದ್ದಳು. ಅಲ್ಲದೆ ತಾಯಂದಿರು ಅವರಿಗೆ ಕಲಿಸುತ್ತಿದ್ದರು. ಅದರೆ ಯಾವಾಗ ಲಂಬಾಣಿ ಮಹಿಳೆಯರು ತಮ್ಮ ಉಡುಗೆ ಬಿಟ್ಟು ಸೀರೆಯ ಕಡೆಗೆ ವಾಲಿದರೋ ಅಂದಿನಿಂದ ಈ ಕಲೆಯ ಕಡೆಗೆ ಆಸಕ್ತಿ ಕಡಿಮೆಯಾಗಿದೆ. ಸೀರೆಯಿಂದ ಮದುವೆ ಮಾಡಿಸಿದ ಮಹಿಳೆಯರು ಯಾರೂ ಕಸೂತಿ ಕಲೆಯನ್ನು ಕಲಿಯುವಂತೆ ತಮ್ಮ ಮಕ್ಕಳಿಗೆ ಹೇಳುವುದಿಲ್ಲ.

ಆಧುನಿಕತೆಯ ಪ್ರಭಾವಕ್ಕೆ ಸಿಲುಕಿದ ಈ ಸಮುದಾಯದ ಮಹಿಳೆಯರು ಈಗ ತಮ್ಮ ಮಕ್ಕಳಿಗೆ ಶಿಕ್ಷಣದ ಕಡೆಗೆ ಹೆಚ್ಚು ಆಸಕ್ತಿ ವಹಿಸುವರು. ಆದರೆ ಕುಶಲಕಲಾ ಕೇಂದ್ರದಲ್ಲಿ ಕಸೂತಿ ಮಾಡುವ ಬಹಳಷ್ಟು ಮಹಿಳೆಯರಿಗೆ ಅಕ್ಷರ ಜ್ಞಾನವಿಲ್ಲ. ಇವರಿಗೆ ಸಹಿ ಸಹ ಮಾಡಲು ಬರುವುದಿಲ್ಲ. ಇವರೆಲ್ಲರೂ ಹೆಬ್ಬೆಟ್ಟಿನ ಸಾಲಿಗೆ ಸೇರಿದವರಿದ್ದಾರೆ. ಕ್ಷೇತ್ರಕಾರ್ಯದ ಆಧಾರದ ಮೇಲೆ ಕಂಡುಬಂದ ಪ್ರಕಾರ ಹಿರಿಯರನ್ನು ಕೇಳಿದರೆ 'ನಮಗೆ ಶಾಲೆಗೆ ಕಳಿಸುವಂತಹ ಪರಿಸರ ನಮ್ಮ ಮನೆಗಳಲ್ಲಿ ಇರಲಿಲ್ಲ. ಹೀಗಾಗಿ ನಾವು ಅವಿದ್ಯಾವಂತರಾಗಿ ಬಾಳಬೇಕಾಯಿತು'. ಆದರೆ ತಮ್ಮ ಮಕ್ಕಳ ಕಲಿಕೆಯ ವಿಷಯದಲ್ಲಿ ಹಿಂದೆ ಬಿದ್ದಿಲ್ಲ. ಅನಕ್ಷರಸ್ಥರಾದ ಇವರು ಅಜ್ಞಾನದಿಂದ ಹತ್ತಾರು ಜನ ಮಕ್ಕಳನ್ನು ಪಡೆಯುತ್ತಿದ್ದರು. ಏಕೆಂದರೆ ಆ ವೇಳೆಯಲ್ಲಿ ಬದುಕುಳಿಯುವ ಮಕ್ಕಳ ಪ್ರಮಾಣ ಕಡಿಮೆ. ಅನೇಕ ರೀತಿಯ ಕಾಯಿಲೆಗಳಿಗೆ ತುತ್ತಾಗಿ ಸಾವನ್ನಪ್ಪುತ್ತಿದ್ದರು.

ಆಸ್ಪತ್ರೆಯ ಸೌಲಭ್ಯ ಸರಿಯಾಗಿ ದೊರೆಯುತ್ತಿರಲಿಲ್ಲ. ಅಲ್ಲದೇ ಹುಟ್ಟಿದ ಮಕ್ಕಳು ತಮಗೆ ಕೂಲಿನಾಲಿ ಕೆಲಸಗಳಲ್ಲಿ ಹಾಗೂ ಜೀವನ ನಿರ್ವಹಣೆಗೆ ನೆರವಾಗುತ್ತಾರೆಂಬ ಬಲವಾದ ನಂಬಿಕೆ ಅವರಲ್ಲಿತ್ತು. ಹತ್ತಾರು ಮಕ್ಕಳನ್ನು ಪಡೆಯುವುದರಿಂದ ಯಾವುದೇ

ಸುಖವಿಲ್ಲವೆಂಬುದು ಇವರಿಗೆ ಈಗ ಮನವರಿಕೆಯಾಗಿದೆ. ಇಂದು ಸಾಕ್ಷರತೆಯ ಪ್ರಭಾವದಿಂದ ಅವರಲ್ಲಿ ಕುಟುಂಬ ಯೋಜನೆಯ ಪ್ರಜ್ಞೆ ಮೂಡಿದೆ. ಹೀಗಾಗಿ ಚಿಕ್ಕ ಮಾದರಿಯ ಕುಟುಂಬ ಹೊಂದಲು ಮುಂದಾಗಿದ್ದಾರೆ. ಅನ್ಯ ಸಮಾಜದಂತೆ ನಾಗರಿಕ ಬದುಕನ್ನು ಹೊಂದಬೇಕೆನ್ನುವರು. ಸರ್ಕಾರದಿಂದ ಬರುವ ಅನೇಕ ಸೌಲಭ್ಯವನ್ನು ಪಡೆದು ತಮ್ಮ ಮಕ್ಕಳನ್ನು ಶೈಕ್ಷಣಿಕವಾಗಿ ಮುಂದೆ ಬೆಳೆಸುತ್ತಿದ್ದಾರೆ. ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕಾಲಾವಧಿಯಲ್ಲಿ ಲಂಬಾಣಿಗಳು ಅಪರಾಧಿ ಜನಾಂಗವೆಂದು ಪರಿಗಣಿತರಾಗಿದ್ದರು. ಇವರು ಶಿಕ್ಷಣವನ್ನು ಒಳಗೊಂಡಂತೆ ಎಲ್ಲ ಬಗೆಯ ಸವಲತ್ತುಗಳಿಂದ ವಂಚಿತರಾಗಿದ್ದರು. ಈ ಸಮುದಾಯ ಈಗ ಪರಿಶಿಷ್ಟ ಜಾತಿಯ ಪಟ್ಟಿಗೆ ಸೇರಿದ್ದರಿಂದ ಸರಕಾರದ ಎಲ್ಲ ಬಗೆಯ ಸವಲತ್ತುಗಳನ್ನು ನಿಜಕ್ಕೂ ಸದುಪಯೋಗಪಡಿಸಿಕೊಂಡು ಸಮಾಜದ ಎಲ್ಲಾ ರಂಗಗಳಲ್ಲೂ ಎದ್ದು ಕಾಣಿಸಿಕೊಳ್ಳುತ್ತಿದ್ದಾರೆ. ಅವರಲ್ಲಿ ಸ್ತ್ರೀ ಶಿಕ್ಷಣ ಹೆಚ್ಚು ಆಶಾದಾಯಕವಾಗಿಲ್ಲವಾದರೂ ಆ ನಿಟ್ಟಿನಲ್ಲಿಯೂ ಪ್ರಯತ್ನಗಳು ನಡೆದಿವೆ. ಆದರೆ ಹಿಂದಿನ ತಲೆಮಾರಿನವರಿಗೆ ಶಿಕ್ಷಣದ ಮಟ್ಟ ಕಡಿಮೆ. ಸ್ತ್ರೀಯರಿಗಿಂತ ಪುರುಷರೇ ಹೆಚ್ಚಾಗಿ ಶಿಕ್ಷಣ ಪಡೆದವರಾಗಿದ್ದಾರೆ.

ಪ್ರಸ್ತುತ ಈ ಅಧ್ಯಯನವು ಲಂಬಾಣಿಗರ ಅಥವಾ ಲಂಬಾಣಿ ಸಮುದಾಯದ ಕರಕುಶಲಕಲೆಗಳ ಭಾಗವನ್ನು ಅವಲಂಬಿಸಿದೆ. ಹಾಗಾಗಿ ಒಂದು ಸಮುದಾಯವನ್ನು ಅಧ್ಯಯನ ಮಾಡಿ ಸಾರ್ವತ್ರಿಕ ಎನ್ನುವ ಹೇಳಿಕೆ ನೀಡುವ ಬದಲು ಆ ಸಮುದಾಯ ದೊಳಗಿರುವ ಸೂಕ್ಷ್ಮ ವಿವರಗಳ ಮೂಲಕ ಲಂಬಾಣಿಗರ ವರ್ತಮಾನದ ಬದುಕಿನ ಸಂಕೀರ್ಣತೆಯನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಇಂತಹ ಸಂಕೀರ್ಣತೆಯ ಬಗೆಗೆ ಹಿಂದಿನ ಅಧ್ಯಯನಗಳಲ್ಲಿ ಕೆಲವು ನಿಯಮಗಳಿದ್ದವು. ಅಂತಹ ನಿಯಮಗಳ ಮೂಲಕವೇ ಅದರ ಹಲವು ಆಯಾಮಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

ಯಾವುದೇ ಸಮುದಾಯವಿರಲಿ ಅದು ಕಾಲಕ್ಕೆ ತಕ್ಕಂತೆ ಜೀವನಮಟ್ಟವನ್ನು ಬದಲಾಯಿಸಿಕೊಳ್ಳಬೇಕು. ಈ ರೀತಿಯ ಬದಲಾವಣೆ ಅವಶ್ಯಕ ಮತ್ತು ಅನಿವಾರ್ಯ ಕೂಡ. ಲಂಬಾಣಿಗರ ಮೂಲವೃತ್ತಿ ಕೃಷಿ ಬಳ್ಳಾರಿ, ರಾಯಚೂರು, ಗದಗ, ಬಿಜಾಪುರ ಮುಂತಾದ ಕಡೆಗಳಲ್ಲಿ ಜನರು ಇಂದು ಆಧುನಿಕತೆಯ ಪ್ರಭಾವ ಹಾಗೂ ಶಿಕ್ಷಣದಿಂದ ದೊರೆಯುತ್ತಿರುವ ಉದ್ಯೋಗ ಪ್ರಮಾಣ ಕಡಿಮೆಯಾಗಿ ಕಟ್ಟಡ ಕಾರ್ಮಿಕ ವೃತ್ತಿಗಾಗಿ ನಗರವನ್ನು ಆಶ್ರಯಿಸುವ ಕೂಲಿ ಕೆಲಸಗಳು, ಕೂಲಿಗಾಗಿ ನಗರದತ್ತ ವಲಸೆ, ಹಳ್ಳಿಗಳಲ್ಲಿದ್ದ ಮೂಲಕಸಬು ಇಲ್ಲವಾಗುವಿಕೆ ಕಂಡುಬರುತ್ತದೆ. ಹೆಚ್ಚಾಗಿ ಇಂದಿನ ದಿನಮಾನಗಳಲ್ಲಿ ಲಂಬಾಣಿ ತಾಂಡಾಗಳ ಜನರು ಇಡೀ ಹಳ್ಳಿಗಳಲ್ಲಿ ಶೇ. ೭೦ರಷ್ಟು ಜನರು ಕಬ್ಬು ಕಟಾವು ಮಾಡಲು, ಕಾಫಿ ಎಸ್ಟೇಟ್‌ಗಳಲ್ಲಿ ದುಡಿಯಲು, ಕಾರ್ಖಾನೆಗಳಲ್ಲಿ ಕಾರ್ಮಿಕರಾಗಿ ದುಡಿಯಲು ವಲಸಿಗರಾಗಿ ಹೋಗುವುದರಿಂದ ತಮ್ಮ ಕರಕುಶಲ ಕಲೆಗೆ ಪ್ರೋತ್ಸಾಹ ಇಲ್ಲದಂತಾಗಿ

ಇಂದು ಅವನತಿಯತ್ತ ಸಾಗಿದೆ. ತಮ್ಮ ಉಪಜೀವನಕ್ಕಾಗಿ ಯಾವುದೇ ಕೆಲಸವನ್ನು ಅವಲಂಬಿಸಲೇ ಬೇಕು ಎನ್ನುವ ಆತಂಕದಲ್ಲಿ ಸಿಲುಕಿ ಬೇರೆ ಮಾರ್ಗವಿಲ್ಲದೇ ಜೀವನ ಸಾಗಿಸಬೇಕಾಗುತ್ತದೆ. ಇದರಿಂದ ತಮ್ಮ ಕಸುಬನ್ನು ಅನಿವಾರ್ಯವಾಗಿ ಕೈಬಿಡಬೇಕಾಗುತ್ತದೆ.

ಲಂಬಾಣಿ ಸಮುದಾಯದ ಕರಕುಶಲ ಕಲೆಗೆ ಇಂದು ಕೇಂದ್ರ ಸರ್ಕಾರದಿಂದಾಗಲೀ, ರಾಜ್ಯ ಸರ್ಕಾರದಿಂದಾಗಲಿ ಹೆಚ್ಚಿನ ಪ್ರೋತ್ಸಾಹ ಸಿಗುತ್ತಿದ್ದರೂ ಅದನ್ನು ಬಳಸಿಕೊಳ್ಳುವಲ್ಲಿ ಸಮುದಾಯ ವಿಫಲವಾಗಿದೆ. ಹಾಗೆಯೇ ಪಾರಂಪರಿಕ ಕಲೆಯನ್ನು ಉಳಿಸುವ ಗೋಜಿಗೆ ಹೋಗುವುದಿಲ್ಲ. ಆದರೆ ಶ್ರೀಮಂತ ಮೇಲ್ವರ್ಗದ ಮಠ ಮಾನ್ಯಗಳಿಗೆ ಸಾವಿರಾರು ಕೋಟಿ ರೂಪಾಯಿ ಬಿಡುಗಡೆ ಮಾಡುತ್ತಿದೆ. ಅನಾವಶ್ಯಕವಾಗಿ ಖರ್ಚು ಮಾಡುತ್ತಿದೆ. ಲಂಬಾಣಿಯಂತಹ ತಳ ಸಮುದಾಯಕ್ಕೆ ಅಥವಾ ಆ ಸಮುದಾಯದ ಕಲೆಯಾಗಲಿ, ಕಲಾವಿದರಾಗಲಿ ಯಾವುದೇ ಪ್ರೋತ್ಸಾಹವಿಲ್ಲದೇ ಅವನತಿಯತ್ತ ಸಾಗಿರುವುದು ಖೇದಕರ ಸಂಗತಿಯಾಗಿದೆ.

ಲಂಬಾಣಿ ಸಮುದಾಯವನ್ನು ಅಧ್ಯಯನ ಮಾಡುತ್ತಾ, ಆ ಸಮುದಾಯದ ಕಲೆಯನ್ನು ಅಭ್ಯಸಿಸುತ್ತ ಸಮುದಾಯ ಕಟ್ಟಿಕೊಳ್ಳುತ್ತಿರುವ ಹೊಸ ಅನನ್ಯತೆಯನ್ನು ಗುರುತಿಸಲಾಗಿದೆ. ಸಾಂಸ್ಕೃತಿಕ ನಾಯಕರ ಆರಾಧನೆಯ ಅನನ್ಯತೆಗಳು ಬದಲಾಗುತ್ತಿದೆ. ಈ ಬಂಜಾರರು ಕರ್ನಾಟಕದಾದ್ಯಂತ ಹಲವಾರು ಪೀಠಗಳನ್ನು ಹೊಸದಾಗಿ ಸೃಷ್ಟಿಸಿಕೊಂಡಿದ್ದಾರೆ. ಸೇವಾಲಾಲ್‌ನನ್ನು ತಮ್ಮ ಸಾಂಸ್ಕೃತಿಕ ನಾಯಕನನ್ನಾಗಿ ಮಾಡಿಕೊಂಡು ಹಬ್ಬ ಆಚರಣೆಗಳಂತಹ ಸಂದರ್ಭದಲ್ಲಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಕೆಲವು ಪ್ರದೇಶಗಳಲ್ಲಿ ತಮ್ಮ ರಾಜಕೀಯ ನಾಯಕರನ್ನು ಆಧುನಿಕ ಸಾಂಸ್ಕೃತಿಕ ನಾಯಕರೆಂದು ಬಿಂಬಿಸುತ್ತಿದ್ದಾರೆ. ಈಚೆಗೆ ಲಂಬಾಣಿ ಸಮುದಾಯದಲ್ಲಿ ಹೆಚ್ಚಾಗಿ ಮಕ್ಕಳನ್ನು ಶಿಕ್ಷಿತರನ್ನಾಗಿಸಬೇಕೆಂದು ಹೆಚ್ಚು ಆಸಕ್ತಿಯಿಂದ ಬೆಳೆಸುತ್ತಿದ್ದಾರೆ. ಎಲ್ಲರಿಗೂ ಶಿಕ್ಷಣ ಹೊಸ ಅನನ್ಯತೆಯಾಗುತ್ತಿರುವಂತೆ ಮಾರ್ಪಡುತ್ತಿದೆ. ಹೀಗೆ ಲಂಬಾಣಿ ಸಮುದಾಯದ ಹೊಸ ಮಾದರಿಯ ಅನನ್ಯತೆಗಳನ್ನು ಕಟ್ಟಿಕೊಳ್ಳುತ್ತಿದೆ.

ಲಂಬಾಣಿಗರು ಕರಕುಶಲ ಕಲೆಯನ್ನು ಒಂದು ಪ್ರವೃತ್ತಿಯ ರೂಪದಲ್ಲಿ ಇಂದಿಗೂ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿರುವುದು ಆಶ್ಚರ್ಯದ ಸಂಗತಿಯಾಗಿದೆ. ಜಗತ್ತೇ ಇಂದು ಅಭಿವೃದ್ಧಿ ಎನ್ನುವ ನಾಗಾಲೋಟದಲ್ಲಿ ಮುನ್ನುಗ್ಗುತ್ತಿರುವಾಗ ಲಂಬಾಣಿಗರು ತಮ್ಮ ಜಾನಪದ ಜೊತೆಯಲ್ಲಿಯೇ ಕಲೆಯನ್ನು ಸಂಪೂರ್ಣವಾಗಿ ಕೈಬಿಡದೆ ಪ್ರವೃತ್ತಿಯ ರೂಪದಲ್ಲಾದರೂ ಉಳಿಸಿಕೊಂಡು ಅದಕ್ಕೊಂದು ಜೀವಂತಿಕೆಯನ್ನು ತುಂಬುತ್ತಾ ಅವರದೇ ಆದ ಅನನ್ಯತೆಯನ್ನು ಗುರುತಿಸಿಕೊಂಡಿರುವುದು ಸಂತೋಷದ ಸಂಗತಿಯಾಗಿದೆ.

ಅವಿಭಕ್ತ ಕುಟುಂಬದ ಬೆನ್ನಲುಬಿನಂತಿದ್ದ ಗ್ರಾಮೀಣ ಸಮಾಜಕ್ಕೆ ಕೃಷಿ ಮತ್ತು ಪಶುಪಾಲನೆ ಪ್ರಮುಖ ವೃತ್ತಿಗಳಾಗಿದ್ದವು. ಕುಟುಂಬದ ಇತರೆ ಕಲೆಗಳಲ್ಲಿ ಮಹಿಳೆಯರು ತೊಡಗಿಸಿಕೊಂಡಿದ್ದರು. ಕಲೆಯನ್ನು ಒಂದು ವೃತ್ತಿಯ ರೂಪದಲ್ಲಿ ಅಲ್ಲಿಯ ಸ್ಥಳೀಯ ಜನರು ತೊಡಗಿಸಿಕೊಂಡಿದ್ದರು. ಆದರೆ ಇಂದು ನಗರಗಳಲ್ಲಿ ಹಲವಾರು ಕೈಗಾರಿಕೆಗಳು, ಕಾರ್ಖಾನೆಗಳು ಮತ್ತು ಸಂಬಂಧಪಟ್ಟ ಉದ್ದಿಮೆಗಳು ಹೆಚ್ಚು ಉದ್ಯೋಗ ಅವಕಾಶವನ್ನು ಸೃಷ್ಟಿಸುತ್ತಾ ಬಂದಿವೆ. ಆದ್ದರಿಂದ ನಗರಗಳು ತನ್ನ ಸುತ್ತಮುತ್ತಿನ ತಾಂಡಾಗಳ ಬುಡಕಟ್ಟು ಜನರನ್ನು ಆಕರ್ಷಿಸುತ್ತಿವೆ. ಇಂತಹ ಆಕರ್ಷಣೆಗೆ ಒಳಗಾದ ಲಂಬಾಣಿಗರು ಪ್ರಮುಖರು ಎಂದು ಹೇಳಬಹುದು.

ಲಂಬಾಣಿಗರ ಯುವಕರು ಶಿಕ್ಷಣ ಕಲಿತು ಹೆಚ್ಚಾಗಿ ಪಟ್ಟಣಗಳತ್ತ ಮುಖ ಮಾಡಿದ್ದಾರೆ. ಇಂತಹ ಪಟ್ಟಣಗಳತ್ತ ಮುಖ ಮಾಡಿರುವವರು ಮತ್ತು ಕೆಲವು ಪಟ್ಟಣಗಳಿಗೆ ಹತ್ತಿರವಿದ್ದು ಹೆಚ್ಚು ಕಾಲ ಪಟ್ಟಣ ನಗರಗಳಲ್ಲೇ ಕಾಲ ಕಳೆಯುತ್ತ ಕಾರ್ಖಾನೆಗಳಲ್ಲಿ ದುಡಿಯಲಾರಂಭಿಸಿದ್ದಾರೆ. ಅವರ ವಿದ್ಯಾಭ್ಯಾಸಮಟ್ಟಕ್ಕೆ ಅನುಗುಣವಾಗಿ ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡು ಬರುಬರುತ್ತ ತಾಂಡಾಗಳ ಸಂಸ್ಕೃತಿಯನ್ನು ಮರೆತು ಪಟ್ಟಣಗಳ ಸಂಸ್ಕೃತಿಗೆ ಮಾರು ಹೋಗಿರುತ್ತಾರೆ. ಇಂತಹ ಸಂದರ್ಭದಲ್ಲಿ ತಮ್ಮ ಕುಟುಂಬಗಳನ್ನು ತ್ಯಜಿಸಿ ಅವರದೇ ಆದ ಜೀವನ ಪದ್ಧತಿಯನ್ನು ರೂಢಿಸಿಕೊಳ್ಳುತ್ತಿದ್ದಾರೆ. ಇದರಿಂದಾಗಿ ಸ್ವಂತ ಬದುಕನ್ನು ಕಟ್ಟಿಕೊಳ್ಳಲು ಪರಾವಲಂಬಿಗಳಾಗಿರುತ್ತಾರೆ. ಜೊತೆಗೆ ಪ್ರಸ್ತುತ ಕಾಲ ಮತ್ತು ಬದಲಾವಣೆ ಯಾದಂತೆಲ್ಲಾ ಮಳೆಯ ಪ್ರಮಾಣ ಏರುಪೇರುಗಳಿಂದ ಬಹುಸಂಖ್ಯಾತರು ವಲಸಿಗರಾಗಿ ನಗರಗಳತ್ತ ಮುಖ ಮಾಡಿ ಅಲ್ಲಿ ಅವರದ್ದೇ ಆದ ಬದುಕನ್ನು ಕಟ್ಟಿಕೊಳ್ಳುತ್ತಿರುವುದು ಕಂಡುಬರುತ್ತಿದೆ. ಇದರಿಂದ ಅವಿಭಕ್ತ ಕುಟುಂಬ ಶಿಥಿಲತೆಗೆ ಪ್ರಮುಖ ಕಾರಣವೆಂದು ಹೇಳಬಹುದು.

ಒಟ್ಟಾರೆ ಲಂಬಾಣಿ ಸಂಸ್ಕೃತಿ ಆಧುನಿಕ ಕಾಲಕ್ಕೆ ಒಳಗಾಗಿ ತಮ್ಮ ಮೂಲ ಚಹರೆಯ ಒಂದೊಂದು ಅಂಶಗಳನ್ನು ಕಳಚಿಕೊಳ್ಳತೊಡಗಿದೆ. ಈಗಿನ ದಿನಮಾನಗಳಲ್ಲಿ ಲಂಬಾಣಿ ಉಡುಗೆ ತೊಡುಗೆಯಿಂದ ಮದುವೆಯನ್ನು ಯಾರೂ ಮಾಡಿಸಿಕೊಡುತ್ತಿಲ್ಲ.

ಲಂಬಾಣಿಗರ ಕರಕುಶಲ ಕಲೆಯು ಹೆಚ್ಚು ಜನಪ್ರಿಯವಾದ ಕಲೆ. ಇತ್ತೀಚೆಗೆ ಸಮುದಾಯದ ಕೆಲವು ಮಹಿಳೆಯರು ಅದನ್ನು ಕಸುಬನ್ನಾಗಿಸಿಕೊಂಡಿದ್ದಾರೆ. ಸಂಡೂರು ತಾಲ್ಲೂಕಿನಲ್ಲಿರುವ ಕರಕುಶಲ ಕೇಂದ್ರದಲ್ಲಿ ಪ್ರಾರಂಭದಿಂದ ಇಲ್ಲಿಯವರೆಗೆ ಅಂದರೆ ಸುಮಾರು ಮುನ್ನೂರಕ್ಕಿಂತ ಹೆಚ್ಚು ಮಹಿಳೆಯರು ಕೆಲಸವನ್ನು ಕಲಿಯುತ್ತಿದ್ದಾರೆ. ತಮ್ಮ ಬಿಡುವಿನ ವೇಳೆಯಲ್ಲಿ ಇದರ ಜೊತೆಗೆ ಹೊಲಗದ್ದೆಗಳ ಕೆಲಸ ಮಾಡುತ್ತಲೇ ಈ ಕಲೆಯನ್ನು ಕಲಿಯುತ್ತಿದ್ದಾರೆ. ಇಂದು ಆಧುನಿಕ ಸಲಕರಣೆಗಳೊಂದಿಗೆ ಹೊಸ ರೂಪವನ್ನು

ಪಡೆದುಕೊಂಡಿದೆ. ಹಾಗೆ ಮಹಿಳೆಯರಲ್ಲಿ ತಾಳ್ಮೆ ಶಕ್ತಿ ಹೆಚ್ಚಾಗಿದ್ದು, ಅದನ್ನು ಕರಗತ ಮಾಡಿಕೊಳ್ಳುವ ಶಕ್ತಿ ಅವರಲ್ಲಿ ಹೆಚ್ಚು. ಅವರು ಧರಿಸುವ ಉಡುಪಾಗಿದ್ದರಿಂದ ಹೆಚ್ಚಾಗಿ ಮಹಿಳೆಯರೇ ಆ ಕಲೆಯನ್ನು ಉಳಿಸಿ ಬೆಳೆಸುವ ಅನಿವಾರ್ಯತೆ ಈ ಸಮುದಾಯಕ್ಕಿದೆ.

**೫.೩. ಕೇಂದ್ರ, ರಾಜ್ಯ ಸರ್ಕಾರ, ಖಾಸಗಿ ಸಂಘ-ಸಂಸ್ಥೆಗಳ ಸಹಾಯ ಸಹಕಾರ**

ಕೇಂದ್ರ ಹಾಗೂ ರಾಜ್ಯ ಸರಕಾರಗಳು ತಾಂಡಾ ಅಭಿವೃದ್ಧಿಗಾಗಿ ಹಣವನ್ನು ವ್ಯಯ ಮಾಡುತ್ತಿದೆ. ಅಂತೆಯೇ ಅನೇಕ ಯೋಜನೆಗಳನ್ನು ರೂಪಿಸುತ್ತಿದೆ. ಈ ಯೋಜನೆಗಳಲ್ಲಿ ಕೆಲವು ಯೋಜನೆಗಳು ಫಲಕಾರಿಯಾಗಿವೆ. ಆದರೆ ಇಂತಹ ಯೋಜನೆಗಳಿಗೆ ದೂರಗಾಮಿ ಪರಿಣಾಮದ ನೆಲೆ ಇರುವುದಿಲ್ಲ. ಮುಖ್ಯವಾಗಿ ಪರಿಶಿಷ್ಟ ಜಾತಿಗಳಿಗೆ ಇಂತಿಷ್ಟು ಹಣವನ್ನು ಮೀಸಲು ತೆಗೆಯುವುದು, ಅದು ಖರ್ಚಾದುದ್ದಕ್ಕೆ ಲೆಕ್ಕ ಕೊಡುವುದು. ಹೀಗೆ ಕೆಲವು ಯಾಂತ್ರಿಕ ಕೆಲಸಗಳು ನಡೆಯುವುದನ್ನು ನೋಡಬಹುದಾಗಿದೆ.

ಕೇಂದ್ರ ಸರಕಾರದ ಪರಿಶಿಷ್ಟರ ಕಲ್ಯಾಣ ಇಲಾಖೆಯಿಂದ ಶೈಕ್ಷಣಿಕ ಮತ್ತು ಆರ್ಥಿಕ ಕೆಲಸಗಳನ್ನು ಮಾಡಲಾಗುತ್ತದೆ. ಇಲ್ಲಿಯೂ ಆಯಾ ಪರಿಶಿಷ್ಟರ ಶಿಕ್ಷಿತ ವಲಯಕ್ಕೆ ಮಾತ್ರ ಇಂತಹ ಯೋಜನೆಗಳು ಉಪಯೋಗವಾಗುತ್ತವೆಯೋ ಎನ್ನುವ ಅನುಮಾನ ಕಾಡುತ್ತದೆ.

ಅಂತೆಯೇ ಸಮುದಾಯಗಳನ್ನು ಉದ್ಧಾರ ಮಾಡುವ ನೆಪ ಹೊತ್ತು ಎನ್.ಜಿ.ಓ.ಗಳು, ಇತರೆ ಖಾಸಗಿ ಸಂಸ್ಥೆಗಳು ಮುಂದೆ ಬರುತ್ತವೆ. ಇದರಲ್ಲಿ ಕೆಲವು ಮಾತ್ರ ಪ್ರಾಮಾಣಿಕವಾಗಿ ದುಡಿಯುತ್ತವೆ. ಉಳಿದಂತೆ ನೂರಾರು ಖಾಸಗಿ ಸಂಸ್ಥೆಗಳು ಆಯಾ ಸಮುದಾಯಗಳನ್ನು ಹೇಗೆ ಬಳಸಿಕೊಳ್ಳುವುದು ಎನ್ನುವ ಬಗ್ಗೆಯೇ ಯೋಚಿಸುತ್ತವೆ. ಹೀಗಿರುವಾಗ ಖಾಸಗಿ ಸಂಸ್ಥೆಗಳ ಬಗ್ಗೆಯೂ ಅತಿಯಾದ ಭರವಸೆಯನ್ನು ಹೊಂದುವಂತಿಲ್ಲ. ಈ ಕೆಳಗೆ ಸರಕಾರಿ ಮತ್ತು ಖಾಸಗಿ ಸಂಸ್ಥೆಗಳ ಆಡಳಿತ ವೈಖರಿ, ಅವುಗಳಿಂದಾದ ಲಾಭ ಮುಂತಾದವುಗಳ ಬಗ್ಗೆ ಚಿಂತಿಸಲಾಗಿದೆ.

**ವಿಶ್ವ ಕರಕುಶಲ ಪರಿಷತ್ತು(W.C.C- World Craft Council)**

೧೯೬೪ರಲ್ಲಿ ಆರಂಭವಾದ W.C.C. ಒಂದು ಸರಕಾರೇತರ ಲಾಭೋದ್ದೇಶರಹಿತ ಸಂಸ್ಥೆಯಾಗಿದ್ದು, ವಿಶ್ವದ ಎಲ್ಲ ಕುಶಲಕರ್ಮಿಗಳನ್ನು ಸಂಘಟಿಸಿ ಅವರ ಅಮೂಲ್ಯ ಕಲೆಯನ್ನು ಭೂತದಿಂದ ಭವಿಷ್ಯತ್ತಿಗೆ ಉಳಿಸಿ, ಬೆಳೆಸಿ ವರ್ಗಾಯಿಸುವ ಹಾಗೂ ಕಲಾವಿದರ ಆರ್ಥಿಕ-ಸಾಮಾಜಿಕ ಸ್ಥಿತಿಗತಿಗಳನ್ನು ಸುಧಾರಿಸಲು ಅವಶ್ಯವಾದ ತಂತ್ರಜ್ಞಾನ, ತರಬೇತಿ, ಸಂಶೋಧನೆ ಮತ್ತು ಮಾರುಕಟ್ಟೆ ಅವಕಾಶ ಒದಗಿಸುವುದಾಗಿದೆ. ಈ ಉದ್ದೇಶಕ್ಕಾಗಿ ವಿಶ್ವವನ್ನು ಐದು ವಿಭಾಗಗಳಾಗಿ ವಿಂಗಡಿಸಿದೆ. ೧. ಆಫ್ರಿಕಾ, ೨. ಏಷ್ಯಾ ಫೆಸಿಪಿಕ್, ೩. ಯೂರೋಪ್, ೪. ಲ್ಯಾಟಿನ್ ಅಮೆರಿಕಾ, ೫. ಉತ್ತರ ಅಮೆರಿಕಾ. ಈ ಎಲ್ಲಾ

ವಿಭಾಗಗಳ ನಡುವೆ ಸೆಮಿನಾರ್, ಕಾರ್ಯಾಗಾರ, ಸ್ಪರ್ಧೆ, ಪ್ರದರ್ಶನ, ಸಂವಹನ, ವಿನಿಮಯಗಳನ್ನು ನಡೆಸುತ್ತದೆ. W.C.C. ಪ್ರಕಾರ ಒಂದು ದೇಶದ ಸಂಸ್ಕೃತಿ ಉಳಿದರೆ ಮಾತ್ರ ದೇಶ ಉಳಿಯುತ್ತದೆ. ಸಂಸ್ಕೃತಿಯ ಉಳಿವು ಕಲೆಯ, ಕಲಾವಿದರ ಸ್ಥಾನಮಾನ, ಮಾನ ಸನ್ಮಾನ, ಸ್ವಾಭಿಮಾನ ಮತ್ತು ಆರ್ಥಿಕ ಸದೃಢತೆಯನ್ನು ಅವಲಂಬಿಸಿದೆ. ಈ ದಿಶೆಯಲ್ಲಿ ಕಲಾವಿದರನ್ನು ಮುಖ್ಯವಾಹಿನಿಗೆ ತಂದು ಆಧುನಿಕ ಮಾರುಕಟ್ಟೆಗೆ ಸನ್ನದ್ಧಗೊಳಿಸಿ ವಿಶ್ವದ ಜೀವಂತ ಸಂಪತ್ತನ್ನು, ಕಲೆ ಸಂಸ್ಕೃತಿಯನ್ನು ಮುಂದಿನ ತಲೆಮಾರಿಗೆ ಸಾಗಿಸಲು ಯುನೆಸ್ಕೋದೊಡನೆ ಕೈಜೋಡಿಸುವ ಮೂಲಕ ವಿಶ್ವದ ಕಲಾವಿದರಲ್ಲಿ ಭಾತೃತ್ವ, ಸಹಕಾರ ಮತ್ತು ಸಹಾಯಗಳನ್ನು ಹುಟ್ಟುಹಾಕುತ್ತಿರುವ ಅತ್ಯುನ್ನತ ಸಂಸ್ಥೆ ಇದಾಗಿದೆ.

**ಯುನೆಸ್ಕೋದ ಕರಕುಶಲ ಕಲೆಗಳ ಪ್ರಾವೀಣ್ಯತೆಯ ಪಾರಿತೋಷಕ**

**(UNESCO - Award of Excellence for Handicrafts)**

ಸಾಂಸ್ಕೃತಿಕ ಕಾರ್ಯಗಳಿಗೆ ಆರ್ಥಿಕತೆಯ ಮೆರಗು ನೀಡುವ ಮೂಲಕ ಅಂತಹ ಪಾರಂಪರಿಕ ಕಲೆಗಳನ್ನು ರಕ್ಷಿಸುವ, ಪ್ರೋತ್ಸಾಹಿಸುವ, ಗುಣ ವರ್ಧಿಸುವ ಮತ್ತು ಆ ಮೂಲಕ ಅಂತಾರಾಷ್ಟ್ರೀಯ ಮನ್ನಣೆ, ಮಾರುಕಟ್ಟೆ ಒದಗಿಸುವ ಉದ್ದೇಶದಿಂದ ಆರಂಭಿಸಿದ್ದ ಯುನೆಸ್ಕೋ ಕ್ರಾಫ್ಟ್ ಪ್ರೈಜ್‌ಗೆ ಪರ್ಯಾಯವಾಗಿ ಯುನೆಸ್ಕೋ ಅವಾರ್ಡ್ ಆಫ್ ಎಕ್ಸಲೆನ್ಸ್ ಫಾರ್ ಹ್ಯಾಂಡಿಕ್ರಾಫ್ಟ್ಸನ್ನು ನೀಡಲಾಗುತ್ತದೆ. ೧೯೯೦ರಲ್ಲಿ ಹತ್ತು ವರ್ಷದ ವಿಶ್ವ ಕುಶಲ ಕಲೆಗಳ ಅಭಿವೃದ್ಧಿಯ ಕಾರ್ಯಯೋಜನೆಯ ಅಂಗವಾಗಿ ಈ ಯೋಜನೆ ಆರಂಭವಾಗಿದೆ. ಈ ಯೋಜನೆಯು ಹಲವಾರು ಸದುದ್ದೇಶ ಹೊಂದಿದೆ.

೧. **ಉನ್ನತ ಗುಣಮಟ್ಟದ ಆಶ್ವಾಸನೆ(ಸರ್ಟಿಫಿಕೆಟ್ ಆಫ್ ಎಕ್ಸಲೆನ್ಸ್) :** ಈ ಪ್ರಶಸ್ತಿ ವಿಜೇತ ಕಲಾಕೃತಿಯನ್ನು ಕೊಳ್ಳುವ ಪ್ರತಿ ಗ್ರಾಹಕನಿಗೂ ಆ ವಸ್ತು ಅತ್ಯುನ್ನತ ಗುಣಮಟ್ಟವನ್ನು ಸಾಧಿಸಿದೆ. ಕಲೆಯ ಪರಿಪೂರ್ಣತೆಯ ಕೃತಿ ಇದಾಗಿದೆ. ವಿಶಿಷ್ಟ ಸಾಂಸ್ಕೃತಿಕ ಅನನ್ಯತೆಯ ಮುದ್ರೆ ಇದಾಗಿದ್ದು, ಸಾಮಾಜಿಕ ಜವಾಬ್ದಾರಿ ಹಾಗೂ ಪರಿಸರದ ಕಾಳಜಿಗಳನ್ನು ಇದರ ಉತ್ಪಾದನೆಯಲ್ಲಿ ಪರಿಪಾಲಿಸಲಾಗಿದೆ ಎಂಬ ಭಾವನೆ ಮೂಡಿಸುವುದು.

೨. **ಸೃಜನಶೀಲತೆ ಮತ್ತು ಹೊಸತನಕ್ಕೆ ಉತ್ತೇಜನ :** ಪಾರಂಪರಿಕ ಕಲೆಯನ್ನು ಉಳಿಸುವ ಜವಾಬ್ದಾರಿಯ ಜೊತೆಗೆ ಯುನೆಸ್ಕೋದ ಈ ಪ್ರಶಸ್ತಿ ಆಧುನಿಕ ಜಗತ್ತಿನ ಅಭಿರುಚಿಗೆ ಹೊಂದುವ, ಮಾರುಕಟ್ಟೆಯಲ್ಲಿ ಯಶಸ್ವಿಯಾಗಬಲ್ಲ, ಮೌಲ್ಯ ತಂದುಕೊಡಬಲ್ಲ ಹೊಸತನದ ಸೃಷ್ಟಿಗೂ ಉತ್ತೇಜನ ನೀಡುತ್ತಿದೆ.

೩. **ಕುಶಲಕರ್ಮಿಗಳ ಕಲೆ-ಕಲಾತ್ಮಕತೆ :** ಸೃಜನಶೀಲತೆ ಅತ್ಯಮೂಲ್ಯ ಆಸ್ತಿಯಾಗಿದ್ದು ಅದಕ್ಕೆ ಬೌದ್ಧಿಕ ಆಸ್ತಿಯ ಹಕ್ಕು ಕಲ್ಪಿಸುವ ಮೂಲಕ ಅದಕ್ಕೆ ತಕ್ಕ ರಕ್ಷಣೆ ಹಾಗೂ ಮೌಲ್ಯ

ಸೃಷ್ಟಿಗೆ ಪ್ರಯತ್ನ. ತಮ್ಮ ಕಲೆಗೆ ಮಾರುಕಟ್ಟೆ ಪಡೆಯುವ ದಿಶೆಯಲ್ಲಿ ಹೊಸ ವಿನ್ಯಾಸ, ಸಂಶೋಧಗಳಿಗೆ ಅವಶ್ಯವಾದ ತರಬೇತಿ, ಕಾರ್ಯಾಗಾರ ಒದಗಿಸುವುದು.

**೪. ಕುಶಲ ಕಲೆಗಳಿಗೆ ನಿರಂತರತೆ ಹಾಗೂ ಹೊಸ ಅವಕಾಶ ಒದಗಿಸುವುದು :** ಬಡತನ ನಿರ್ಮೂಲನೆ ಮತ್ತು ಆರ್ಥಿಕಾಭಿವೃದ್ಧಿಯಲ್ಲಿ ಕುಶಲಕರ್ಮಿಗಳ ಪಾತ್ರ ತುಂಬಾ ಮಹತ್ವದ್ದಾಗಿದ್ದು, ಹೊಸ ಮಾರುಕಟ್ಟೆ ಅವಕಾಶಗಳನ್ನು ಒದಗಿಸುವ ಮೂಲಕ ಸ್ಥಿರ ಆದಾಯ ಮೂಲ ಒದಗಿಸಲು ಪ್ರಯತ್ನಿಸಲಾಗುತ್ತದೆ. ಇದು ಸಾಧ್ಯವಾಗಬೇಕೆಂದರೆ ಪ್ರದರ್ಶನ-ಮಾರಾಟ ಮೇಳಗಳ ಮೂಲಕ ಕೊಳ್ಳುವವರು, ಮಾರುವವರು, ಕಲಾವಿದರ ನಡುವೆ ಸದೃಢ ಸಂವಹನದ ಜಾಲ, ನೆಟ್‌ವರ್ಕ್‌ನ ಅವಶ್ಯಕತೆಯನ್ನು ಪೂರೈಸುತ್ತದೆ.

ಪ್ರಶಸ್ತಿ ಪುರಸ್ಕೃತರಿಗೆ ತಮ್ಮ ಉತ್ಪನ್ನಗಳನ್ನು ರಾಷ್ಟ್ರೀಯ ಅಂತಾರಾಷ್ಟ್ರೀಯ ಮಟ್ಟದ ಫ್ರಾನ್ಸ್‌ನ ಪ್ಯಾರಿಸ್ ಮೇಳ, ಮೇಸಸ್ ಮತ್ತು ಆಬ್ಜೆಕ್ಟ್ ವ್ಯಾಪಾರ ಮೇಳ ಹಾಗೂ ಅಮೆರಿಕಾದ ಸಂತಾಫೆ ಅಂತಾರಾಷ್ಟ್ರೀಯ ಜಾನಪದ ಕಲಾ ಮಾರಾಟಗಳಲ್ಲಿ ಪ್ರದರ್ಶಿಸುವ, ಮಾರಾಟ ಮಾಡುವ ಅವಕಾಶ ದೊರೆಯುತ್ತದೆ.

ಈ ಎಲ್ಲಾ ಉದ್ದೇಶಗಳೊಂದಿಗೆ ಈ ಯೋಜನೆಯ ಯುನೆಸ್ಕೋದ ಅತ್ಯಂತ ಹೆಮ್ಮೆಯ ಕರಕುಶಲ ಯೋಜನೆಯಾಗಿದೆ. ೨೦೦೮ರಲ್ಲಿ ೧೪೪ ಉತ್ಪನ್ನಗಳು ಈ ಪ್ರಶಸ್ತಿಯ ಲಾಭ ಪಡೆದಿವೆ. ಈ ಪ್ರಶಸ್ತಿಯು ೧೦,೦೦೦ ಡಾಲರ್‌ಗಳ ನಗದು ಹಣದ ಜೊತೆಗೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಕಲೆ ಕರ್ತೃತ್ವ ಶಕ್ತಿಗೆ ಮಾನ್ಯತೆ ಮಾರುಕಟ್ಟೆ ಪಡೆಯುತ್ತಾರೆ.

ಇದನ್ನು ಆಫ್ರಿಕಾ, ಲ್ಯಾಟಿನ್ ಅಮೆರಿಕಾ/ಕೆರೆಬ್ಬಿಯನ್, ಏಷಿಯಾ ಫೆಸಿಫಿಕ್, ಅರಬ್ ರಾಜ್ಯಗಳಲ್ಲಿ ನಡೆಯುವ ವಿವಿಧ ಮಾರಾಟ-ಪ್ರದರ್ಶನ ಮೇಳಗಳಲ್ಲಿ ಆಯೋಜಿಸಿ ಸಂಯೋಜಿಸಲಾಗುತ್ತದೆ.

ಏಷ್ಯಾ/ಫೆಸಿಫಿಕ್ ವಿಭಾಗದಲ್ಲಿ ಈ ಕೆಳಗಿನ ಸ್ಥಳಗಳಲ್ಲಿ ಮೇಳಗಳನ್ನು ಆಯೋಜಿಸಲಾಗಿದ್ದು, ಭಾರತೀಯ, ಅದರಲ್ಲೂ ಲಂಬಾಣಿಗಳ ಕಸೂತಿ ಕಲೆ ಈ ಪ್ರಶಸ್ತಿಯನ್ನು ಪಡೆದಿದೆ ಎಂಬುದು ಹೆಮ್ಮೆಯ ವಿಷಯ.

೧. ಏಷ್ಯಾನ್ ಟೆಕ್ಸ್‌ಟೈಲ್ ಪ್ರದರ್ಶನ, ಥೈಲ್ಯಾಂಡ್‌ನ ಚಿಯಾಂಗ್ ಮೈ-೧೯೯೨.

೨. ಇಂಡಿಗೋ ಡೈ, ಥೈಲ್ಯಾಂಡ್‌ನ ಚಿಯಾಂಗ್ ಮೈ-೧೯೯೮.

೩. ಕಸೂತಿ ಮೇಳ, ಭಾರತದ ಹೈದರಾಬಾದ್-೨೦೦೧.

೪. ಪ್ರಾದೇಶಿಕ ಕಲಾವರ್ಧನೆ ಮತ್ತು ಗೃಹವಸ್ತುಗಳ ಮೇಳ, ಕೌಲಾಲಂಪುರ-೨೦೦೩.

೫. ಅಂತಾರಾಷ್ಟ್ರೀಯ ರೇಷ್ಮೆ ಹಾಗೂ ಸಾಂಬಾರು ದಿನಸಿಗಳ, ಉಜ್ಬೆಕಿಸ್ತಾನ್‌ನ ಬುಖಾರಾ-೨೦೦೫.

**ಭಾರತೀಯ ಕರಕುಶಲ ಪರಿಷತ್ತು(Crafts Council of India)**

ತೀವ್ರವಾಗಿ ಯಾಂತ್ರೀಕರಣಗೊಳ್ಳುತ್ತಿರುವ ಇಂದಿನ ಜಗತ್ತಿನಲ್ಲಿ ಪ್ರತಿಯೊಂದು ದೇಶವೂ ತನ್ನತನವನ್ನು, ಪ್ರತ್ಯೇಕತೆ, ವೈಶಿಷ್ಟ್ಯತೆ ಹಾಗೂ ಅಸ್ಮಿತೆಯನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿವೆ. ಭಾರತದ ಅದೃಷ್ಟವೆಂದರೆ ಈ ದೇಶದ ಹಳ್ಳಿಗಳಲ್ಲಿ, ಬುಡಕಟ್ಟುಗಳಲ್ಲಿರುವ ವೃದ್ಧೆಯರ ನಡುಗುವ ಕೈಬೆರಳುಗಳಲ್ಲಿ ತರುಣಿಯರ ನವಿರಾದ ಮನಸ್ಸುಗಳಲ್ಲಿ ಹಾಗೂ ಕೈಗಳಲ್ಲಿ ಈ ಸ್ವಂತಿಕೆ ಇನ್ನೂ ಜೀವಂತವಾಗಿ ಉಳಿದಿದೆ. ಸಂಕೀರ್ಣ ಕುಸುರಿಯ ಕಸೂತಿ ಹೆಣೆಯುವ ಬೆರಳುಗಳು, ಮಣ್ಣಿಗೆ ಜೀವಕೊಟ್ಟು ಮಡಿಕೆ ಮಾಡುವ ಕರಗಳಲ್ಲಿ, ಬುಡಕಟ್ಟುಗಳ ಕಲೆಗಳಲ್ಲಿ, ಶಿಲ್ಪಿಯ ಪೆಟ್ಟಿನಲ್ಲಿ ಅರಳುವ ಕಲೆ ನಮ್ಮ ಇತಿಹಾಸದ ಮರೆತುಹೋದ ಕಾಲಗಳ ಕಥೆಯನ್ನು ಹೇಳುತ್ತವೆ. ನಾವು ಯಾರು? ಎಲ್ಲಿಂದ ಬಂದಿದ್ದೇವೆ ಎನ್ನುವುದರ ಅಭಿಮಾನವನ್ನು ಮೂಡಿಸುತ್ತವೆ. ಈ ಅನನ್ಯತೆಯನ್ನು ಉಳಿಸುವ, ಬೆಳೆಸುವ ಕಾರ್ಯವನ್ನು ೧೯೬೪ರಲ್ಲಿ ಸ್ಥಾಪನೆಯಾದ ಭಾರತೀಯ ಕರಕುಶಲ ಪರಿಷತ್ತು(Crafts Council of India) ಮಾಡುತ್ತದೆ.

ಭಾರತೀಯ ಕರಕುಶಲ ಪರಿಷತ್ತು(Crafts Council of India) ಒಂದು ಲಾಭದ ದೃಷ್ಟಿ ಇಲ್ಲದ ಸ್ವಯಂ ಸೇವಾ ಸಂಸ್ಥೆಯಾಗಿದ್ದು ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರಿಂದ ಸ್ಥಾಪನೆಯಾಗಿ ಚೆನ್ನೈನಲ್ಲಿ ತನ್ನ ಕೇಂದ್ರ ಕಛೇರಿ ಹೊಂದಿದೆ. ಹತ್ತು ರಾಜ್ಯಗಳ ಕರಕುಶಲ ಪರಿಷತ್ತುಗಳ ಸಹಕಾರದೊಂದಿಗೆ ವಿಶ್ವ ಕರಕುಶಲ ಪರಿಷತ್ತಿನ ಸದಸ್ಯತ್ವವನ್ನು ಇದು ಹೊಂದಿದೆ. ಕಾಣೆಯಾಗುತ್ತಿರುವ ಅಪೂರ್ವ ಕಲೆಗಳ ಪುನರುಜ್ಜೀವನಗೊಳಿಸಿ ಸಾಂಪ್ರದಾಯಿಕ ಜ್ಞಾನ, ಕೌಶಲ್ಯ ಮತ್ತು ಕಲೆಗಳನ್ನು ಮುಂದಿನ ಜನಾಂಗಕ್ಕೆ ಉಳಿಸಲು ಇದು ಅವಿರತವಾಗಿ ಶ್ರಮಿಸುತ್ತಿದೆ. ಪ್ರಸ್ತುತ ಪೈಪೋಟಿಯ ಮಾರುಕಟ್ಟೆಯ ಹೊಸ ವ್ಯವಸ್ಥೆಗೆ ಈ ಹಳ್ಳಿಯ ಬುಡಕಟ್ಟಿನ ಕಲಾವಿದರು ಹೊಂದಿಕೊಳ್ಳುವಂತೆ ಹೊಸ ತಂತ್ರಜ್ಞಾನ, ತಂತ್ರಗಳನ್ನು ತರಬೇತಿ ನೀಡುವ ಮೂಲಕ ಅಣಿಗೊಳಿಸುತ್ತಿದೆ. ಉತ್ಪನ್ನಗಳ ಅಭಿವೃದ್ಧಿ, ಆವಿಷ್ಕಾರ, ಮಾರಾಟ ಕಲೆಯ ಬಗ್ಗೆ ಶಿಕ್ಷಣ, ತರಬೇತಿ, ಉನ್ನತೀಕರಣ ಹಾಗೂ ತಂತ್ರಜ್ಞಾನದ ಜೊತೆಗೆ ಸರ್ಕಾರಗಳ ನಿರಂತರ ಮಾತುಕತೆ ಮೂಲಕ ಕಲೆ, ಕಲಾವಿದರು ಉಳಿವು ಹಾಗೂ ಅಭಿವೃದ್ಧಿಗೆ ಶ್ರಮಿಸುತ್ತಿರುವ ಉನ್ನತ ಸಂಸ್ಥೆ ಇದಾಗಿದೆ.

**ವಿದ್ಯಾರ್ಥಿ ವೇತನ ಯೋಜನೆ**

ಮುಂದಿನ ಜನಾಂಗಕ್ಕೆ ಕಲೆ ಜೀವನೋಪಾಯದ ಹಾದಿ. ಕುಶಲಕರ್ಮಿಯ ಧಾರಣತ್ವ ಎಂದರೆ ತನ್ನ ಕುಟುಂಬದ ಹೊಟ್ಟೆ ತುಂಬಿಸಿ, ಮಕ್ಕಳಿಗೆ ಶಿಕ್ಷಣ ನೀಡಿ ಗೌರವಯುತ

ಜೀವನ ಸಾಗಿಸುವುದರ ಜೊತೆಗೇ ತನ್ನ ಕೆಲಸದ ಬಗ್ಗೆ ಹೆಮ್ಮೆಯನ್ನಿಟ್ಟುಕೊಂಡು ಕಚ್ಚಾವಸ್ತು ಮತ್ತು ಮಾರುಕಟ್ಟೆಯ ಶಕ್ತಿಗಳನ್ನು ಸರಿದೂಗಿಸುತ್ತಾ ಮುಂದಿನ ಜನಾಂಗಕ್ಕೆ ಕಲೆ-ಕೌಶಲ್ಯಗಳನ್ನು ಧಾರೆ ಎರೆಯುವುದಾಗಿದೆ. ಕಲೆಯ ಉಳಿವು ಕುಟುಂಬದ ಉಳಿವನ್ನು ಆಧರಿಸಿದೆ. ಯಾವುದೇ ಕಲೆಯಿಂದ ಸಾಮಾನ್ಯ ಬದುಕನ್ನು ಬದುಕಲಾಗದೋ ಅಂತಹ ಕಲೆಯಿಂದ ಮುಂದಿನ ಪೀಳಿಗೆ ವಿಮುಖವಾಗಿ ಬದುಕಿಗೆ ಬೇರೆ ದಾರಿ ಹಿಡಿಯುತ್ತಾ ಹೋದಾಗ ಕಲೆ ಕಣ್ಮರೆಯಾಗುತ್ತದೆ.

ಹೀಗೆ ಅಮೂಲ್ಯ ಕಲೆಗಳ ಅವಸಾನವನ್ನು ತಪ್ಪಿಸಲೆಂದೇ ಭಾರತೀಯ ಕುಶಲ ಕಲಾ ಪರಿಷತ್ತು(Craft Council of India) ಮುಂದಿನ ಜನಾಂಗದ ದೃಷ್ಟಿಯಿಂದ ಹಲವು ಯೋಜನೆಗಳನ್ನು ರೂಪಿಸಿದೆ. ಅವುಗಳಲ್ಲಿ ಮುಖ್ಯವಾದದ್ದು ವಿದ್ಯಾರ್ಥಿವೇತನ ಯೋಜನೆ. ಈ ಯೋಜನೆಯ ಮುಖ್ಯ ಉದ್ದೇಶಗಳೆಂದರೆ, ೧. ಸಾಮಾನ್ಯ ಶಿಕ್ಷಣದ ಜೊತೆ ಜೊತೆಗೇ ಕುಶಲ ಕಲಾ ತರಬೇತಿ ನೀಡುವುದು. ೨. ಶಿಕ್ಷಣಕ್ಕೆ ಮೌಲ್ಯ ದೊರಕಿಸುವ ಮೂಲಕ ಸ್ವಯಂ ಉದ್ಯೋಗ-ಉದ್ಯಮಶೀಲತ್ವ ಮತ್ತು ಉದ್ಯೋಗ ದೊರಕಿಸಲು ನೆರವಾಗುವುದು.

**ಯೋಜನೆ:** ೨೦೦೭ರಲ್ಲಿ ಆರಂಭವಾದ ಕುಶಲಕರ್ಮಿಗಳ ಮಕ್ಕಳ ವಿದ್ಯಾಭ್ಯಾಸ ಯೋಜನೆ ದಾನಿಗಳ ನೆರವಿನಿಂದ C.C.I. ನಡೆಸುತ್ತಿರುವ ಉತ್ತಮ ಯೋಜನೆಯಾಗಿದ್ದು, ಪ್ರತಿ ಮಗುವಿಗೆ ಪ್ರತಿ ವರ್ಷಕ್ಕೆ ೫೦೦೦ ರೂಪಾಯಿಗಳನ್ನು ವಂತಿಗೆ ನೀಡಬಹುದು. ಆ ವಂತಿಗೆಗೆ ಆದಾಯಕರ ವಿನಾಯಿತಿ ಇದ್ದು ಕಾಲಕಾಲಕ್ಕೆ ಮಗುವಿನ ಪ್ರಗತಿ ವರದಿ ನೀಡಲಾಗುತ್ತದೆ.

ಇಲ್ಲಿ ಕುಶಲಕರ್ಮಿಯ ೧೦ ವರ್ಷ ಮೇಲ್ಪಟ್ಟ ಮಕ್ಕಳ ಶಾಲಾ ವೆಚ್ಚವನ್ನು ನೀಡಲಾಗುವುದಲ್ಲದೆ ತಂದೆ-ತಾಯಿಯಿಂದ ಕುಶಲಕಲೆಯನ್ನು ಕಲಿಯುವ ಉತ್ತೇಜನ ನೀಡಲಾಗುತ್ತದೆ. ಕಲೆಯನ್ನು ಮುಂದುವರಿಸಲಿಚ್ಛಿಸುವ ಕಲಾವಿದರ ಮಕ್ಕಳನ್ನು ಎನ್.ಜಿ.ಓ.ಗಳ ಅಥವಾ ವಿವಿಧ ಸಂಸ್ಥೆಗಳ ಮೂಲಕ ಆರಿಸಿ, ಡಿ.ಡಿ. ಮೂಲಕ ಮಗುವಿನ ತಾಯಿಗೇ ಹಣ ಕಳಿಸಲಾಗುತ್ತದೆ. ನಂತರ ನಿರಂತರವಾಗಿ ವಿದ್ಯಾರ್ಥಿಯ ಪ್ರಗತಿಯನ್ನು ಪರಿಶೀಲಿಸಿ ದಾಖಲಿಸಲಾಗುತ್ತದೆ. ಪ್ರತಿವರ್ಷ ಮೂರು ದಿನಗಳ ಸಂಪರ್ಕ ಶಿಬಿರವನ್ನು ಏರ್ಪಡಿಸಿ ಪ್ರಮುಖ ಕಲಾವಿದರಿಂದ ತರಬೇತಿ ನೀಡಲಾಗುತ್ತದಲ್ಲದೆ ಸಂವಹನಕ್ಕಾಗಿ ಇಂಗ್ಲಿಷ್, ಗಣಿತವನ್ನು ಕಲಿಸಿ ಅವರ ಕಲೆಯ ಪ್ರದರ್ಶನವನ್ನು ಏರ್ಪಡಿಸುತ್ತದೆ.

**ಕರ್ನಾಟಕ ರಾಜ್ಯ ಕರಕುಶಳ ಅಭಿವೃದ್ಧಿ ನಿಗಮ(K.S.H.D.C-Karnataka State Handicrafts Development Corporation)**

೧೯೬೪ರಲ್ಲಿ ಆರಂಭವಾದ ಈ ಸರ್ಕಾರಿ ರಾಜ್ಯದ ಶ್ರೀಮಂತ ಕರಕುಶಲ ಪರಂಪರೆಯನ್ನು ಕಾಪಾಡುವ, ಅಭಿವೃದ್ಧಿಗೊಳಿಸುವ ಉದ್ದೇಶವನ್ನು ಹೊಂದಿದೆ. ವಿಶ್ವದ ಅತ್ಯಂತ ಹಳೆಯ





## CRAFT GENERATION NEXT



ಕಾವ್ಯಾ ಚಂದ್ರಾ ನಾಯಕ
ಕಡ್ಡಿರಾಂಪುರ ತಾಂಡಾ





ಪದ್ಮಾ ಕುಮಾರ ನಾಯಕ
ಹಳ್ಳಿ ತಾಂಡಾ





ಕಾಳಿಬಾಯಿ ನಾಯಕ
ಸುಶಿಲಾ ನಗರ, ಸಂಡೂರ





## CRAFT GENERATION NEXT



ಪವಿತ್ರಾ ನಾರಾಯಣ ನಾಯಕ
ಆನೆಕಲ್ ತಾಂಡಾ





ಶಿಲ್ಪಾ ತುಕಾರಾಮ ನಾಯಕ
ಆನೆಕಲ್ ತಾಂಡಾ





ಸುಮಲತಾ ಉಮಾಪತಿ ನಾಯಕ
ಕೋಗಳಿ ತಾಂಡಾ



ನಾಗರಿಕತೆಗಳಲ್ಲೊಂದಾದ ಭಾರತ ಕರಕುಶಲ ಕಲೆಗಳ ತವರಾಗಿದೆ. ದಕ್ಷಿಣ ಭಾರತ ಅದರಲ್ಲೂ ಕರ್ನಾಟಕ ತನ್ನ ವಿಶಿಷ್ಟ ಕುಶಲ ಕಲೆಗಳಿಗೆ ಹೆಸರಾಗಿದ್ದು, ಇಲ್ಲಿನ ದಟ್ಟ ಶಾಸನಗಳು, ವನ್ಯ ಮತ್ತು ವೃಕ್ಷಿಸಂಪತ್ತು ವೈವಿಧ್ಯಮಯ ಕಲೆಗಳಿಗೆ ಆಧಾರವಾಗಿದೆ. ಇಲ್ಲಿನ ಶ್ರೀಗಂಧ ಮತ್ತು ನಂದಿ, ಬೇಟೆ, ಹೊನ್ನೆ ಇತ್ಯಾದಿಗಳು ತಲೆತಲಾಂತರಗಳಿಂದ ಕಲೆಗೆ ಆಧಾರವಾಗಿದ್ದು ಇಂದಿಗೂ ಅದು ಉಳಿದುಬಂದಿದೆ. ಆಧುನಿಕತೆಯ ಹೊಡೆತಕ್ಕೆ ಸಿಲುಕಿ ನಾಶವಾಗಬಹುದಾದ ಈ ಕಲೆಗಳನ್ನು ಉಳಿಸಲು KSHDC ಈ ಕೆಳಗಿನ ಕ್ರಮಗಳನ್ನು ಕೈಗೊಂಡಿದೆ.

೧. ಕುಶಲಕರ್ಮಿಗಳು ಹೆಚ್ಚಾಗಿ ಕೇಂದ್ರೀಕೃತವಾಗಿರುವ ಸ್ಥಳಗಳಲ್ಲಿ ವಾಸ ಹಾಗೂ ಕೆಲಸದ ಶೆಡ್‌ಗಳನ್ನು ನಿರ್ಮಿಸಿ ಸಲಕರಣೆಗಳನ್ನು ಒದಗಿಸುವುದು.

೨. ಶ್ರೀಗಂಧ, ಸತು, ಬೆಳ್ಳಿ ಮುಂತಾದ ಕಚ್ಚಾವಸ್ತುಗಳನ್ನು ರಿಯಾಯಿತಿ ದರದಲ್ಲಿ ಪೂರೈಸುವುದು.

೩. ಹೊಸ ಮಾಧ್ಯಮಗಳ ಮೂಲಕ ಹೊಸ ಮಾದರಿಗಳ ಸೃಷ್ಟಿಗೆ ತರಬೇತಿ.

೪. ಬದಲಾಗುತ್ತಿರುವ ಮಾರುಕಟ್ಟೆ ಪ್ರವೃತ್ತಿಗಳು ಮತ್ತು ತಂತ್ರಜ್ಞಾನದ ಮಾಹಿತಿ ನೀಡುವುದು.

೫. ಮೈಸೂರು ಮತ್ತು ಚನ್ನಪಟ್ಟಣಗಳಲ್ಲಿ ಕಟ್ಟಿಗೆ ಪಾಲಿಶ್ ಉದ್ದಿಮೆಗಳ ಸ್ಥಾಪನೆ.

ವಿಶ್ವಾದ್ಯಾಂತ ಬೇಡಿಕೆಯಲ್ಲಿರುವ ಕರ್ನಾಟಕದ ಕುಶಲಕಲಾ ವಸ್ತುಗಳನ್ನು 'ಕಾವೇರಿ ಎಂಪೋರಿಯಂ'ಗಳ ಮೂಲಕ ಮಾಡಲಾಗುತ್ತದೆ. ಉನ್ನತ ಗುಣಮಟ್ಟವನ್ನು ಕಾಪಾಡಲಾಗುತ್ತದೆ.

**ಬಾಬಾಸಾಹೇಬ್ ಅಂಬೇಡ್ಕರ ಹಸ್ತಶಿಲ್ಪ ವಿಕಾಸ ಯೋಜನೆ(B.A.H.V.Y)**

ಪ್ರಸ್ತುತ ಭಾರತದ ಅರ್ಥವ್ಯವಸ್ಥೆಗೆ, ಉದ್ಯೋಗ ಸೃಷ್ಟಿಗೆ ಹಾಗೂ ರಫ್ತುಗಳಿಗೆ ಕರಕುಶಲ ಕಲೆಗಳ ಕೊಡುಗೆ ಅಪಾರವಾಗಿದ್ದರೂ ಅವುಗಳ ಅಸಂಘಟಿತ ಲಕ್ಷಣದಿಂದಾಗಿ, ಹಳ್ಳಿಗಳಲ್ಲಿ ಕೇಂದ್ರೀಕರಣದಿಂದಾಗಿ ತುಂಬಾ ಹಿಂದುಳಿದಿವೆ. ಮೊದಮೊದಲು ಕೇವಲ ಹಳ್ಳಿಗರ ಅರೆಕಾಲಿಕ ವೃತ್ತಿಯಾಗಿದ್ದ ಕರಕುಶಲ ಕಲೆ, ಹೆಚ್ಚುತ್ತಿರುವ ಬೇಡಿಕೆಯಿಂದಾಗಿ ಇಂದು ತೀವ್ರ ಲಾಭದ ಆಕರ್ಷಣೆಯ ಆರ್ಥಿಕ ಚಟುವಟಿಕೆಯಾಗಿ ಬದಲಾಗಿದ್ದು, ದೇಶದ ಉದ್ದಗಲಕ್ಕೂ ಹಬ್ಬಿರುವ ಲಕ್ಷಾಂತರ ಕುಶಲಕರ್ಮಿಗಳ ಅಭಿವೃದ್ಧಿ ಹಾಗೂ ಅಸ್ತಿತ್ವಕ್ಕೆ ಕಾರಣವಾಗಿದೆ. ಆದರೆ ಅಸಂಘಟಿತತೆ, ಅನಕ್ಷರತೆ, ಬಂಡವಾಳದ ಕೊರತೆ, ಹಿಂದುಳಿದ ತಂತ್ರಜ್ಞಾನ, ಮಾರುಕಟ್ಟೆ ಪರಿಜ್ಞಾನದ ಕೊರತೆ, ಸಾಂಸ್ಥಿಕ ಮೂಲಸೌಕರ್ಯ ಕೊರತೆಗಳಿಂದಾಗಿ ನರಳುತ್ತಿದ್ದ ಈ ರಂಗಕ್ಕೆ ಸಂಜೀವಿನಿಯಾಗಿ ಬಂದಿರುವುದೇ B.A.H.V.Y. ಯೋಜನೆ.

೨೦೦೧-೦೨ರಲ್ಲಿ ಜಾರಿಯಾದ ಈ ಯೋಜನೆಯ ಮೂಲ ಉದ್ದೇಶ, ಬೇಡಿಕೆ ಆಧಾರಿತ ಸಮಗ್ರ ಅಭಿವೃದ್ಧಿಯ ಕರಕುಶಲ ಕಲೆಗಾರರ ಗುಂಪುಗಳನ್ನು ರಚಿಸಿ ಎಲ್ಲ ಹಂತಗಳಲ್ಲಿ ಅಂದರೆ ೧. ಸಾಮಾಜಿಕ, ೨. ತಾಂತ್ರಿಕ, ೩. ಮಾರುಕಟ್ಟೆ, ೪. ಆರ್ಥಿಕ, ೫. ನಿರ್ದಿಷ್ಟ ಗುಂಪಿನ ಮೂಲ ಸೌಕರ್ಯ ಸಂಘಗಳ ಸಹಕಾರದೊಂದಿಗೆ ಸಂಘಟಿತವಾದ ಈ ವರ್ಗದ ಜನರನ್ನು ಸಬಲೀಕರಣಗೊಳಿಸುವ ಉದ್ದೇಶದಿಂದ ಜಾರಿಗೊಳಿಸಲಾಗಿದೆ.

**ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ**

ಸಮಾಜ ಕಲ್ಯಾಣ ಇಲಾಖೆಯು ಪರಿಶಿಷ್ಟ ಜಾತಿ ಕಲ್ಯಾಣ ಕಾರ್ಯಕ್ರಮದಡಿಯಲ್ಲಿ ಪರಿಶಿಷ್ಟ ಜಾತಿಯವರ ಸರ್ವತೋಮುಖ ಏಳಿಗೆಗಾಗಿ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಗಾಗಿ ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಾ ಬಂದಿದೆ. ಈ ಇಲಾಖೆಯು ಪರಿಶಿಷ್ಟ ಜಾತಿಯವರ ಕಲ್ಯಾಣಕ್ಕಾಗಿ ರಾಜ್ಯ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟಗಳಲ್ಲಿ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಆದರೆ ಇತ್ತೀಚೆಗೆ ಕರ್ನಾಟಕ ರಾಜ್ಯದ ಬಂಜಾರ ಜನತೆಗೆ ಈ ಮೇಲಿನ ಸೌಕರ್ಯಗಳಿಂದ ವಂಚಿತರಾಗಿದ್ದ, ಸಮುದಾಯಕ್ಕೆ ದಶಕಗಳ ಪ್ರಯತ್ನದ ಪ್ರತಿಫಲದಿಂದ ಆಶಾಕಿರಣದಂತೆ ಕರ್ನಾಟಕ ಸರ್ಕಾರವು ಪ್ರಾರಂಭಿಕವಾಗಿ ಈ ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮದ ಮೂಲಕ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮವು ೨೩.೦೨.೨೦೦೯ರಂದು ಅಸ್ತಿತ್ವಕ್ಕೆ ಬಂದಿದ್ದು, ಈ ನಿಗಮದಿಂದ ಬಂಜಾರ/ಲಂಬಾಣಿ ತಾಂಡಗಳಲ್ಲಿ ಸದ್ಯಕ್ಕೆ ಮೂಲಭೂತ ಸೌಕರ್ಯ ಕಲ್ಪಿಸುವುದು. ಸೇವಾಲಾಲ್ ಸಮುದಾಯ ಭವನ ನಿರ್ಮಾಣ ಮತ್ತು ಬಂಜಾರ ಭವನ ನಿರ್ಮಾಣದ ಕಾರ್ಯಕ್ರಮಗಳನ್ನು ಮಾತ್ರ ಅನುಷ್ಠಾನಗೊಳಿಸಲಾಗುತ್ತಿದೆ. ಈ ರಾಜ್ಯದಲ್ಲಿ ಸುಮಾರು ೩೦೦೦ ತಾಂಡಾಗಳ ಪೈಕಿ ೨೭೭೦ ತಾಂಡಾಗಳನ್ನು ಗುರುತಿಸಿದ್ದು, ೩೦೦ ತಾಂಡಾಗಳನ್ನು ಕಂದಾಯ ಗ್ರಾಮಗಳನ್ನಾಗಿ(Hamlet) ಪರಿವರ್ತಿಸಲು ಕ್ರಮ ಕೈಗೊಳ್ಳಲಾಗಿದೆ. ಪ್ರಾರಂಭಿಕವಾಗಿ ೨೦೦ ಲಂಬಾಣಿ ತಾಂಡಗಳಲ್ಲಿ ಸೇವಾಲಾಲ್ ಸಮುದಾಯ ಭವನಗಳನ್ನು ನಿರ್ಮಾಣ ಮಾಡಲು ಪ್ರತಿ ಸಮುದಾಯ ಭವನಕ್ಕೆ ರೂ. ೧೦.೦೦ ಲಕ್ಷಗಳನ್ನು ನಿಗದಿಪಡಿಸಲಾಗಿದೆ.

**ನಿಗಮದ ಯೋಜನೆಗಳ ವಿವರಣೆ**

೧. **ಮೂಲಭೂತ ಸೌಕರ್ಯ:** ಸದರಿ ಕಾರ್ಯಕ್ರಮದ ಪ್ರಯೋಜನ ಪಡೆಯಲು ಬಂಜಾರ ತಾಂಡವು ಹೆಚ್ಚಿನ ಸಂಖ್ಯೆಯಲ್ಲಿ ಬಂಜಾರ ಜನಾಂಗವನ್ನು ಹೊಂದಿರಬೇಕು. ತಾಂಡಾದಲ್ಲಿ ವಾಸಿಸುವ ಜನರು ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿದ್ದಲ್ಲಿ

ಅಂತಹ ತಾಂಡಕ್ಕೆ ಮೊದಲ ಆದ್ಯತೆ ನೀಡಲಾಗುವುದು. ಸದರಿ ತಾಂಡವು ಈ ಹಿಂದೆ ಯಾವುದೇ ಸೌಲಭ್ಯಗಳನ್ನು ಪಡೆಯದಿರುವ ತಾಂಡಾಗಳಲ್ಲಿ ಸುಧಾರಣಾ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.

೧. ಕುಡಿಯುವ ನೀರು, ೨. ಸಾರ್ವಜನಿಕ ಶೌಚಾಲಯ, ೩. ಚರಂಡಿ ಅಭಿವೃದ್ಧಿ, ೪. ಬೀದಿ ದೀಪಗಳು, ೫. ಕಾಂಕ್ರಿಟ್ ರಸ್ತೆಗಳ ನಿರ್ಮಾಣ

ಮೇಲ್ಕಂಡ ಕಾಮಗಾರಿಗಳ ಅನುಷ್ಠಾನ ಸಮಿತಿಗೆ ಮಾನ್ಯ ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿದ್ದು, ಸಂಬಂಧಪಟ್ಟ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಮತ್ತು ಸಂಬಂಧಪಟ್ಟ ತಾಲೂಕು ಸಮಾಜ ಕಲ್ಯಾಣಾಧಿಕಾರಿಗಳು ಸದಸ್ಯರಾಗಿರುತ್ತಾರೆ. ಸಂಬಂಧಪಟ್ಟ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ ಮತ್ತು ಸದರಿ ಅನುಷ್ಠಾನ ಸಮಿತಿಯು ಯಾವ ಯಾವ ತಾಂಡಾದಲ್ಲಿ ಕಾಮಗಾರಿಗಳನ್ನು ತೆಗೆದುಕೊಳ್ಳ ಬಹುದೆಂದು ಜಿಲ್ಲಾ ಮಟ್ಟದಲ್ಲಿ ಚರ್ಚಿಸಿ, ಅಂತಿಮಗೊಳಿಸಿ, ನಂತರ ಕಾಮಗಾರಿಕೆಗಳನ್ನು ಕೈಗೆತ್ತಿಕೊಳ್ಳಲಾಗುವುದು.

**೨. ಸೇವಲಾಲ್ ಸಮುದಾಯ ಭವನ** : ಬಂಜಾರ ಜನತೆಗೆ ಸಾಮಾಜಿಕ ಮತ್ತು ಆರ್ಥಿಕ ಅರಿವು ಮೂಡಿಸಲು ಹಾಗೂ ತಮ್ಮ ತಮ್ಮ ವಿಚಾರಧಾರೆಯನ್ನು ಪರಸ್ಪರ ವಿನಿಮಯ ಮಾಡಿಕೊಳ್ಳಲು ಕರ್ನಾಟಕ ಸರ್ಕಾರವು ಈ ಘನ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದೆ. ಈ ಸದರಿ ಕಾರ್ಯಕ್ರಮದ ಪ್ರಯೋಜನ ಪಡೆಯಲು ಬಂಜಾರ ತಾಂಡಾವು ಹೆಚ್ಚಿನ ಸಂಖ್ಯೆಯಲ್ಲಿ ಬಂಜಾರ ಜನಾಂಗವನ್ನು ಹೊಂದಿರುವ ತಾಂಡಾಗಳಲ್ಲಿ ಸೇವಲಾಲ್ ಸಮುದಾಯ ಭವನ ನಿರ್ಮಿಸಲು ಆದ್ಯತೆ ನೀಡಲಾಗುವುದು. ತಾಂಡಗಳ ಸಂಖ್ಯೆ, ಲಂಬಾಣಿ ಸಮುದಾಯದ ಜನಸಂಖ್ಯೆಯ ಆಧಾರದ ಮೇಲೆ ಅನುದಾನ ಹಂಚಿಕೆ ಮಾಡಲಾಗುವುದು. ಸೇವಲಾಲ್ ಸಮುದಾಯ ಭವನ ನಿರ್ಮಾಣ ಮಾಡಲು ನಿವೇಶನ ಲಭ್ಯವಿರುವ ತಾಂಡಗಳಿಗೆ ಮೊದಲನೇ ಆದ್ಯತೆ ನೀಡಲಾಗುವುದು. ಈ ಯೋಜನೆಯಲ್ಲಿ ಹೊಸದಾಗಿ ನಿರ್ಮಿಸುವ ಭವನಗಳಿಗೆ ಮಾತ್ರ ಹಣ ಒದಗಿಸಲಾಗುವುದು. ಭವನದ ವೆಚ್ಚ ಗರಿಷ್ಠ ೧೦.೦೦ ಲಕ್ಷ ರೂಪಾಯಿಗಳು ಮಾತ್ರ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ತಾಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕೂಡಿ ಯಾವ ತಾಂಡದಲ್ಲಿ ಸೇವಲಾಲ್ ಸಮುದಾಯ ಭವನ ನಿರ್ಮಿಸಬಹುದೆಂದು ಚರ್ಚಿಸಿ, ಸಮುದಾಯ ಭವನಗಳ ನಿರ್ಮಾಣದ ಅನುಷ್ಠಾನ ಸಮಿತಿಯ ಮುಂದೆ ತಂದು ಅಂತಿಮಗೊಳಿಸಲಾಗುವುದು.

**೩. ಬಂಜಾರ ಭವನ ನಿರ್ಮಾಣ** : ಕರ್ನಾಟಕ ರಾಜ್ಯದ ಸುಮಾರು ಎಲ್ಲಾ ಜಿಲ್ಲೆಗಳಲ್ಲಿ ಈ ಜನತೆ ವಾಸಿಸುತ್ತಿದ್ದಾರೆ ಹಾಗೂ ತಮ್ಮ ತಮ್ಮ ಜಿಲ್ಲೆಗಳಲ್ಲಿಯೂ ಸಹ ತಮ್ಮ ಸಂಸ್ಕೃತಿ, ಕಲೆ, ಸಾಹಿತ್ಯ ಬೆಳೆಸುವುದು. ಆದುದರಿಂದ ಬಂಜಾರ ಭವನ ನಿರ್ಮಾಣವನ್ನು ಬಂಜಾರ/

ಲಂಬಾಣಿ ಜನಸಂಖ್ಯೆ ಹೆಚ್ಚಿಗೆ ವಾಸಿಸುವ ರಾಜ್ಯದ ಜಿಲ್ಲಾ ಕೇಂದ್ರಗಳಲ್ಲಿ ಮಾತ್ರ ಬಂಜಾರ ಭವನವನ್ನು ಜಿಲ್ಲೆಗೆ ತಲಾ ಒಂದರಂತೆ ಗರಿಷ್ಟ ರೂಪಾಯಿ ೨೦೦.೦೦ ಲಕ್ಷದಂತೆ ನಿರ್ಮಾಣ ಮಾಡಲಾಗುತ್ತದೆ.

**ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮ ನಿಯಮಿತ ಇದರ ಮುಖ್ಯ ಉದ್ದೇಶಗಳು**

೧. ಆರ್ಥಿಕ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವುದರ ಮೂಲಕ ತಾಂಡಾದ ನಿವಾಸಿಗಳಿಗೆ ಸ್ವ-ಉದ್ಯೋಗ ಮತ್ತು ಗುಂಪು ಆರ್ಥಿಕ ಚಟುವಟಿಕೆಗಳನ್ನು ನಡೆಸುವುದು ಮತ್ತು ಆದಾಯ ಹೆಚ್ಚಿಸುವ ಚಟುವಟಿಕೆಗಳಾದ ಬಂಜಾರ ಉಡುಪುಗಳ ತಯಾರಿಕೆಯನ್ನು ಈಗಿರುವ ಕೌಶಲ್ಯವನ್ನು ತಂತ್ರಜ್ಞಾನ ಸಹಾಯದಿಂದ ಉನ್ನತೀಕರಿಸುವುದು ಮತ್ತು ಯುವ ಬಂಜಾರರನ್ನು ಮತ್ತು ಫ್ಯಾಶನ್ ವಲಯವನ್ನು ಆಕರ್ಷಿಸುವಂತೆ ಮಾರುಕಟ್ಟೆ ಸ್ಥಾಪಿಸಿ ಈ ಸಮುದಾಯದ ಆರ್ಥಿಕ, ಸಾಮಾಜಿಕ ಸಬಲೀಕರಣ ಸಾಧಿಸುವುದು.

೨. ತಾಂಡಾಗಳಲ್ಲಿ ಹಲವಾರು ತಲೆಮಾರುಗಳಿಂದ ಕಾಪಾಡಿಕೊಂಡು ಬಂದಿರುವ ಸಾಮಾಜಿಕ ವ್ಯವಸ್ಥೆ, ಪದ್ಧತಿಗಳನ್ನು ಉಳಿಸಿ, ಬೆಳೆಸಿ ಬಲಪಡಿಸುವುದು ಹಾಗೂ ಅರಿವಿನ ಮೂಲಕ ತಾಂಡಾದಲ್ಲಿರುವ ಸೇವಾಲಾಲ್ ಮಂದಿರ, ಸಾಂಸ್ಕೃತಿಕ, ಸಾಮಾಜಿಕ ಮತ್ತು ನೈತಿಕ ಮೌಲ್ಯಗಳನ್ನು ಬಿತ್ತುವ ಕೇಂದ್ರಗಳಾಗಿದ್ದು, ಇದರ ಪುನಶ್ಚೇತನಗೊಳಿಸುವುದು ಆದ್ಯ ಕರ್ತವ್ಯವಾಗಿದೆ. ಆದ್ದರಿಂದ ಬಂಜಾರ ಭಾಷೆ ಅಭಿವೃದ್ಧಿ ಮಾಡಲು ಪದಕೋಶ ಸೇರಿದಂತೆ ಲಿಪಿ ಕಂಡು ಹಿಡಿಯುವುದು. ಬಂಜಾರರ ಉಡುಪುಗಳು, ಜನನ, ಮರಣ, ವೈವಾಹಿಕ, ಹಬ್ಬ ಹರಿದಿನಗಳಲ್ಲಿ ಕಾಪಾಡಿಕೊಂಡು ಬಂದಿರುವ ಪದ್ಧತಿಗಳು, ಜೀವನ ಶೈಲಿ, ಸಂಪ್ರದಾಯಗಳು, ಕಲೆ ಮತ್ತು ಸಂಸ್ಕೃತಿ ಹೀಗೆ ಕುಲಸಂಬಂಧಿ ವಿಷಯಗಳ ಕುರಿತು ಸಂಶೋಧನೆ ನಡೆಸಿ ಈ ಸಮುದಾಯದ ಸಮಗ್ರ ಸಾಂಸ್ಕೃತಿಕ ಬದುಕು ಉಳಿಸಿ ಬೆಳೆಸಿಕೊಂಡು ಹೋಗಲು ಬೇಕಾದ ಎಲ್ಲ ಕ್ರಮಗಳನ್ನು ಕೈಗೊಳ್ಳುವುದು.

೩. ತರಬೇತಿ ಮತ್ತು ಕಾರ್ಯಾಗಾರಗಳನ್ನು ಕೈಗೆತ್ತಿಕೊಳ್ಳಲು ಕೇಂದ್ರಗಳನ್ನು ಸ್ಥಾಪಿಸಿ ಬಂಜಾರ ಉಡುಗೆ-ತೊಡುಗೆಗಳಿಗೆ ಆಧುನಿಕ ರೂಪ ನೀಡಲು ಕಸೂತಿ ಕೌಶಲ್ಯಕ್ಕೆ ತಂತ್ರಜ್ಞಾನ ಬಳಸಿಕೊಳ್ಳುವುದು ಮತ್ತು ಬಂಜಾರ ಮಹಿಳೆಯರ ಆದಾಯ ಹೆಚ್ಚಿಸುವಂತೆ ಮಾಡುವುದು.

೪. ಬಂಜಾರರು ತಯಾರಿಸುವ ಉಡುಪುಗಳಿಗೆ ನ್ಯಾಯಯುತ ಬೆಲೆ ಸಿಗುವಂತಾಗಲೂ ವಿವಿಧ ಸ್ಥಳಗಳಲ್ಲಿ ಮಾರುಕಟ್ಟೆ ಸ್ಥಾಪನೆ, ಉತ್ಪಾದಕರಿಗೆ ಬೇಕಾಗುವ ಕಚ್ಚಾವಸ್ತು ಮತ್ತು ಅವುಗಳನ್ನು ಉಪಯೋಗಿಸುವ ಮಾಹಿತಿಗಳು ಸಿಗುವಂತಾಗಬೇಕು. ಉಡುಪುಗಳನ್ನು ರಫ್ತು ಮಾಡುವ ವ್ಯವಸ್ಥೆಯಾಗಬೇಕು.

೫. ತಾಂಡಾಗಳ ಸಮಗ್ರ ಅಭಿವೃದ್ಧಿ ಮತ್ತು ತಾಂಡಾವಾಸಿಗಳ ಸಂಸ್ಕೃತಿ, ಸಂಪ್ರದಾಯ ಉಡುಗೆ-ತೊಡುಗೆ ಹಾಗೂ ಇತರ ಮೌಲ್ಯಾಧಾರಿತ ಸಾಮಾಜಿಕ ಪದ್ಧತಿಗಳ ಆಚರಣೆಗಳು ಬೆಳೆಯುವಂತಾಗಲು ಬೇಕಾದ ಎಲ್ಲ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

೬. ಬಂಜಾರ ಜನಾಂಗಕ್ಕೆ ಸಂಬಂಧಿಸಿದ ಸಂಶೋಧನೆ, ಸಾಹಿತ್ಯ, ಇತಿಹಾಸ, ಒಗಟುಗಳ ಸಂಗ್ರಹ ಮುಂತಾದವುಗಳ ಮುದ್ರಣ ಮತ್ತು ಪ್ರಕಾಶನಕ್ಕೆ ಸಮುದಾಯದ ವ್ಯಕ್ತಿಗಳಿಗೆ ಆರ್ಥಿಕ ಸಹಾಯ ನೀಡುವುದು.

ಹೀಗೆ ಬಂಜಾರ ತಾಂಡಾ ಅಭಿವೃದ್ಧಿ ನಿಗಮವು ಹಲವು ಬಗೆಯ ಸಕ್ರಿಯ ಕೆಲಸಗಳಲ್ಲಿ ತೊಡಗಿದೆ. ಇಲ್ಲಿ ಈ ನಿಗಮವು ಸುಶಿಕ್ಷಿತ ಲಂಬಾಣಿ ಸಮುದಾಯವನ್ನೇ ಹೆಚ್ಚಾಗಿ ಅವಲಂಬಿಸಿದೆ. ಅನಕ್ಷರಸ್ಥ, ಬಡ ಲಂಬಾಣಿಗರು ಮತ್ತು ತಾಂಡಾಗಳ ಅಭಿವೃದ್ಧಿ ಇದರ ಆದ್ಯತೆ ಆದಂತಿಲ್ಲ. ತಾಂಡಾ ಅಭಿವೃದ್ಧಿ ನಿಗಮಕ್ಕೆ ಸರಕಾರದಿಂದ ಮಂಜೂರಾಗುವ ಹಣಕ್ಕೂ ಅದು ಖರ್ಚ ಮಾಡುವ ಹಣಕ್ಕೂ ವ್ಯತ್ಯಾಸವಿದೆ. ತಾಂಡಾ ಅಭಿವೃದ್ಧಿ ನಿಗಮವು ಇನ್ನೂ ಉತ್ತಮವಾದ ಕೆಲಸಗಳನ್ನು ಮಾಡಲು ಸಾಕಷ್ಟು ಅವಕಾಶವಿದೆ. ಆದರೆ ಇಂತಹ ಅವಕಾಶವನ್ನು ಬಳಸಿಕೊಳ್ಳುತ್ತಿಲ್ಲ. ಮುಖ್ಯವಾಗಿ ಲಂಬಾಣಿ ಯುವ ಜನಾಂಗವನ್ನು ಅದರಲ್ಲೂ ಗ್ರಾಮೀಣ ಯುವ ಜನಾಂಗವನ್ನು ಹೆಚ್ಚು ಹೆಚ್ಚು ಒಳಗೊಂಡು ಯೋಜನೆಗಳನ್ನು ರೂಪಿಸಿಕೊಳ್ಳಬೇಕಾಗಿದೆ.

□□□

ಅಧ್ಯಾಯ : ಆರು

# ಸಮಾರೋಪ

ಕರ್ನಾಟಕದ ಪರಿಸರದಲ್ಲಿ ಬದುಕನ್ನು ಕಟ್ಟಿಕೊಂಡಿರುವ ಲಂಬಾಣಿಗರ ಸಾಂಸ್ಕೃತಿಕ ಜೀವನ ಮಹತ್ತರದಾಗಿದೆ. ಅಲೆಮಾರಿತನದ ಬದುಕಿಗೆ ವಿದಾಯ ಹೇಳಿ ನಾಗರಿಕ ಸಮುದಾಯದಂತೆ ಸ್ಥಿರವಾಗಿ ಒಂದು ಕಡೆ ನೆಲೆ ನಿಂತಿದ್ದಾರೆ. ಲಂಬಾಣೇತರ ಸಮುದಾಯ ದಿಂದ ದೂರದಲ್ಲಿ ತಮ್ಮ ನಿವಾಸಗಳನ್ನು ಕಟ್ಟಿಕೊಂಡು ಬದುಕಲು ಪ್ರಾರಂಭಿಸಿರುವರು. ಹೀಗಾಗಿಯೇ ಇವರು ಇಂದಿಗೂ ಕಾಪಾಡಿಕೊಂಡು ಬಂದಿರುವ ಸಮೃದ್ಧವಾದ ಸಾಂಸ್ಕೃತಿಕ ಆಚರಣೆ ಕ್ರಮಗಳು, ಉಡುಗೆ, ತೊಡುಗೆಗಳು ಇತರೆ ಸಮುದಾಯದಿಂದ ಇವರನ್ನು ಭಿನ್ನ ನೆಲೆಯಲ್ಲಿ ಗುರುತಿಸಲು ಸಾಧ್ಯವಾಗಿದೆ. ಕೆಂಪು ಬಣ್ಣದ ಉಡುಗೆ ಇವರಿಗೆ ಬಹು ಪ್ರಿಯವಾದದ್ದು.

ಭಾರತ ದೇಶವು ಬಹುಮುಖಿಯಾದ ವಿವಿಧ ಉಪಸಂಸ್ಕೃತಿಗಳಿಂದ ಕೂಡಿದ ಗಣ್ಯ ದೇಶ. ಇಲ್ಲಿ ಹಲವು ಮತಧರ್ಮದವರು ವಾಸಿಸುತ್ತಿದ್ದಾರೆ. ಅದರಲ್ಲೂ ಜಾತಿ, ಉಪಜಾತಿಗಳು ಹಾಗೂ ವಿವಿಧ ಬುಡಕಟ್ಟು ಜನರಿಗೆ ಆಶ್ರಯದ ತಾಣವಾಗಿದೆ. ಇಂತಹ ಜಾತಿ, ಉಪಜಾತಿಗಳು ಮತ್ತು ಬುಡಕಟ್ಟು ಜನಾಂಗಗಳು ತಮ್ಮದೇ ಆದ ಆಚಾರ ವಿಚಾರಗಳನ್ನು ಹೊಂದಿದ್ದು ವೈವಿಧ್ಯಮಯವಾದ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬಂದಿವೆ.

ಕರ್ನಾಟಕ ರಾಜ್ಯವೂ ಕೂಡ ಈ ಮೇಲಿನ ಮತಪಂಥಗಳ ಸಾಂಸ್ಕೃತಿಕ ಪ್ರತಿರೂಪವೆನಿಸಿದೆ. ಅನೇಕ ಸಮುದಾಯಗಳು ತಮ್ಮದೇ ಆದ ವಿಶಿಷ್ಟ ರೀತಿಯ ಪರಿಧಿಯಲ್ಲಿ ಬದುಕನ್ನು ಕಟ್ಟಿಕೊಂಡಿವೆ. ಆಯಾ ಸಮುದಾಯಗಳಲ್ಲಿ ವೃತ್ತಿ, ಕಲೆ, ಸಾಹಿತ್ಯ, ಧಾರ್ಮಿಕತೆ, ಸಾಮಾಜಿಕತೆ ಮುಂತಾದ ವಿಭಿನ್ನ ಮಾದರಿಯ ಮುಖಗಳು ಅನಾವರಣಗೊಂಡಿವೆ. ಸಂಸ್ಕೃತಿಯ ಬೇರುಗಳು ಅನೇಕ ಬಗೆಯ ಜೀವನ ಕ್ರಮಗಳು

ಸಮ್ಮಿಲನಗೊಂಡಿವೆ. ಈ ಎಲ್ಲಾ ಅಂಶಗಳು ಮೇಲ್ನೋಟಕ್ಕೆ ಒಂದೇ ರೀತಿಯಿಂದ ಕಂಡುಬಂದರೂ ಸೂಕ್ಷ್ಮವಾಗಿ ಅವಲೋಕಿಸಿದರೆ ಅವುಗಳ ಒಳಗೆ ಹಲವು ರೂಪಗಳು ಗೋಚರಿಸುತ್ತವೆ. ಅಕ್ಷರ ಲೋಕದಿಂದ ಇತ್ತೀಚೆಗೆ ಸಮಾಜದ ಮುಖ್ಯವಾಹಿನಿಗೆ ಕಾಲಿರಿಸುತ್ತಿರುವ ಲಂಬಾಣಿ ಸಮಾಜವು ತಮ್ಮದೇ ಆದ ಚೌಕಟ್ಟಿನಲ್ಲಿ ಬದುಕುತ್ತಿವೆ. ಸಮಾಜವಿಜ್ಞಾನಿಗಳು, ಚಿಂತಕರು ಹಾಗೂ ವಿದ್ವಾಂಸರು ಈ ಸಮುದಾಯದ ಮೇಲೆ ಹಲವು ಬಗೆಯ ಸಂಶೋಧನೆಯನ್ನು ನಡೆಸಿದ್ದಾರೆ.

ಕರ್ನಾಟಕದ ಬುಡಕಟ್ಟು ಸಮುದಾಯವಾದ ಲಂಬಾಣಿಗರು ಸಂಸ್ಕೃತೀಕರಣದ ಪ್ರಭಾವಕ್ಕೆ ಒಳಗಾಗಿದ್ದಾರೆ. ಅಲ್ಲದೆ ಈ ಸಮುದಾಯ ತಮ್ಮ ಮೂಲಸಂಸ್ಕೃತಿಯ ಅಂಶಗಳನ್ನು ಉಳಿಸಿ ಬೆಳೆಸಿಕೊಳ್ಳುವಲ್ಲಿ ಹರಸಾಹಸ ಮಾಡುತ್ತಿವೆ. ತಮ್ಮ ಅನನ್ಯತೆಯನ್ನು ಉಳಿಸಿಕೊಂಡು ಬಂದಿರುವ ಈ ಸಮುದಾಯವು ಊರುಗಳಿಂದ ದೂರದಲ್ಲಿ ತಾಂಡಾ, ಹಟ್ಟಿಗಳ ರೂಪದ ತಮ್ಮ ನೆಲೆಯನ್ನು ಕಟ್ಟಿಕೊಂಡು ಬದುಕುತ್ತಿವೆ. ಇವರು ತಮ್ಮ ಜೀವನವನ್ನು ಎಂದು ಆರಂಭಿಸಿದರೋ ಅಂದಿನಿಂದಲೇ ಇವರ ಬದುಕಿನ ರೀತಿ, ನೀತಿ, ಜೀವನ ಶೈಲಿಗಳು ಬೇರೆಯಾದವು.

ಭೌತಿಕ ವಿಕಾಸವಾದಂತೆ ಮಾನವನ ಬೌದ್ಧಿಕ ಮಟ್ಟದಲ್ಲೂ ಅಪಾರ ಪ್ರಮಾಣದ ಬದಲಾವಣೆಗಳು ಕಂಡುಬಂದವು. ಅವು ಅವರ ಜೀವನಕ್ರಮದಲ್ಲಿನ ಬದಲಾವಣೆಗೆ ಕಾರಣವಾದವು. ಅಲೆಮಾರಿ ಬದುಕಿಗೆ ವಿದಾಯ ಹೇಳಿದರೂ ಸಹ ಈ ಜನಾಂಗವು ಗುಳೆ ಹೋಗುವ ಪದ್ಧತಿಯನ್ನು ಇನ್ನೂ ನಿಲ್ಲಿಸಲಿಲ್ಲ. ಕಾರಣ ಉತ್ತರ ಕರ್ನಾಟಕದ ಲಂಬಾಣಿಗರಿಗೆ ಕೃಷಿ ಭೂಮಿಯ ಕೊರತೆ, ಕಡಿಮೆ ಕೂಲಿ, ಮಳೆಯ ಅನಿಶ್ಚಿತತೆ ಹೀಗೆ ಅನೇಕ ಕಾರಣಗಳಿಂದ ಈ ಜನ ಬೇರೊಂದೂರಿಗೆ ವಲಸೆ ಹೋಗುತ್ತಿವೆ. ಇವುಗಳಿಂದ ಸಹಜವಾಗಿಯೇ ತಮ್ಮ ಮೂಲ ಸಾಂಸ್ಕೃತಿಕ ಅಂಶಗಳಲ್ಲಿ ಕೆಲವೊಂದು ಬದಲಾವಣೆಗಳು ಗೋಚರಿಸುತ್ತವೆ. ಉಡುಗೆ, ತೊಡುಗೆ, ಆಹಾರಕ್ರಮ ಹಾಗೂ ಆಚರಣೆ ಪದ್ಧತಿಯಲ್ಲಿ ಭಿನ್ನತೆ ಗೋಚರಿಸುತ್ತವೆ. ಆಧುನಿಕತೆಯ ಪ್ರಭಾವದ ಅಡಿಯಲ್ಲಿ ಸಿಲುಕಿದ ಈ ಸಮುದಾಯವು ಬದಲಾವಣೆಯ ಹೊಸ್ತಿಲಲ್ಲಿ ನಿಂತಿದೆ.

ಲಂಬಾಣಿಗರು ಉತ್ತರ ಭಾರತದಿಂದ ಸುಮಾರು ೪೦೦ ವರ್ಷಗಳ ಹಿಂದೆ ಮೊಘಲರ ಸೇನೆಯೊಂದಿಗೆ ದಕ್ಷಿಣ ಭಾರತದ ಕಡೆಗೆ ಬಂದಿರುವ ಬಗೆಗೆ ಕೆಲವೊಂದು ಉಲ್ಲೇಖಗಳಿವೆ. ಇವರು ಸುಮಾರು ದಿನಗಳವರೆಗೆ ಅಲೆಮಾರಿ ಬದುಕನ್ನು ಕಳೆದಿದ್ದಾರೆ. ತಮ್ಮ ವಿಶಿಷ್ಟ ಮಾದರಿಯ ಉಡುಗೆ ತೊಡುಗೆಯಿಂದ ಭಾರತದಾದ್ಯಂತ ಹರಡಿಕೊಂಡು ಬದುಕುವ ಮಹತ್ತರವಾದ ಸಮುದಾಯವು ಇದಾಗಿದೆ. ಲಂಬಾಣಿಗರ ಉಡುಗೆ ತೊಡುಗೆಗಳನ್ನು ಕುರಿತು ಪ್ರಧಾನಿ ದಿ. ಶ್ರೀಮತಿ ಇಂದಿರಾಗಾಂಧಿ ಅವರು ಪಿತಾಂಬರದಲ್ಲಿ ಥಳಥಳಿಸುವ

ಜರಿಯ ಎಳೆಗಳಂತೆ ಬಂಜಾರಾ ಬುಡಕಟ್ಟು ಭಾರತೀಯ ಜನಜೀವನದಲ್ಲಿ ಎದ್ದುಕಾಣುವುದು. ಮರುಜನ್ಮವಿದ್ದರೆ, ಬಂಜಾರಾ ಕುಲನಾರಿಯಾಗಿ ಜೀವಿಸಲು ನಾನು ಇಚ್ಛಿಸುತ್ತೇನೆ ಎಂದು ಹೇಳಿರುವುದನ್ನು ಗಮನಿಸಿದರೆ ಈ ಬುಡಕಟ್ಟಿನವರು ಶ್ರಮಜೀವಿಗಳು ಮತ್ತು ಮಹಿಳೆಯರ ರಂಗುರಂಗಿನ ವೇಷಭೂಷಣಗಳು ಅವರಿಗೆ ಚಿತ್ತಾಕರ್ಷಕವಾಗಿ ಕಂಡಿರಬೇಕು.

ಹೀಗೆ ಲಂಬಾಣಿಗರ ಉಡುಗೆ ತೊಡುಗೆಯ ಬಗೆಗೆ ತುಂಬಾ ಸಂತೋಷಪಟ್ಟು ಅವುಗಳ ಕುರಿತು ಗುಣಗಾನ ಮಾಡಿದ ಮಹಾನ್ ವ್ಯಕ್ತಿಗಳು ಚರಿತ್ರೆಯಲ್ಲಿ ಕಂಡುಬರುವರು. ವಿವಿಧ ಮಾದರಿಯ ಬಣ್ಣದ ಬಟ್ಟೆಯನ್ನು ಬಳಸುವ ಇವರು ಹೆಚ್ಚಾಗಿ ಕೆಂಪು ಹಾಗೂ ಗುಲಾಬಿ ಬಣ್ಣದ ಬಟ್ಟೆಯನ್ನು ಹೆಚ್ಚು ಆಕರ್ಷಕವಾಗಿ ಕಾಣುವಂತೆ ಉಡುವರು. ಉಡುಗೆಗಳಿಗೆ ಅವರು ಬಳಸುವ ಕನ್ನಡಿಯನ್ನು ಬಟ್ಟೆಗೆ ಜೋಡಿಸಿ ಕಸೂತಿ ಹಾಕುವರು. ಇವರ ಕುಸುರಿ ಕೆಲಸ ಅತ್ಯಂತ ಸೂಕ್ಷ್ಮಮಾದರಿಯದಾಗಿದೆ. ಈ ಕೆಲಸ ಮಾಡಲು ವೇಳೆ ಹಾಗೂ ತಾಳ್ಮೆ ಮುಖ್ಯವಾಗಿ ಬೇಕಾಗುತ್ತದೆ. ಪುರುಷರ ಉಡುಪುಗಳು ಅಷ್ಟೊಂದು ಪ್ರಮುಖವಾಗಿ ಕಾಣಲಾರದು. ಇವರು ತಲೆಗೆ ಸುತ್ತುವ ಪೇಟಾ ಒಂದನ್ನು ಬಿಟ್ಟರೆ ಮತ್ತೆ ವಿಶೇಷವಾಗಿ ಏನೂ ಹೇಳಲಿಕ್ಕಾಗದು. ಆದರೆ ಉಡುಗೆ ತೊಡುಗೆಯಲ್ಲಿ ಮಹಿಳೆಯರೇ ಪ್ರಧಾನರಾಗಿ ನಮಗೆ ಗೋಚರಿಸುತ್ತಾರೆ. ಇವರು ಉಡುವ ಲಂಗಾ(ಫೇಟಿಯ), ಕುಪ್ಪಸ(ಕಾಂಚಳಿ), ಮೆಲ್ಮುಸುಕು(ಛಾಟೀಯ)ಗಳು ಮಹತ್ತರ ಉಡುಗೆಗಳಾಗಿವೆ. ಇವುಗಳನ್ನು ತೊಟ್ಟು ಹೊರಗಡೆ ಹೋದರೆ ದೇವತೆಯ ರೂಪದ ಮಹಿಳೆಯಾಗಿ ಕಂಡುಬರುವಳು.

ಅಷ್ಟು ಆಕರ್ಷಕವಾದ ವಸ್ತ್ರವು ವೈವಿಧ್ಯಮಯ ಮಾದರಿಯ ಕಸೂತಿ ಕಲೆಯಿಂದ ಕೂಡಿರುತ್ತದೆ. ಈ ಬಟ್ಟೆಗಳ ಮೇಲೆ ಗಾಜಿನ ಬಿಲ್ಲೆ(ಕಾಚೆ), ತವರ ತಗಡಿನ ಗುಂಡಿ(ಪತಡಿ), ಕವಡೆ(ಕೋಡಿ) ವಿವಿಧ ಬಣ್ಣದ ದಾರದ ಗುಂಚು(ಪುಂದಾ), ರಾಂಗ್‌ಪಾರಿ ಹೀಗೆ ವಿವಿಧ ವಸ್ತುಗಳನ್ನು ಬಟ್ಟೆಗಳ ಮೇಲೆ ಜೋಡಿಸಿ ಕಸೂತಿ ಹಾಕುವರು ತಮ್ಮ ಉಡುಗೆಗಳ ಮೇಲೆ ಹಾಕುವ ವಿವಿಧ ವಿನ್ಯಾಸದ ಕಸೂತಿಯನ್ನು ಅನೇಕ ಹೆಸರುಗಳಿಂದ ಕರೆಯುವರು. ರೆಲೊ ಅಥವಾ ರೇಲೆ, ತೂನ್, ಪೂಲ್, ಕಲ್ಲೇಣಿ, ಬಕ್ಯ, ಚೇಣ್, ಗಾಡ್ರೆ, ಖಿಲಣ್, ಅಲ್ಲಿ ಹಾಗೂ ಪೋಟೆ ಇವು ಕಸೂತಿಯ ಮಾದರಿಯಾಗಿವೆ. ಇವುಗಳಿಂದ ಬಟ್ಟೆಗಳ ಮೇಲೆ ವಿವಿಧ ವಿನ್ಯಾಸದ ಮಾದರಿಯಲ್ಲಿ ಕೈಯಿಂದಲೇ ಹೆಣೆಯುವರು. ಹೀಗಾಗಿಯೆ ಇವರ ಉಡುಗೆಗಳು ಶ್ರಮ ಮತ್ತು ಮಾನಸಿಕ ತಾಳ್ಮೆಯನ್ನು ಬಯಸುತ್ತವೆ. ಅಲ್ಲದೆ ಈ ಸಮುದಾಯದ ಮಹಿಳೆಯರು ತೊಡುವ ತೊಡುಗೆ ಸಹ ಮಹತ್ವದ ಸ್ಥಾನವನ್ನು ಹೊಂದಿವೆ. ಇವರಲ್ಲಿ ಒಬ್ಬ ಮಹಿಳೆ ಸುಮಾರು ೧೦ರಿಂದ ೧೨ ಕೆ.ಜಿ. ತೂಕದ ಒಡವೆಯನ್ನು ತಮ್ಮ ಮೈ ಮೇಲೆ ಹಾಕಿಕೊಳ್ಳುವಳು. ಅಡಿಯಿಂದ ಮುಡಿಯವರೆಗೆ ಹಲವು ವಿಧದ ಆಭರಣಗಳನ್ನು ತೊಡುವರು. ಬೆಳ್ಳಿ, ಸತು, ತಾಮ್ರ ಹಾಗೂ ಜರ್ಮನ್

ಸಿಲ್ವರ್‌ನಿಂದ ತಯಾರಿಸಿದ ಆಭರಣಗಳು ಇವರ ಮೈ ಮೇಲೆ ಕಂಗೊಳಿಸುತ್ತವೆ. ಇವರು ತಲೆಕೂದಲಿಗೆ, ಕಿವಿ, ಮೂಗು, ಕೊರಳು, ಕಾಲು, ಬೆರಳು, ಅಂಗೈಯಿಂದ ಮುಂಗೈತನಕ ಆಭರಣವನ್ನು ಹಾಕಿರುತ್ತಾರೆ. ವಿದ್ವಾಂಸರಾದ ಎಡ್ಗರ್ ಥರ್ಸ್ಟನ್ ಅವರು ಇವರ ವೇಷಭೂಷಣ, ಉಡುಗೆ ತೊಡುಗೆಯನ್ನು ಕುರಿತು ಹೀಗೆ ಹೇಳುತ್ತಾರೆ.

ಲಂಬಾಣಿ ಮಹಿಳೆಯರಿಗೆ ಅವರ ಕಸೂತಿ ಕಲೆಯು ವಂಶಪರಂಪರೆಯಿಂದ ಬಂದ ಕಲೆಯಾಗಿದೆ. ಹೀಗಾಗಿ ಇವರಿಗೆ ಈ ಕಲೆ ರಕ್ತಗತವಾಗಿ ಬಂದಂತಾಗಿದೆ. ಹೆಣ್ಣು ಮಕ್ಕಳು ಚಿಕ್ಕವರಿರುವಾಗಲೇ(ಹತ್ತು ವರ್ಷದ ಮೇಲ್ಪಟ್ಟು) ತಾಯಿಯೊಂದಿಗೆ ಕಸೂತಿ ಕಲೆಯಲ್ಲಿ ಸಹಾಯಕಳಾಗಿ ನಿಲ್ಲುವಳು. ಮುಂದೆ ತನ್ನ ಮದುವೆಗೆ ಬೇಕಾಗುವ ಹೊಸ ಉಡುಪಲ್ಲಿ ಅರ್ಧದಷ್ಟು, ಕೆಲವೊಮ್ಮೆ ಪೂರ್ಣ ಪ್ರಮಾಣದ ಕೆಲಸವನ್ನು ತಾನೆ ಮಾಡಿ ಮುಗಿಸುವಳು. ಆದರೆ ಪ್ರಸ್ತುತ ಸಂದರ್ಭದಲ್ಲಿ ಈ ಕಸೂತಿ ಹಾಕುವ ವ್ಯವಸ್ಥೆ ಹೆಣ್ಣು ಮಕ್ಕಳಿಂದ ದೂರವಾಗುತ್ತಿದೆ. ಮದುವೆಯ ಪೂರ್ವದಲ್ಲಿ ಹುಡುಗಿಯರ ಬಟ್ಟೆಯೇ ಬೇರೆಯಾಗಿರುತ್ತಿತ್ತು. ಈ ವೇಳೆಯಲ್ಲಿ ಲಂಗ, ಪೊಲ್ಕ ಹಾಗೂ ಓಡ್ನಿ ಇರುತ್ತವೆ. ಮದುವೆ ಆದ ನಂತರ ಇವರು ಲಂಬಾಣಿ ಉಡುಗೆ ತೊಡುಗೆ ಧರಿಸುವರು. ಇದು ಶಾಶ್ವತವಾದ ಉಡುಗೆಯಾಗಿತ್ತು. ಆದರೆ ಈ ಸಮುದಾಯದ ಮಹಿಳೆಯರು ನಾಗರಿಕತೆಯ ಸಂಪರ್ಕಕ್ಕೆ ಒಳಗಾಗಿ ತಮ್ಮ ಮೂಲ ಉಡುಗೆ ತೊಡುಗೆಯಿಂದ ದೂರ ಉಳಿಯಲು ಪ್ರಯತ್ನಿಸುತ್ತಿದ್ದಾರೆ.

ಆಧುನೀಕರಣದ ಪರಿಣಾಮ ಟಿ.ವಿ. ಮಾಧ್ಯಮದಂತಹ ಸಮೂಹ ಮಾಧ್ಯಮದ ಪ್ರಭಾವ, ಶೈಕ್ಷಣಿಕ ಪ್ರಗತಿ ಹಾಗೂ ಮುಂದುವರೆದ ನಾಗರಿಕತೆಯ ಅನುಕರಣೆಯಿಂದ ತಮ್ಮ ಮೂಲ ಪರಂಪರೆಯ ಸಾಂಸ್ಕೃತಿಕ ಬದುಕಿನಿಂದ ಈಗಿನ ಪೀಳಿಗೆ ಹೊರಬರಲು ಯತ್ನಿಸುತ್ತಿವೆ. ಲಂಬಾಣಿಗರು ಮೊದಲಿನಿಂದಲೂ ಅಲಂಕಾರಪ್ರಿಯರು. ಕಾಡಿನ ಹಕ್ಕಿಗಳಂತೆ ತಮ್ಮ ಬದುಕನ್ನು ಕಳೆದ ಇವರು ತಮ್ಮ ಮೈಯನ್ನು ಅನೇಕ ರೀತಿಯಲ್ಲಿ ಅಲಂಕರಿಸಿ ಕೊಳ್ಳುತ್ತಿದ್ದರು. ತಾವು ಸುಂದರವಾಗಿ ಕಾಣಿಸಿಕೊಳ್ಳಲು ಉಡುಗೆ ತೊಡುಗೆಯಂತೆ ವಿವಿಧ ಮಾದರಿಯ ಚಿತ್ರಗಳನ್ನು ಹಚ್ಚೆಯ ಮೂಲಕ ಮೈ ಮೇಲೆ ಹುಯ್ಯಿಕೊಳ್ಳುತ್ತಿದ್ದರು. ಸರ್ವೇ ಸಾಮಾನ್ಯವಾಗಿ ಎಲ್ಲಾ ಆದಿವಾಸಿ ಬುಡಕಟ್ಟುಗಳು ಹಚ್ಚೆಯ ಮೊರೆ ಹೋಗಿವೆ. ಹೀಗಾಗಿ ಬುಡಕಟ್ಟು ಸಮುದಾಯವಾದ ಲಂಬಾಣಿ ಹೆಣ್ಣು ಮಕ್ಕಳಿಗೆ ಹಚ್ಚೆಯು ಸೌಂದರ್ಯ ಸಾಧನವಾದಂತೆ ಅವರಿಗೆ ಶ್ರೀಮಂತಿಕೆಯ ಸಂಕೇತವೂ ಆಗಿದೆ. ಇಂತಹ ಶ್ರೀಮಂತಿಕೆಯ ಸಂಕೇತವಾದ ಲಂಬಾಣಿಗರ ಸಂಸ್ಕೃತಿಯನ್ನು ಉಳಿಸಿ ಬೆಳಸಬೇಕಾದದ್ದು ಇಂದಿನ ಪೀಳಿಗೆಯ ಆದ್ಯ ಕರ್ತವ್ಯವಾಗಿದೆ. ಹೀಗಾಗಿ ಲಂಬಾಣಿಗರ ಸಂಸ್ಕೃತಿಯನ್ನು ಕುರಿತು

ಅಧ್ಯಯನ ಮಾಡಲು ಸಂಶೋಧಕರಿಗೆ ಹಲವಾರು ಮಾರ್ಗಗಳಿವೆ. ಅವುಗಳ ಮೂಲಕ ಸಮುದಾಯದ ಮಹತ್ವದ ಅಂಶಗಳನ್ನು ಹೊರತೆಗೆಯುವುದು ಇಂದು ಅವಶ್ಯಕವಾಗಿದೆ.

**ಅಧ್ಯಯನದ ಫಲಿತಗಳು**

೧. ಪ್ರಸ್ತುತ ಈ ಅಧ್ಯಯನವು ಲಂಬಾಣಿ ಸಮುದಾಯದ ಕರಕುಶಲ ಕಲೆಗಳ ಭಾಗವನ್ನು ಅವಲಂಬಿಸಿದೆ. ಹಾಗಾಗಿ ಒಂದು ಸಮುದಾಯವನ್ನು ಅಧ್ಯಯನ ಮಾಡಿ ಸಾರ್ವತ್ರಿಕ ಎನ್ನುವ ಹೇಳಿಕೆ ನೀಡುವ ಬದಲು ಆ ಸಮುದಾಯದ ಒಳಗಿರುವ ಸೂಕ್ಷ್ಮ ವಿವರಗಳ ಮೂಲಕ ಲಂಬಾಣಿಗರ ವರ್ತಮಾನದ ಬದುಕಿನ ಸಂಕೀರ್ಣತೆಯನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

೨. ರಕ್ತಗತವಾಗಿ ಲಂಬಾಣಿ ಮಹಿಳೆಯರಿಗೆ ಉಸಿರಾಗಿ ಬಂದಿರುವ ಈ ಕಸೂತಿ ಕಲೆಯ ಅಳಿವು-ಉಳಿವಿನ ಕುರಿತಾಗಿ ಸಮುದಾಯದವರಲ್ಲಿ ಜಾಗೃತಿ ಮೂಡಿಸುವಿಕೆ ಮಹತ್ವದ ಅಂಶವಾಗಿದೆ.

೩. ಲಂಬಾಣಿ ಮಹಿಳೆಯರು ತೊಡುವ ತೊಡುಗೆಗಳ ಕುರಿತ ಸೂಕ್ತ ಮಾಹಿತಿಯನ್ನು ಅಧ್ಯಯನದಲ್ಲಿ ಚರ್ಚಿಸಿದೆ. ಅಲ್ಲದೆ ತೊಡುಗೆಯನ್ನು ಮಾಡುವ ಲಂಬಾಣಿಗರಲ್ಲೇ ಉಪಪಂಗಡವಾದ ಸನಾರ್(ಅಕ್ಕಸಾಲಿಗ) ಅವರು ಆಭರಣಗಳನ್ನು ತಯಾರಿಸುವ ಬಗೆಗೆ ಮಾಹಿತಿಯನ್ನು ಅಧ್ಯಯನದಲ್ಲಿ ನೀಡಲಾಗಿದೆ.

೪. ಲಂಬಾಣಿಗರ ಕರಕುಶಲ ಕಲೆಯನ್ನು ಒಂದು ಪ್ರವೃತ್ತಿಯ ರೂಪದಲ್ಲಿ ಇಂದಿಗೂ ಲಂಬಾಣಿಗರಲ್ಲಿ ಜೀವಂತಿಕೆ ಪಡೆದುಕೊಂಡಿದೆ. ಆದರೆ ಜೀವಂತಿಕೆ ಪಡೆದಿರುವ ಈ ಕಲೆಯ ಕುರಿತಾಗಿ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು ಇವುಗಳನ್ನು ಉಳಿಸಲು ಬಹುಮುಖ್ಯ ಪಾತ್ರ ವಹಿಸಬೇಕಾಗಿದೆ.

೫. ಲಂಬಾಣಿ ಸಮುದಾಯದಲ್ಲಿ ಇಂದಿಗೂ ಉಳಿದುಕೊಂಡಿರುವ ಕಲಾಮಾಧ್ಯಮ ಕಸೂತಿ. ಅವರು ಆಧುನಿಕ ಬದುಕನ್ನೂ ಎದುರಿಸಲು ಸಹ ಈ ಮಾಧ್ಯಮ ಸಹಕಾರಿಯಾಗಿ ಹೊಸ ಉತ್ಸಾಹವನ್ನು ಕೊಟ್ಟಿರುವುದು ಈ ಅಧ್ಯಯನದಿಂದ ತಿಳಿದಿದೆ.

೬. ಲಂಬಾಣಿ ಕಲೆಯಲ್ಲಿ ವಿಶೇಷವಾಗಿ ಮಹಿಳೆಯರೇ ಹೆಚ್ಚು ಭಾಗಿಯಾಗುವುದರ ಹಿನ್ನೆಲೆ, ಹಿಂದೆ ಲಂಬಾಣಿ ಪುರುಷರು ಹೆಚ್ಚು ದೈಹಿಕ ಶ್ರಮ ಬಯಸುವ ಕೆಲಸಕ್ಕೆ ಹೋಗುವುದರಿಂದ ಮಹಿಳೆ ಮನೆಯಲ್ಲೇ ಇದ್ದುಕೊಂಡು ಕಡಿಮೆ ಶ್ರಮ ಬಯಸುವ ಮತ್ತು ಬುದ್ಧಿ ಸೂಕ್ಷ್ಮತೆಯನ್ನು ಬಯಸುವ ಕಲಾ ಪ್ರಕಾರದಲ್ಲಿ ತೊಡಗಿಕೊಂಡಿರುವುದು ಈ ಅಧ್ಯಯನದಿಂದ ತಿಳಿದಿದೆ.

೭. ಲಂಬಾಣಿಯ ಕಲೆಯಲ್ಲಿ ಪ್ರಾದೇಶಿಕ ವಿಶಿಷ್ಟತೆಯ ಪರಕು ಉಳಿದುಕೊಂಡಿದೆ. ಇದು ವಾಸ್ತವವಾಗಿ ಮನೆಗಳಲ್ಲಿ ಮಾಡುವ ಕರಕುಶಲ ಕಲೆಗಳಲ್ಲಿ ಈ ಬಗೆಯ ಪ್ರಾದೇಶಿಕ ಕಲೆಯ ಫರಕು ಉಳಿದಿದೆ. ಉದಾಹರಣೆಗೆ, ಬಿಜಾಪುರ ಭಾಗದಲ್ಲಿ ಲಂಬಾಣಿಗರ ಕಸೂತಿಯಲ್ಲಿ ಸೂಕ್ಷ್ಮವಾಗಿ ಬಿದರಿ ಕಲೆಯ ಪ್ರಭಾವ ಕಾಣುತ್ತದೆ. ಇಂದು ಕರಕುಶಲ ಕೇಂದ್ರಗಳು ಅದರಲ್ಲೂ ಸಂಡೂರು ಮತ್ತು ಬಿಜಾಪುರದ ಕೇಂದ್ರಗಳು ಒಂದೇ ಮಾದರಿಯ ಲಂಬಾಣಿ ಕಲೆಯನ್ನು ಉತ್ತೇಜಿಸುತ್ತಿವೆ. ಹಾಗಾಗಿ ಲಂಬಾಣಿ ಸಮುದಾಯದ ಕರಕುಶಲ ಕೇಂದ್ರಗಳಲ್ಲಿ ಲಂಬಾಣಿ ಸಮುದಾಯದ ಪ್ರಾದೇಶಿಕ ಭಿನ್ನತೆಯನ್ನು ಇಲ್ಲವಾಗುತ್ತಿವೆ. ಇದು ಜಾಗತಿಕ ಮಾರುಕಟ್ಟೆಯ ಪ್ರಭಾವವೂ ಹೌದು.

೮. ಕರ್ನಾಟಕದ ಲಂಬಾಣಿಗರ ಜನಜೀವನದ ಪದ್ಧತಿಯು ಅವರ ಕಲೆಯ ಭಾಗವಾಗಿ ಅಭಿವ್ಯಕ್ತಿಯಾಗಿರುವುದು ಕಂಡುಬರುತ್ತದೆ. ಉದಾಹರಣೆಗೆ, ಕಸೂತಿಗೆ ಬಳಸುವ ಬಟ್ಟೆ ಸಾಮಾನುಗಳು ತೀರಾ ಕಡಿಮೆ ಬೆಲೆಯಲ್ಲಿ ಕೊಂಡುಕೊಳ್ಳಲಾಗುತ್ತದೆ. ಅಂತೆಯೇ ಹಳೆಯ ಬಟ್ಟೆಗಳನ್ನು ಕಸೂತಿಗೆ ಬಳಸುವಿಕೆಯೂ ಈ ಭಾಗದ ಬಡತನದ ಸ್ಥಿತಿಯನ್ನು ತೋರಿಸುತ್ತದೆ.

೯. ನಮ್ಮ ಕಲಾಪ್ರಕಾರಗಳ ಅಧ್ಯಯನ ವಿಧಾನದಿಂದ ಲಂಬಾಣಿ ಕಲೆಯನ್ನು ಅಧ್ಯಯನ ಮಾಡುವುದರಿಂದ ಹೆಚ್ಚು ಲಾಭವಾಗದು. ಹಾಗಾಗಿ ಲಂಬಾಣಿ ಕಲಾ ಪ್ರಕಾರವನ್ನು ಅಧ್ಯಯನ ಮಾಡುವ ಕಾರಣಕ್ಕೆ ಅವರ ವರ್ತಮಾನದ ಬದುಕಿನ ನೆಲೆಯಲ್ಲಿ ಅಧ್ಯಯನ ವಿಧಾನವನ್ನು ರೂಪಿಸಿಕೊಳ್ಳಬೇಕಾಗಿದೆ.

೧೦. ಕರ್ನಾಟಕದಲ್ಲಿರುವ ಲಂಬಾಣಿ ಕರಕುಶಲ ಕೇಂದ್ರಗಳು ಈ ಸಮುದಾಯದ ಕಲೆಯನ್ನು ಹೇಗೆ ಉಳಿಸುತ್ತಿವೆ ಎಂಬುದನ್ನು ತಿಳಿಯಲಾಗಿದೆ. ಈ ಕರಕುಶಲ ಕೇಂದ್ರಗಳು ಜಾಗತಿಕ ಮಾರುಕಟ್ಟೆಯ ಭಾಗವಾಗಿ ತಮ್ಮ ಕಲಾಪ್ರಕಾರದ ಡಿಸೈನುಗಳನ್ನು ನಿರ್ದೇಶಿಲಾಗುತ್ತಿದೆ. ಅಂತೆಯೇ ಲಂಬಾಣಿಗರ ಸಾಂಪ್ರದಾಯಿಕ ಕೌಶಲ್ಯಗಳನ್ನು ಬಳಸಿಕೊಂಡು ಅವರಿಂದ ಹೊಸತೆರನಾದ ಪ್ರಕಾರಗಳನ್ನು ಮಾಡಿಸುತ್ತಿದ್ದಾರೆ. ಈ ಕರಕುಶಲ ಕೇಂದ್ರಗಳಿಗೆ ಹೋಗುವ ಲಂಬಾಣಿ ಮಹಿಳೆಯರ ಬದುಕಿನಲ್ಲಿ ಆದ ಬದಲಾವಣೆಗಳನ್ನು ಗುರುತಿಸಲಾಗಿದೆ. ಮುಖ್ಯವಾಗಿ ಹೀಗೆ ಕರಕುಶಲ ಕೇಂದ್ರಗಳಿಗೆ ಹೋಗುವ ಮಹಿಳೆಯರು ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳಿಸಿ ವಿದ್ಯಾವಂತರನ್ನಾಗಿ ಮಾಡುತ್ತಿದ್ದಾರೆ. ಅಂತೆಯೇ ಆಂಶಿಕವಾಗಿ ದುಷ್ಪರಿಣಾಮವೂ ಆಗಿದೆ. ಕಲಿತ ವಿದ್ಯಾವಂತ ಮಹಿಳೆಯರು ಈ ಕಸೂತಿ ಕಲೆಯ ಕಡೆ ಬಹಳಷ್ಟು ಮಂದಿ ಮುಖ ಮಾಡುತ್ತಿಲ್ಲ. ಕೆಲವರಲ್ಲಿ ಲಂಬಾಣಿ ಹೆಣ್ಣುಮಕ್ಕಳ ಗಂಡಂದಿರು ಹೆಂಡತಿ ದುಡಿಯುವುದರಿಂದ ತಾನು ಸೋಮಾರಿಯಾಗಿ ಹೆಂಡತಿಯ

ಹಣವನ್ನೂ ಸುಲಿಗೆ ಮಾಡಿ ಹೆಂಡ ಸಾರಾಯಿಗೆ ತೆರುತ್ತಿರುವುದು ಕಂಡುಬಂದಿದೆ. ಈಗ ಈ ಸಂಖ್ಯೆ ವಿರಳವಾಗಿದೆ.

೧೧. ಲಂಬಾಣಿ ಬುಡಕಟ್ಟಿನ ಕಲಾಪ್ರಕಾರ ಅವರ ಬದುಕಿನ ಆರ್ಥಿಕ ಮೂಲವಾಗಿದ್ದು ನಿಜಕ್ಕೂ ಈ ಸಮುದಾಯದ ಕಲೆಯ ಪ್ರಸ್ತುತತೆಯನ್ನು ಕಾಣಿಸುತ್ತದೆ. ಹಾಗಾಗಿ ಈ ಬಗೆಯ ಲಂಬಾಣಿ ಕರಕುಶಲ ಕೇಂದ್ರಗಳನ್ನು ಜನಸಂಖ್ಯಾವಾರು ಇನ್ನು ಹೆಚ್ಚಿಸುವ ಅಗತ್ಯವಿದೆ.

೧೨. ಕರ್ನಾಟಕದಲ್ಲಿ ತಾಂಡಾಗಳ ಅಭಿವೃದ್ಧಿ ನಿಗಮವನ್ನು ಸರಕಾರ ಸ್ಥಾಪನೆ ಮಾಡಿದೆ. ಅಂತೆಯೇ ಕರ್ನಾಟಕದಾದ್ಯಂತ ಬಂಜಾರ ಯುವಕರ ಸಂಘಗಳು, ಮಹಿಳಾ ಸಂಘಗಳು ತಲೆ ಎತ್ತಿವೆ. ಇವುಗಳ ನೆಲೆಯಲ್ಲಿ ಕರ್ನಾಟಕದ ಲಂಬಾಣಿ ಕಲೆಯು ಒಂದು ಬಗೆಯ ಅಭಿವೃದ್ಧಿಗೆ ಹೊಸ ಸಾದ್ಯತೆಗಳು ತೆರೆದುಕೊಂಡಿವೆ. ಆದರೆ ಇವುಗಳು ಉತ್ತಮ ದೂರದೃಷ್ಟಿಯುಳ್ಳ ನಾಯಕರ ಕೊರತೆಯನ್ನು ಎದುರಿಸುತ್ತಿವೆ.

೧೩. ಈಚೆಗೆ ಲಂಬಾಣಿ ಸಮುದಾಯದಲ್ಲಿಯೂ ಹೆಚ್ಚು ಕಡಿಮೆ ಮೇಲು ಕೀಳು ತರಹದ ಭೇದವು ಹೆಚ್ಚಾಗಿದೆ. ನಗರದ ಲಂಬಾಣಿಗರು, ತಾಂಡಾದ ಲಂಬಾಣಿಗರು, ಓದಿದವರು ಓದದವರು, ಕೂಲಿಕಾರರು, ನೌಕರರು ಮುಂತಾದವುಗಳು ಎದ್ದು ಕಾಣುತ್ತವೆ. ಇದರ ಸ್ವರೂಪದಿಂದ ಲಂಬಾಣಿ ಸಮುದಾಯಕ್ಕೆ ಆದ ಲಾಭಗಳೇನು, ಅಂತೆಯೇ ನಷ್ಟಗಳೇನು ಎನ್ನುವುದನ್ನು ಕೂಡ ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

೧೪. ಲಂಬಾಣಿ ಮಹಿಳೆಯರಿಗೆ ಹಚ್ಚೆ ಕಲೆಯು ಸೌಂದರ್ಯ ಹಾಗೂ ಸೌಭಾಗ್ಯದ ಸಂಕೇತವಾಗಿದೆ. ಅರಣ್ಯವಾಸಿಗಳಾಗಿದ್ದ ಇವರು ತಮ್ಮ ಮೈಮೇಲೆ ಹಚ್ಚೆಯನ್ನು ವಿವಿಧ ವಿನ್ಯಾಸದ ಮಾದರಿಯಲ್ಲಿ ಹುಯ್ಯಿಕೊಂಡ ಬಗೆಯ ಕುರಿತು ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಲಂಬಾಣಿಗರಲ್ಲಿ ಮದುವೆ ಪೂರ್ವದಲ್ಲಿಯೇ ಮಹಿಳೆಯರು ಹಚ್ಚೆಯನ್ನು ಹಾಕಿಸಿಕೊಳ್ಳುವರು. ಅವುಗಳ ಸ್ವರೂಪ ಕುರಿತು ಅಧ್ಯಯನದಲ್ಲಿ ಗುರುತಿಸಲಾಗಿದೆ.

೧೫. ಪಾರಂಪರಿಕವಾಗಿ ಸಮುದಾಯದಲ್ಲಿ ಬಂದ ಹಚ್ಚೆ ಕಲೆಯು ಆಧುನಿಕ ಸಂದರ್ಭದಲ್ಲಿ ಬದಲಾದ ಸ್ಥಿತಿಯ ಬಗ್ಗೆ ಕುರಿತು ಅಧ್ಯಯನದಲ್ಲಿ ನಿರೂಪಿಸಲಾಗಿದೆ.

೧೬. ಲಂಬಾಣಿಗರ ಉಡುಗೆಗೆ ಸಂಬಂಧಿಸಿದ ಸೂಕ್ಷ್ಮ ಕಸೂತಿಯ ಪಾರಿಭಾಷಿಕ ಪದಗಳಾದ ಮಾಕಿ, ಕಟ್ಟ, ತೂನ್, ವೇಲೆ, ರೇಲೆ, ಪೂಲ್, ಖಾಪ್ಲಿ, ಕಲ್ಲೇಣಿ, ಬಕ್ಯ ಚೇಣ್, ಗಾಡ್ರೆ, ಖಿಲಣ್, ಅಲ್ಲಿ ಪೇಟಿಯ ಇತ್ಯಾದಿ ಪದಗಳ ಕುರಿತಾಗಿ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

೧೭. ಲಂಬಾಣಿ ಕಸೂತಿ ಕಲೆ ಹಿರಿಯ ತಲೆಮಾರಿನ ಮಹಿಳೆಯರಿಗೆ ಮಾತ್ರ ಸೀಮಿತವಾಗಿದೆ. ಆದರೆ ಅಕ್ಷರ ಕಲಿತ ಇಂದಿನ ಪೀಳಿಗೆಗಳು ಕಸೂತಿ ಕಲೆಯ ಕಡೆಗೆ ಮುಖ ಮಾಡುತ್ತಿಲ್ಲ. ಹೀಗಾಗಿ ಮುಂದೊಂದು ದಿನ ಈ ಕಸೂತಿ ಕಲೆ ಸಮುದಾಯದಿಂದ ಮರೆಯಾಗುವ ಸಾಧ್ಯತೆಗಳಿವೆ. ಇಂತಹ ಸೂಕ್ಷ್ಮ ಮಾದರಿಯ ಕಸೂತಿ ಕಲೆಯ ಕುರಿತು ಅಧ್ಯಯನದಲ್ಲಿ ಗುರುತಿಸಲಾಗಿದೆ.

೧೮. ಉಡುಗೆಯಂತೆ ಇವರು ಮೈಮೇಲೆ ಹಾಕುವ ತೊಡುಗೆಯು ಅಷ್ಟೇ ಪ್ರಮುಖವಾದದ್ದಾಗಿದೆ. ಉಡುಗೆಯನ್ನು ಧರಿಸುವುದನ್ನು ಎಂದು ಬಿಟ್ಟರೋ ಅಂದೇ ತೊಡುಗೆಯನ್ನೂ ಬಿಟ್ಟರು. ಹೀಗಾಗಿ ಪ್ರತಿಯೊಂದು ತೊಡುಗೆಯ ಕುರಿತು ಅಧ್ಯಯನದಲ್ಲಿ ಚರ್ಚಿಸಲು ಸಾಧ್ಯವಾಗಿದೆ.

೧೯. ಲಂಬಾಣಿ ಸಮುದಾಯದ ಕರಕುಶಲ ಕಲಾವಿದರ ಸಮಕಾಲಿನ ಸ್ಥಿತಿಗತಿಯಲ್ಲಿ ಜೀವನಕ್ರಿಯೆ, ಶೈಕ್ಷಣಿಕ ಹಾಗೂ ಸಾಮಾಜಿಕ ಸ್ಥಿತಿಗತಿಯ ಕುರಿತು ಈ ಅಧ್ಯಯನದಲ್ಲಿ ನಿರೂಪಿಸಲಾಗಿದೆ.

ಹೀಗೆ ಲಂಬಾಣಿ ಸಮುದಾಯದ ಕರಕುಶಲ ಕಲೆಗಳನ್ನು ಅಧ್ಯಯನ ಮಾಡಿದ ನಂತರ ಮುಖ್ಯವಾಗಿ ಕೆಲವು ಅಂಶಗಳು ಗಮನಕ್ಕೆ ಬರುತ್ತವೆ. ಅದರಲ್ಲಿ ಹೊಸ ತಲೆಮಾರಿನ ಜನರು ಆಧುನಿಕ ಶಿಕ್ಷಣಕ್ಕೆ ತೆರೆದುಕೊಂಡ ಯುವಜನತೆ ಕರಕುಶಲ ಕಲೆಯಿಂದ ದೂರ ಸರಿಯುತ್ತಿದ್ದಾರೆ. ಹೀಗೆ ಕರಕುಶಲ ಕಲೆಗೆ ಯುವ ಜನಾಂಗವನ್ನು ಸೆಳೆಯುವ ಹಾಗೆ, ಕರಕುಶಲ ವಸ್ತುಗಳಿಗೆ ವ್ಯಾಪಕ ಮಾರುಕಟ್ಟೆಯನ್ನು ಒದಗಿಸುವ ಪ್ರಯತ್ನವನ್ನು ಮಾಡಬಹುದಾಗಿದೆ.

□□□

# ಅನುಬಂಧಗಳು

೧. ಸಂಕ್ಷೇಪಗಳು

೨. ಗ್ರಂಥಋಣ

೩. ವಕ್ತೃಗಳ ವಿವರ

೪. ಪ್ರಮುಖ ಕರಕುಶಲ ಕಲಾಕೇಂದ್ರಗಳ ವಿವರ

೫. ನೆಲೆಗಳ ವಿವರದ ನಕಾಶೆ

## ೧. ಸಂಕ್ಷೇಪಗಳು

| | |
|---|---|
| ೧. ಕ.ವಿ.ವಿ.ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ |
| ೨. ಪು.ಸಂ. | ಪುಟ ಸಂಖ್ಯೆ |
| ೩. ಪ್ರ.ಸಂ. | ಪ್ರಧಾನ ಸಂಪಾದಕ |
| ೪. ಮ.ಪ್ರ. | ಮಹಾಪ್ರಬಂಧ |
| ೫. ಮೈ.ವಿ.ಮೈ. | ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| ೬. ಸಂ. | ಸಂಪಾದಕ |
| ೭. G.I. | Geographical Indications |
| ೮. ಲಂ.ಮೂ.ಪು. | ಲಂಬಾಣಿ ಮೂಲ ಪುರುಷ |
| ೯. S.K.K.K. | Sandur Kushala Kalakendra |
| ೧೦. S.LB.W.W.T. | Surya Lambhani - Banjara Women Welfare Trust |
| ೧೧. S.H.G. | Self Help Groups |
| ೧೨. C.C.I. | Craft Council of India |
| ೧೩. K.S.H.D.C. | Karnataka State Handicrafts Development Corporation |
| ೧೪. W.C.C. | World Craft Council |
| ೧೫. U.N.E.S.C.O. | United Nations Educational, Scientific and Cultural Organization |
| ೧೬. B.A.H.V.Y. | Baba Sahed Ambedkar Hastashilp Vikas Yozana |

□□□

## ೨. ಗ್ರಂಥಋಣ


೧. ಉಷಾ ಘಾಟಕ್, ೨೦೦೫, **ವೇಷಭೂಷಣ ಪ್ರಸಾಧನ,** ಹೈಪಾಜೆ ಪ್ರಕಾಶನ, ಮೈಸೂರು.

೨. ಕರೀಗೌಡ ಬೀಚನಹಳ್ಳಿ(ಸಂ), ೨೦೦೦, **ಕರಕುಶಲ ಕಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಕಾಳೆ ಕೆ.ವಿ., ೨೦೦೦, **ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಕೃಷ್ಣನಾಯಕ್, ೨೦೦೫, **ಲದೇಣಿಯಾ,** ಲೋಹಿಯಾ ಪ್ರಕಾಶನ, ಬಳ್ಳಾರಿ.

೫. ಕೃಷ್ಣಾನಂದ ಕಾಮತ್, ೧೯೯೩, **ಮಧ್ಯಪ್ರದೇಶದ ಮಡಿಲಲ್ಲಿ,** ಪುಸ್ತಕಾಲಯ, ಬೆಂಗಳೂರು.

೬. ಖಂಡೋಬಾ ಪಿ.ಕೆ., ೧೯೮೮, **ಲಂಬಾಣಿ ಸಂಸ್ಕೃತಿ,** ದಿ. ತೇಜಸಿಂಗ್ ರಾಠೋಡ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ.

೭. ಖಂಡೋಬಾ ಪಿ.ಕೆ., ೧೯೯೦, **ತಾಂಡಾ ಸಂಸ್ಕೃತಿ,** ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೮. ಖಂಡೋಬಾ ಪಿ.ಕೆ., ೧೯೯೧, **ಕರ್ನಾಟಕದ ಲಂಬಾಣಿಗಳು : ಒಂದು ಸಾಂಸ್ಕೃತಿಕ ಅಧ್ಯಯನ,** ದಿ. ತೇಜಸಿಂಗ ರಾಠೋಡ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ.

೯. ಖಂಡೋಬಾ ಪಿ.ಕೆ., ೧೯೯೩, **ಜಾನಪದ ಮುನ್ನೋಟ,** ಸಂಗೀತಾ ಪಬ್ಲಿಕೇಶನ್ಸ್, ಗುಲಬರ್ಗಾ.

೧೦. ಖಂಡೋಬಾ ಪಿ.ಕೆ., ೨೦೦೦, **ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು,** ಪ್ರಕಾಶಕರು, ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ, ಗುಲಬರ್ಗಾ.

೧೧. ಖಂಡೋಬಾ ಪಿ.ಕೆ., ೨೦೦೨, **ಲಂಬಾಣಿ ಗೋತ್ರ ಮತ್ತು ಶಾಸ್ತ್ರಗಳು,** ಸಂಗೀತಾ ಪಬ್ಲಿಕೇಷನ್ಸ್, ಗುಲಬರ್ಗಾ.

೧೨. ಖಂಡೋಬಾ ಪಿ.ಕೆ., ೨೦೦೫, **ಸಂಸ್ಕೃತಿ ಶೋಧ,** ಸಂಗೀತಾ ಪಬ್ಲಿಕೇಶನ್ಸ್, ಗುಲಬರ್ಗಾ.

೧೩. ಖಂಡೋಬಾ ಪಿ.ಕೆ., ೨೦೦೬, **ಲಂಬಾಣಿ ಬುಡಕಟ್ಟಿನ ದೃಶ್ಯ ಮತ್ತು ಪ್ರದರ್ಶನ ಕಲೆಗಳು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೪. ಗಂಗಾನಾಯಕ ಕೆ.ಎನ್., ೨೦೦೭, **ಲಂಬಾಣಿ ಇತಿಹಾಸ ಮತ್ತು ಸಂಸ್ಕೃತಿ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೫. ಗಂಗಾನಾಯ್ಕ, ೨೦೦೪, **ಲಂಬಾಣಿಗಳು,** ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ.

೧೬. ಗೋಪಾಲ ಸಿ.ಆರ್., ೨೦೧೦, **ಉತ್ಕ್ರಾಂತಿಯತ್ತ ಲಂಬಾಣಿಗಳು,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೭. ಗೋಕಾಕ್ ವಿ.ಕೃ., ೧೯೭೮, **ಕಲೆಯ ನೆಲೆ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೮. ಚಂದ್ರಶೇಖರಯ್ಯ ಬಿ.ಎಂ., ೧೯೮೩, **ಕರ್ನಾಟಕದ ಕರಕುಶಲ ಕಲೆಗಳು,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೯. ಚನ್ನಬಸಪ್ಪ ಗೋ.ರು., ೧೯೭೭, **ಕರ್ನಾಟಕ ಜನಪದ ಕಲೆಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೦. ಜವರೇಗೌಡ ದೇ., ೧೯೮೬, **ಜಾನಪದ ವಾಹಿನಿ,** ಪ್ರಕಾಶಕರು, ಡಿ.ವಿ.ಕೆ. ಮೂರ್ತಿ, ಮೈಸೂರು.

೨೧. ತಪಸ್ವೀಕುಮಾರ್ ನಂ., ೨೦೦೦, **ಸಂಸ್ಕೃತಿ ವಿಕಾಸ,** ಪ್ರಕಾಶಕರು, ಚೇತನ ಬುಕ್ ಹೌಸ್, ಮೈಸೂರು.

೨೨. ದಾನೇಶ ಎ. ಚಕ್ಕಿ, ೧೯೭೧, **ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೩. ದೇವೇಂದ್ರಕುಮಾರ ಹಕಾರಿ, ಡಾ. ಕೆ.ಆರ್.ಸಂಧ್ಯಾರೆಡ್ಡಿ(ಸಂ), ೨೦೦೦, **ಗ್ರಾಮೀಣ ವೃತ್ತಿಗಳು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೪. ದೇವೇಂದ್ರಕುಮಾರ ಹಕಾರಿ, ಡಾ. ಕೆ.ಆರ್. ಸಂಧ್ಯಾರೆಡ್ಡಿ(ಸಂ), ೨೦೦೦, **ಗ್ರಾಮೀಣ ಉಡುಗೆ ತೊಡುಗೆಗಳು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೫. ನಾಗೇಗೌಡ ಎಚ್.ಎಲ್., ೨೦೦೬, **ಪ್ರವಾಸಿ ಕಂಡ ಇಂಡಿಯಾ, ಸಂಪುಟ ೪,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೨೬. ನಾಯಕ ಡಿ.ಬಿ., ೨೦೦೦, **ಲಂಬಾಣಿ ಜನಪದ ಸಾಹಿತ್ಯ,** ಬಂಜಾರಾ ಪ್ರಕಾಶನ, ಗುಲಬರ್ಗಾ.

೨೭. ನಾಯಕ ಡಿ.ಬಿ., ೨೦೦೧, **ಬುಡಕಟ್ಟಿನ ಲಂಬಾಣಿ ಗಾದೆಗಳು,** ಬಂಜಾರ ಪ್ರಕಾಶನ, ಗುಲಬರ್ಗಾ.

೨೮. ನೀಲಗಿರಿ ತಳವಾರ(ಸಂ), ೧೯೯೬, **ಜಾನಪದ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨೯. ಪರಮಶಿವಯ್ಯ ಜೀ.ಶಂ., ೧೯೮೧, **ಜಾನಪದ ಒಂದು ಅಧ್ಯಯನ,** ಪ್ರಕಾಶಕರು, ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ.

೩೦. ಪವಾರ ಜಗನ್ನಾಥ ಲಕ್ಷ್ಮಣ, ೧೯೯೯, **ಗೋರೊರೋ ಗೀದ,** ವೀರಭದ್ರೇಶ್ವರ ಭಜನಾ ಮಂಡಳಿ, ರಾಜನಾಳ ತಾಂಡಾ, ಬಿಜಾಪುರ.

೩೧. ಪಾಟೀಲ ಎಸ್.ಸಿ., ೨೦೦೧, **ವರ್ಣಸಂಚಯ,** ಪ್ರಕಾಶಕರು ವಿಜಯ ಚಿತ್ರಕಲಾ ಮಹಾವಿದ್ಯಾಲಯ, ಇಲಕಲ್.

೩೨. ಪಾಟೀಲ ಎಸ್.ಸಿ., ಸತ್ಯಾನಂದ ಪಾತ್ರೋಟ (ಸಂ), ೨೦೦೩, **ನಿಜದ ನೆಲೆ** (ಬಿ.ಕೆ. ಹಿರೇಮಠರ ಅಭಿನಂದನಾ ಗ್ರಂಥ), ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟೆ.

೩೩. ಪಾಟೀಲ ಎಸ್.ಸಿ., ೨೦೦೪, **ಹಚ್ಚೆ ಚಿತ್ರಕಲೆ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೪. ಪಾಟೀಲ ಎಸ್.ಸಿ., ೧೯೯೩, **ಕರ್ನಾಟಕ ಜನಪದ ಚಿತ್ರಕಲೆ,** ಪ್ರಕಾಶಕರು, ವೀರಶೈವ ವಿದ್ಯಾವರ್ಧಕ ಸಂಸ್ಥೆ, ಗದಗ.

೩೫. ಬಸವರಾಜ ನೆಲ್ಲೀಸರ, ೧೯೭೭, **ಲಂಬಾಣಿಗರು ಹಾಗೂ ಬಗ್ಗರು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೬. ಬಸವರಾಜ ನೆಲ್ಲೀಸರ, ೧೯೮೦, **ಲಂಬಾಣಿಗರು,** ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

೩೭. ಬಾಲಾ ನಾಯಕ್ ಕೆ., ೧೯೯೬, **ಬಂಜಾರ ಧರ್ಮದ ಸಾಮಾನ್ಯ ಜ್ಞಾನ,** ಶ್ಯಾಮಲಾ ಪ್ರಕಾಶನ, ಬೆಂಗಳೂರು.

೩೮. ಬೆನಕನಹಳ್ಳಿ ಜಿ. ನಾಯಕ, ೧೯೮೫, **ವಲಸೆ,** ಪೂರ್ಣಿಮಾ ಪ್ರಕಾಶನ, ಬೆಂಗಳೂರು.

೩೯. ಬೆನಕನಹಳ್ಳಿ ಜಿ. ನಾಯಕ್., **ಕರ್ನಾಟಕದ ಕಲೆಗಳು, ಸಂಪುಟ–೩,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೬.

೪೦. ಬೋರಲಿಂಗಯ್ಯ ಹಿ.ಚಿ., ೧೯೯೫, **ಕಾಡು ಕಾಂಕ್ರೀಟ್ ಮತ್ತು ಜಾನಪದ,** ಅಕ್ಷರ ಪ್ರಕಾಶನ, ಹೆಗ್ಗೋಡು.

೪೧. ಬೋರಲಿಂಗಯ್ಯ ಹಿ.ಚಿ. (ಸಂ), ೧೯೯೬, **ಕರ್ನಾಟಕದ ಜನಪದ ಕಲೆಗಳ ಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ಬೋರಲಿಂಗಯ್ಯ ಹಿ.ಚಿ., ೨೦೦೦, **ಗಿರಿಜನ ನಾಡಿಗೆ ಪಯಣ,** ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು.

೪೩. ಮರಿಶಾಮಾಚಾರ್ ಎನ್., ೧೯೯೧, **ಭಾರತದ ಜನಪದ ಕಲೆ,** ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು.

೪೪. ಮಲ್ಲಿಕಾರ್ಜುನ ಬಿ.ಎಚ್., ೨೦೦೨, **ಶ್ರೀ ಸೇವಾಲಾಲ್ ಚರಿತ್ರೆ,** ಯೋಗೇಶ್ವರಿ ಪ್ರಕಾಶನ, ಕೊಮಾರನಹಳ್ಳಿ ತಾಂಡಾ, ಹಡಗಲಿ.

೪೫. ಮಹಾದೇವಿಬಾಯಿ, ೨೦೦೨, **ಲಂಬಾಣಿ ಸಂಸ್ಕೃತಿ ಕೆಲವು ಅಧ್ಯಯನಗಳು,** ಕೀರ್ತಿ ಪ್ರಕಾಶನ, ಕೋಳ್ಳಿಪಾಳ್ಯ, ಚಾಮರಾಜನಗರ.

೪೬. ಮಹಾದೇವಿಬಾಯಿ, ೨೦೦೭, **ಚಾಮರಾಜನಗರ ಸುತ್ತಿನ ಲಂಬಾಣಿ ಸಂಸ್ಕೃತಿ,** ಕೀರ್ತಿ ಪ್ರಕಾಶನ, ಕೋಳಿಪಾಳ್ಯ, ಚಾಮರಾಜನಗರ.

೪೭. ಮೋತಿರಾಜ ರಾಠೋಡ, ೧೯೭೬, **ಬಂಜಾರಾ ಸಂಸ್ಕೃತಿ,** ಅಸ್ತಿತ್ವ ಪ್ರಕಾಶನ, ಔರಂಗಾಬಾದ್.

೪೮. ಮೋತಿರಾಜ ರಾಠೋಡ, ೨೦೦೮, **ಸಿಂಧೂ ಸಂಸ್ಕೃತಿ ಪೂರ್ವ ಗೋರ ಬಂಜಾರಾ ಸಂಸ್ಕೃತಿ ಥಿ?,** ಅರ್ಜುನಸಿಂಗ್ ರಾಠೋಡ, ಸೇವಾಗಡ, ಆಂಧ್ರಪ್ರದೇಶ.

೪೯. ರಾಜಪ್ಪ ದಳವಾಯಿ ಆರ್., ೧೯೯೩, **ಹಕ್ಕಿಪಿಕ್ಕಿಯರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೦. ರಾಜು ನಾಯ್ಕ, ೨೦೦೬, **ಲಂಬಾಣಿಗರಲ್ಲಿ ರಾಜಕೀಯ ಅರಿವು ಒಂದು ಅಧ್ಯಯನ,** ಆತ್ಮಜ್ಯೋತಿ ಪ್ರಕಾಶನ, ಬೆಂಗಳೂರು.

೫೧. ರಾಜೇಂದ್ರ ಯರನಾಳ, ೨೦೦೪, **ಜನಪದ ಹೊಲಿಗೆ ಮತ್ತು ಚಿತ್ರಕಲೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫೨. ರಾಜೇಗೌಡ ಹ.ಕ., ಡಾ. ಜೀ.ಶಂ. ಪರಮಶಿವಯ್ಯ(ಸಂ), ೧೯೯೩, **ಜಾನಪದ ಗಂಗೋತ್ರಿ,** ಸಂಪುಟ–೬, ಸಂಚಿಕೆ–೭.

೫೩. ರಾಮಕೃಷ್ಣ ಆರ್., ೨೦೦೭, **ಕರ್ನಾಟಕದ ಬುಡಕಟ್ಟುಗಳು,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೫೪. ರಾಮಚಂದ್ರರಾವ್ ಎಸ್.ಕೆ., ೧೯೮೧, **ಕರ್ನಾಟಕದ ಕಲೆಗಳು, ಸಂಪುಟ-೧,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫೫. ರಾಮಚಂದ್ರೇಗೌಡ ಹಿ.ಶಿ., ೨೦೦೭, **ಜನಪದ ತಂತ್ರಜ್ಞಾನ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೫೬. ರೂಪ್ಲಾನಾಯಕ್ ವೈ., ೧೯೯೮, **ರಂಗುರಂಗಿನ ಬಂಜಾರ(ಲಂಬಾಣಿ) ಜನಾಂಗ** ಎಸ್.ಬಿ.ಸಿ.ಲಾ ಪಬ್ಲಿಕೇಷನ್, ಬೆಂಗಳೂರು.

೫೭. ಲಕ್ಕಪ್ಪಗೌಡ ಎಚ್.ಜೆ.(ಪ್ರ.ಸಂ), ೧೯೯೮, **ಸುವರ್ಣ ಜಾನಪದ, ಸಂಪುಟ-೨,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫೮. ಲಲಿತಾನಾಯಕ್ ಬಿ.ಟಿ., ೧೯೮೭, **ಸ್ಮರಣ ಸಂಚಿಕೆ,** ರಾಜ್ಯಮಟ್ಟದ ಲಂಬಾಣಿ ಸಮ್ಮೇಳನ ಮತ್ತು ಜಾನಪದ ಕಲಾಮೇಳ (ಅಕ್ಟೋಬರ್ ೨೬), ಬೆಂಗಳೂರು.

೫೯. ಲಲಿತಾನಾಯಕ್ ಬಿ.ಟಿ., ೧೯೯೧, **ಗತಿ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೬೦. ಲಲಿತಾನಾಯಕ್ ಬಿ.ಟಿ., ೧೯೯೫, **ನೆಲೆ ಬೆಲೆ,** ಆಶಾ ಸಾಹಿತ್ಯ ಪ್ರಕಾಶನ, ಬೆಂಗಳೂರು.

೬೧. ಲಲಿತಾನಾಯಕ್ ಬಿ.ಟಿ., ೨೦೦೯, **ಬಂಜಾರಾ ಹೆಜ್ಜೆಗುರುತುಗಳು**(ಲೇಖ ಸಂಕಲನ), ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು.

೬೨. ವಸಂತ ಕಲ್‌ಬಾಗಲ್, ೨೦೦೫, **ಫ್ಯಾಷನ್ ಜಗತ್ತು,** ಸ್ವಾತಿ ಪ್ರಕಾಶನ, ಮೈಸೂರು.

೬೩. ವೀರಣ್ಣ ದಂಡೆ(ಸಂ), ೧೯೯೫, **ಜಾನಪದ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೬೪. ವೀರಣ್ಣ ರಾಜೂರ (ಪ್ರ.ಸಂ), ೧೯೯೮, **ಜನಪದ ಉಡುಗೆ ತೊಡುಗೆ, ಜಾನಪದ ಸಾಹಿತ್ಯ ದರ್ಶನ-೨೧,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೫. ವೆಂಕಟರಾಮ್ ತ.ಪು., ೧೯೬೩, **ಹೇಮಲಿ,** ಪ್ರಕಾಶಕರು, ಹೇಮಂತ ಸಾಹಿತ್ಯ, ಬೆಂಗಳೂರು.

೬೬. ಶಂಕರ ರಾಠೋಡ, ೧೯೮೧, **ಆವೋರೆ ಗೀತಗಾಮಾ,** ಸಾಹಿತ್ಯ ಪ್ರಕಾಶನ, ಪಾಶ್ಚಾಪೂರ, ಹುಕ್ಕೇರಿ, ಬೆಳಗಾಂ.

೬೭. ಶಿವರಾಮ ಕಾರಂತ ಕೆ., ೧೯೭೫, **ಕರ್ನಾಟಕದಲ್ಲಿ ಚಿತ್ರಕಲೆ,** ಐಬಿಎಚ್. ಪ್ರಕಾಶನ, ಬೆಂಗಳೂರು.

೬೮. ಶಿವರಾಮ ಕಾರಂತ ಕೆ., ೧೯೯೮, **ಭಾರತೀಯ ಚಿತ್ರಕಲೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೬೯. ಶೇಖರನಾಯ್ಕ, ೨೦೦೨, **ಕರ್ನಾಟಕದ ಲಂಬಾಣಿಗಳು: ಇತಿಹಾಸ ಮತ್ತು ಸಂಸ್ಕೃತಿ,** ದಿನಕರ ಪ್ರಕಾಶನ, ಬೆಂಗಳೂರು.

೭೦. ಶ್ರೀಧರಮೂರ್ತಿ ಮ., ೧೯೭೪, **೬೪ ಕಲೆಗಳು,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭೧. ಸಕ್ರಾನಾಯ್ಕ ಕೆ.ಎಚ್., ೨೦೦೭, **ಗೋರ್ ಕಿಃವ್ ಆಯೆ ಈ ಧರ್ತಿಪರ,** ಪ್ರಕಾಶಕರು, ಕೆ.ಎಲ್. ಓಂಕಾರ ಮೂರ್ತಿ, ದಾವಣಗೆರೆ.

೭೨. ಸಣ್ಣರಾಮ, ೧೯೮೨, **ಲಂಬಾಣಿ ಗಾದೆಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭೩. ಸಣ್ಣರಾಮ, ೧೯೯೭, **ಲಂಬಾಣಿ ಒಗಟು ಲೋಕ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೭೪. ಸಣ್ಣರಾಮ, ೧೯೯೯, **ಲಂಬಾಣಿ ಸಂಸ್ಕೃತಿ,** ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

೭೫. ಸಣ್ಣರಾಮ, ೨೦೦೧, **ಬುಡಕಟ್ಟು ಸಂಸ್ಕೃತಿ,** ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ.

೭೬. ಸವಿತಾ ನಾಯಕ, ೨೦೦೦, **ಪ್ರಸಾಧನ ಕಲೆ,** ಜಾನಪದ ಪ್ರಕಾಶನ, ಹೊನ್ನಾವರ.

೭೭. ಸವಿತಾ ನಾಯಕ, ೨೦೦೦, **ಬುಡಕಟ್ಟು ಮಹಿಳೆಯರ ಪ್ರಸಾದನ ಕಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೮. ಸರಸ್ವತಿ ಎಂ., ಆರ್. ವಸಂತಕುಮಾರ(ಸಂ), ೨೦೦೫, **ಕರ್ನಾಟಕ ಸಂಸ್ಕೃತಿ ಚಿಂತನೆ,** ಕನ್ನಡ ವೇದಿಕೆ, ಶ್ರೀ ಭಗವಾನ್ ಮಹಾವೀರ ಜೈನ್ ಕಾಲೇಜ್, ಬೆಂಗಳೂರು.

೭೯. ಸೈಯದ್ ಜಮೀರುಲ್ಲಾ ಷರೀಫ್, ೧೯೯೩, **ಗೊಂಡರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮೦. ಹರಿಲಾಲ ಕೆ. ಪವಾರ, ೧೯೯೩, **ಹೆಳವರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮೧. ಹರಿಲಾಲ ಪವಾರ, ೧೯೯೬, **ಲಂಬಾಣಿಗರಲ್ಲಿ ಮದುವೆ ಸಂಪ್ರದಾಯಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

೮೨. ಹರಿಲಾಲ ಪವಾರ, ಡಾ. ಪಂಡಿತ ಕೆ. ರಾಠೋಡ, ೧೯೯೭, **ಲಂಬಾಣಿಗರಲ್ಲಿ ಹೋಳಿಹಬ್ಬ,** ಶಶಿ ಪ್ರಕಾಶನ, ಧಾರವಾಡ.

೮೩. ಹರಿಲಾಲ ಪವಾರ, ೧೯೯೮, **ಜಾನಪದ ಸಾಹಿತ್ಯ ದರ್ಶನ, ಭಾಗ–೧,** ಲಂಬಾಣಿಗರ ಉಡುಗೆ ತೊಡುಗೆಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೮೪. ಹರಿಲಾಲ ಪವಾರ, ೧೯೯೮, **ಸಂತ ಸೇವಾಲಾಲ್,** ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ.

೮೫. ಹರಿಲಾಲ ಪವಾರ, ೨೦೦೨, **ಬಂಜಾರಾ ಗೋತ್ರಗಳು,** ಪ್ರೀತಮ್ ಪ್ರಕಾಶನ, ಧಾರವಾಡ,

೮೬. ಹರಿಲಾಲ ಪವಾರ, ೨೦೦೭, **ಬದುಕೊಂದು ಚಿತ್ತಾರ, ಲಂಬಾಣಿ ಬುಡಕಟ್ಟು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

೮೭. ಹರಿಲಾಲ ಪವಾರ, ೨೦೦೩, **ಬೆಂಕಿಯಲ್ಲಿ ಕಮರಿದ ಹೂವು ಹೂನಾಸತಿ,** ಪ್ರೀತಮ್ ಪ್ರಕಾಶನ, ಧಾರವಾಡ.

೮೮. ಹೂಗಾರ ಎಸ್.ಕೆ., ೧೯೭೭, **ಕಲೆ ಮತ್ತು ಹಬ್ಬ,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೮೯. ಹೆಬ್ಬಾಲೆ ಕೆ.ನಾಗೇಶ್.(ಸಂ), ೨೦೦೬, **ಜಾನಪದ ಕರ್ನಾಟಕ,** ಸಂಪುಟ–೫, ಸಂಚಿಕೆ–೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪಿಎಚ್.ಡಿ. ಮಹಾಪ್ರಬಂಧಗಳು**

೧. ರವಿನಾಯ್ಕ ಎಂ., ೨೦೦೯, **ಬುಡಕಟ್ಟು ಹಕ್ಕಿ ಹಾಡು–ಬಿ.ಟಿ. ಲಲಿತಾನಾಯಕ್: ಜೀವನ ಮತ್ತು ಸಾಹಿತ್ಯ,** ಉನ್ನತಿ ಪ್ರಕಾಶನ, ಮೈಸೂರು.

೨. ಸಂತೋಷ, ೨೦೦೮, **ದಕ್ಷಿಣ ಭಾರತದ ಲಂಬಾಣಿ ಭಾಷೆ ಮತ್ತು ಪ್ರಕೋಶ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಸೋಮಕ್ಕ ಎಂ., ೨೦೧೦, **ಲಂಬಾಣಿ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳು,** ಅನ್ನದಾನಿ ಭೈರವ ಪ್ರಕಾಶನ, ಬೆಂಗಳೂರು.

೪. Ronald L. Trail, 1968, **The Grammar of Lamani,** University of Poona, Poona.

**ದಿನಪತ್ರಿಕೆ, ವಾರಪತ್ರಿಕೆ ಮತ್ತು ವಿಶೇಷಾಂಕಗಳು**

೧. ನಮನ, ಪ್ರಜಾವಾಣಿ, **ಚಿತ್ತಾಕರ್ಷಕ ಲಂಬಾಣಿ ಕಸೂತಿ ಕಲೆ,** ತುಮಕೂರು, ೨೪.೦೯.೨೦೦೫.

೨. ಭಗವಾನ್, ಸಂಯುಕ್ತ ಕರ್ನಾಟಕ, **ಜೀವಂತ ಜಾನಪದೀಯರು ಲಂಬಾಣಿಗರು,** ೩೦.೧೧.೧೯೯೪.

೩. ಭೀಮಣ್ಣ ಗಜಾಪುರ,ಪ್ರಜಾವಾಣಿ, **ಸಂಡೂರಲ್ಲಿ ಅರಳಿದ ಲಂಬಾಣಿ ಮಹಿಳೆಯರ ಕಲೆ,** ೩೦.೧೧.೨೦೦೩.

೪. ಮಲ್ಲಿಕಾರ್ಜುನ ಕುಂಬಾರ, ಪ್ರಜಾವಾಣಿ, **ಕುಗ್ರಾಮದಲ್ಲಿ ಸಬಲೀಕರಣ,** ೨೮.೦೬.೨೦೦೮.

೫. ಮಹೇಶ್ವರಯ್ಯ ಎಚ್.ಎಂ., ಪ್ರಜಾವಾಣಿ, **ದೀಪಾವಳಿ ವಿಶೇಷಾಂಕ,** ಹಚ್ಚೆ ಜಾನಪದ ಕಲೆ ೧೯೯೦.

೬. ರಶ್ಮಿ ಎಸ್., ಪ್ರಜಾವಾಣಿ, **ಲಂಬಾಣಿ ಕಿಣಿ ಕಿಣಿ,** ೨೩.೦೬.೨೦೦೭.

೭. ರಾಘವನ್ ನಂಬಿಯಾರ್ ಕೆ.ಎಂ., **ಸುಧಾ ಯುಗಾದಿ ವಿಶೇಷಾಂಕ,** ಅಲೆಮಾರಿಗಳು ಅರ್ಧಶತಮಾನದ ಸ್ಥಿರವಾಸಿಗಳು, ೨೦೦೫.

೮. ವಕ್ರಾಣಿ ವೀರೇಶ ಸೌದ್ರಿ, ವಿಜಯ ಕರ್ನಾಟಕಕನ್ನಡನಾಡಿನ **ಕನ್ನಡಿ ಕಸೂತಿ,** ೧೪.೦೯.೨೦೦೪

೯. ಶೈಲಜಾ ಹೂಗಾರ, **ಸುಧಾ,** ವಾರಪತ್ರಿಕೆ, ಕಸೂತಿ ಯುವಭಾವ ನವರಾಗ, ೧೯.೧೦.೨೦೦೬.

೧೦. ಶೈಲಜಾ ಹೂಗಾರ, **ಸುಧಾ,** ವಾರಪತ್ರಿಕೆ, ಹಚ್ಚೆಕಲೆಗೆ ಹಲವು ರಂಗು, ೭.೨.೨೦೦೮.

೧೧. ಸುಮಂಗಲಾ ಬಾದರದಿನ್ನಿ, ತರಂಗ, ವಾರಪತ್ರಿಕೆ, **ಲಂಬಾಣಿಗರು, ವರ್ಣರಂಜಿತ ಬದುಕು ಬವಣೆ,** ೨೨.೧೧.೨೦೦೧.

೧೨. Namrata Iyengar, **Deccan Herald Chronicles in Kasooti,** 06.07.2006.

೧೩. Raju Vijapur, **Deccan Herald Suffering in Silence,** 22.07.2008.

೧೪. Vimla Patil, **Deccan Herald All the world is a market,** 29.01.2006.

**English Books**

1. Anthakrishna Iyer L.K., 1935, **The Mysore Tribes and Castes,** The Mysore University, Mysore, Vol-I,

2. Anthakrishna Iyer L.K., 1988, **The Mysore Tribes and Castes,** Mittal Publication, Delhi, Vol-II, Reprint.

3. Bhishan Pal H., 1984, **Handicrafts of Rajastan,** Ministry of Information and Broadcasting, New Delhi.

4. Chamanalal B., 1962, **Gypsies (Forgotten Childern of India),** Publication Division, Govt of India, New Delhi.

5. Christopher W. (Edited by), **The Art of Kutch,** Marg Publication, Mumbai.

6. Choranur Ramachar Gopal, 2009, **Changes and Development in Lambani Society,** IBH Prakashana, Bangalore.

7. Dar S.N., 1982, **Costumes of India and Pakistan,** D.B.Taraporevala Sons & Co private Ltd., Bombay.

8. Deogaonkar S.G., 1992, **The Banjara, Concept Publishing Company,** New Delhi.

9. Enthoven R.E., 1990, **The Tribes and Castes of Bombay,** Asian Education Service, New Delhi/Madras.

10. Ghurye G.S., 1951, **Indian Costume,** Popular Prakashan, Bombay.

11. Gurusaday Dutt, 1990, **Folk Arts and Crafts of Bengal,** Seagull, Calcutta.

12. Halbar B.G., 1986, **Lambani Economy and Society in change,** Mittal Publication, Delhi.

13. Ida M.Nance, 1949, **A Text Book of Needle work,** Edward Arnold & Co, Londan, Rivised.

14. Jamila Brijbhushan, 1990, **Indian Embroidery,** Ministry of Information and Broadcasting, Govt. of India, New Delhi.

15. Jasleen Dhamija, 1979, **Living Tradition of Iran's Crafts,** Vikas Publishing House Pvt. Ltd., New Dehli.

16. Jasleen dhamija, 2005, **Indian Folk arts and crafts,** National Book Trust, New Delhi.

17. Jasleen Dhamija (Editor), 2009, **Asian Embrodiery,** Abhinav Publication, New Delhi.

18. Jaya Jaitly, 2007, **Crafting Nature(Incredible India),** Wisdom Tree, New Delhi.

19. Joshi O.P., (Editor), 1992, **Anthropology of Symbols,** RBSA Publishers, Jaipur.

20. Jyotindra Jain, Aarti Aggarwala, 1989, Museums of India **National Handicrafts and Handlooms Museum.**

21. Kamladevi Chattopadhyay, 1985, **The Glory of Indian Handicrafts,** Clarion Books, New Delhi.

22. Krishnmurthy N., 2000, **Crimes & Customs Among the Lambanis in Chitradurga District,** Laxmi Publication.

23. Laila Tyabji, 2007, **Threads & Voices; Behind the Indian Textile Tradition,** Marg Publication.

24. Lawrence D'Souza S.J., 1997, **Lambanis,** Unesco literacy Resource Centre, Banglore.

25. Maarten Hesselt Van Dinter, 2000, **Tribal Tatto Designs,** Shamabhala Publications, Boston.

26. Naik D.B., 2000,**The Art and Literature of Banjara Lambanis,** Abhinav Publication, New Delhi.

27. Nora Fisher (Editor), **Mud, Mirror and Thread,** Mapin Publishing, 1993.

28. Oppi Untracht, 2008, **Traditional Jewelry of India,** Thames & Hudson.

29. Puttappa R. Jadhav, 2000, **Banjara And Gypsy,** M/s Bewel Trust, Bangalore.

30. Rangachari K., Edgar Thurston, 1909, **Castes and Tribes of Southern India** Asian Educational Service, Vol-IV, New Delhi.

31. Ruplanaik Y., 1988, **Colourful Banjara(Lambani) Tribe Through the ages** SBC Law Publication, Bangalore.

32. Saraf D.N., 1982, **Indian Crafts,** Vikas Publishing House Pvt Ltd., New Delhi.

33. Savas D.N., 1982, Indian Crafts Development and Potential, Vikas Publish House, New Delhi.

34. Shailaja D. Naik., 1996, **Traditional Embroideries of India,** APH Publishing, New Delhi.

35. Sheila Paine, 2001, **Embroidery form India and Pakistan,** British Museum Press, London.

36. Sherring M.A., 1987, **The Tribes and Castes of Rajastan,** Cosmo Publications, Delhi.

37. Shyam Singh Shashi, 2006, **The world of Nomads**, Lotus Press, New Delhi.

38. Syed Siraj UL Hasian, 1920,**The Castes and Tribes of H.E.H The Nizam's Dominios,** Vol-I, Bombay the Times Press, Aes Reprint, Delhi, 1989.

39. Thomas Holbein Hendley, 1909, **Indian Jewellery,** Low Price Publication, Delhi.

40. Verma R.C., 2002, **Indian Tribes Through Ages,** Ministry of Information and Broadcosting, Govt of India, New Delhi.

**Website Address**

1. http://www.maiwa.com/foundation/initiatives.html
2. http://www.gypsyriver.com.au/2011/10/new-banjara-jewellery.html
3. http://nakedfaun.blogspot.in/
4. http://www.ebay.com/sch/
5. http://www.tribalsouk.com/allprods.php
6. http://www.tribaljewelry.co.in/ index.php?cPath=1&crdID=0ba5bf0a0e748ff993df85ec6e341258
7. http://www.banjaratimes.com
8. http://www.craftscouncilofindia.org/activities.html
9. http://www.worldcraftscouncil.org
10. http://www.banjarathanda.com/project_schemes.html
11. http://www.craftrevival.org
12. http://www.dastkar.org/bazaars.htm
13. http://www.craftclustersofindia.in/site/home.aspx
14. http://texmin.nic.in/handicrafts/home2.htm

15. http://texmin.nic.in/handicrafts

16. http://www.epch.com

17. http://www.kvic.org.in

18. http://www.nid.edu

19. http://www.designdiary.com

20. http://www.craftclustersofindia.in/site/Ahvy_Scheme.aspx?mu_id=1

21. http://www.jiyo.net.in

22. http://portal.unesco.org/culture/en/ev.php-URL_ID=35668&URL_DO=DO_TOPIC&URL_SECTION=201.html

23. http://portal.unesco.org/culture/en/ev.php-URL_ID=37649&URL_DO=DO_TOPIC&URL_SECTION=201.html

24. http://www.unescobkk.org/culture/creativity/award-of-excellence-for-handicrafts

❑❑❑

## ೩. ವಕ್ತೃಗಳ ವಿವರ

| ಕ್ರಸಂ. | ಹೆಸರು | ವಯಸ್ಸು | ಊರು | ತಾಲ್ಲೂಕು/ಜಿಲ್ಲೆ | ಉದ್ಯೋಗ |
|---|---|---|---|---|---|
| ೧. | ಅಕ್ಕುಬಾಯಿ ಚಂದು ರಾಠೋಡ | ೩೩ | ಭೂತನಾಳ ತಾಂಡಾ | ಬಿಜಾಪುರ | |
| ೨. | ಕಾಂತುಬಾಯಿ ಬಾಬು ಪತ್ತಾರ | ೩೮ | ಸನಾರ ತಾಂಡಾ | ಬಿಜಾಪುರ | ಸನಾರ |
| ೩. | ಗಂಗುಬಾಯಿ ರೇವು ರಾಠೋಡ | ೩೫ | ಅರಕೇರಿ ತಾಂಡಾ | ಬಿಜಾಪುರ | |
| ೪. | ಗಂಗುಬಾಯಿ ರಾಠೋಡ | ೫೨ | ಭೂತನಾಳ ತಾಂಡಾ | ಬಿಜಾಪುರ | |
| ೫. | ಗೌರಮ್ಮ ಗಂಗಾಧರ ಅಕ್ಕಸಾಲಿ | ೫೫ | ಮುರಡಿ ತಾಂಡಾ | ಮುಂಡರಗಿ ॥ತಾ॥ ಗದಗ ॥ಜಿ॥ | ಅಕ್ಕಸಾಲಿ |
| ೬ | ತಾರಾಸಿಂಗ ಬನಸಿ ಪತ್ತಾರ | ೫೫ | ಸನಾರ ತಾಂಡಾ | ಬಿಜಾಪುರ | ಸನಾರ |
| ೭ | ನಾಗಪ್ಪ ಬಾಳಪ್ಪ ಅಕ್ಕಸಾಲಿ | ೬೦ | ಮುರಡಿ ತಾಂಡಾ | ಮುಂಡರಗಿ॥ತಾ॥ ಗದಗ ॥ಜಿ॥ | ಅಕ್ಕಸಾಲಿ |
| ೮. | ಪುತಳಾಬಾಯಿ ಭಾಸು ರಾಠೋಡ | ೪೮ | ಬರಟಗಿ ತಾಂಡಾ | ಬಿಜಾಪುರ | |
| ೯. | ಪುತಳಾಬಾಯಿ ಲಚ್ಚು ರಾಠೋಡ | ೫೭ | ಅತ್ತಾಲಟ್ಟಿ ತಾಂಡಾ | ಬಿಜಾಪುರ | |
| ೧೦. | ಬಾಬು ಜಿವಲಪ್ಪಾ ಪತ್ತಾರ | ೮೦ | ಸನಾರತಾಂಡಾ | ಬಿಜಾಪುರ | ಸನಾರ |
| ೧೧. | ಬಾಲು ಸನಾರ | ೫೦ | ಸನಾರ ತಾಂಡಾ | ಬಿಜಾಪುರ | ಸನಾರ |
| ೧೨. | ಬಾಬು ಸಿಂಗ್ ನಾಮದೇವ ಪತ್ತಾರ | ೭೦ | ಸನಾರ ತಾಂಡಾ | ಬಿಜಾಪುರ | ಸನಾರ |
| ೧೩. | ರಾಬರ್ಟ್ ಗೀಸಿಂಕ್ | ೭೦ | ಹಂಪಿ | ಬಳ್ಳಾರಿ | ಕಲಾವಿದರು |
| ೧೪. | ಭೀಮಪ್ಪ ಸುಬ್ಬಣ್ಣ ಅಕ್ಕಸಾಲಿ | ೬೬ | ಮುರಡಿ ತಾಂಡಾ | ಮುಂಡರಗಿ॥ತಾ॥ | ಅಕ್ಕಸಾಲಿ |
| ೧೫. | ಭೀಮಪ್ಪ ರಾಮಪ್ಪ ಅಕ್ಕಸಾಲಿ | ೫೮ | ಮುರಡಿ ತಾಂಡಾ | ಮುಂಡರಗಿ॥ತಾ॥ ಗದಗ ॥ಜಿ॥ | ಅಕ್ಕಸಾಲಿ |
| ೧೬. | ಮಂಜಪ್ಪ ಗಂಗಾಧರ ಅಕ್ಕಸಾಲಿ | ೩೮ | ಮುರಡಿ ತಾಂಡಾ | ಮುಂಡರಗಿ॥ತಾ॥ ಗದಗ ॥ಜಿ॥ | ಅಕ್ಕಸಾಲಿ |

| ಕ್ರ.ಸಂ. | ಹೆಸರು | ವಯಸ್ಸು | ಊರು | ತಾಲ್ಲೂಕು/ಜಿಲ್ಲೆ | ಉದ್ಯೋಗ |
|---|---|---|---|---|---|
| ೧೭. | ಮುರಳಿ ಸುರತರಾಮ ಪತ್ತಾರ | ೨೮ | ಸನಾರ ತಾಂಡಾ | ಬಿಜಾಪುರ | ಸನಾರ |
| ೧೮. | ಯಮನೂರಪ್ಪ ಗಂಗಪ್ಪ ಅಕ್ಕಸಾಲಿ | ೫೬ | ಮುರಡಿ ತಾಂಡಾ | ಮುಂಡರಗಿ॥ತಾ॥ ಗದಗ ॥ಜಿ॥ | ಅಕ್ಕಸಾಲಿ |
| ೧೯. | ರತನಸಿಂಗ ಬಾಬು ಪತ್ತಾರ | ೪೩ | ಸನಾರ ತಾಂಡಾ | ಬಿಜಾಪುರ | ಸಿಂಪಿಗ |
| ೨೦. | ರತ್ನಾಬಾಯಿ ಜಗನು ರಾಠೋಡ | ೫೦ | ಅರಕೇರಿ ತಾಂಡಾ | ಬಿಜಾಪುರ | |
| ೨೧. | ರುಕ್ಮಿಣಿ ವೆಂಕಟೇಶ ಅಕ್ಕಸಾಲಿ | ೩೬ | ಮುರಡಿ ತಾಂಡಾ | ಮುಂಡರಗಿ॥ತಾ॥ ಗದಗ ॥ಜಿ॥ | ಅಕ್ಕಸಾಲಿ |
| ೨೨. | ಲಕ್ಷ್ಮೀಬಾಯಿ ವಸರಾಮ ಚವ್ಹಾಣ | ೫೫ | ಮಖಣಾಪುರ ತಾಂಡಾ | ಬಿಜಾಪುರ | |
| ೨೩. | ವೆಂಕಟೇಶ ಗಂಗಾದರ ಅಕ್ಕಸಾಲಿ | ೪೭ | ಮುರಡಿ ತಾಂಡಾ | ಮುಂಡರಗಿ॥ತಾ॥ ಗದಗ ॥ಜಿ॥ | ಅಕ್ಕಸಾಲಿ |
| ೨೪. | ಸಂಜು ಪತ್ತಾರ | ೪೦ | ಸನಾರ ತಾಂಡಾ | ಬಿಜಾಪುರ | ಸಿಂಪಿಗ |
| ೨೫. | ಸೀತವ್ವ ನಾಗಪ್ಪ ಅಕ್ಕಸಾಲಿ | ೪೮ | ಮುರಡಿ ತಾಂಡಾ | ಮುಂಡರಗಿ॥ತಾ॥ ಗದಗ ॥ಜಿ॥ | ಅಕ್ಕಸಾಲಿ |
| ೨೬ | ಸೀನಾಬಾಯಿ ರಾಠೋಡ | ೪೬ | ಅರಕೇರಿ ತಾಂಡಾ | ಬಿಜಾಪುರ | |
| ೨೭ | ಸುರೇಖಾ ರಾಠೋಡ | ೩೫ | ಬರಟಗಿ(L.T.No-2) | ಬಿಜಾಪುರ | |
| ೨೮. | ಸುಶೀಲವ್ವ ಭೀಮಪ್ಪ ಅಕ್ಕಸಾಲಿ | ೫೦ | ಮುರಡಿ ತಾಂಡಾ | ಮುಂಡರಗಿ॥ತಾ॥ ಗದಗ ॥ಜಿ॥ | ಅಕ್ಕಸಾಲಿ |
| ೨೯. | ಸುರತರಾಮ ಮೋಲೆರಾಮ ಪತ್ತಾರ | ೭೬ | ಸನಾರ ತಾಂಡಾ | ಬಿಜಾಪುರ | ಸನಾರ |
| ೩೦. | ಶಿವಪ್ಪ ಗಂಗಪ್ಪ ಅಕ್ಕಸಾಲಿ | ೩೬ | ಮುರಡಿ ತಾಂಡಾ | ಮುಂಡರಗಿ॥ತಾ॥ ಗದಗ ॥ಜಿ॥ | ಅಕ್ಕಸಾಲಿ |
| ೩೧. | ಶಂಕರಪ್ಪ ಸುಬ್ಬಣ್ಣ ಅಕ್ಕಸಾಲಿ | ೭೦ | ಮುರಡಿ ತಾಂಡಾ ಗದಗ ॥ಜಿ॥ | ಮುಂಡರಗಿ ॥ತಾ॥ | ಅಕ್ಕಸಾಲಿ |
| ೩೨. | ಶಾಂತವ್ವ ಯಮನೂರಪ್ಪ ಅಕ್ಕಸಾಲಿ | ೪೪ | ಮುರಡಿ ತಾಂಡಾ ಗದಗ ॥ಜಿ॥ | ಮುಂಡರಗಿ ॥ತಾ॥ | ಅಕ್ಕಸಾಲಿ |
| ೩೩. | ಶಾಂತಾಬಾಯಿ ಬಾಬು ಪತ್ತಾರ | ೪೫ | ಸನಾರ ತಾಂಡಾ | ಬಿಜಾಪುರ | ಸನಾರ |
| ೩೪. | ಹನುಮಸಿಂಗ ಜೈಯಸಿಂಗ ಪತ್ತಾರ | ೬೦ | ಸನಾರ ತಾಂಡಾ | ಬಿಜಾಪುರ | ಸನಾರ |

| ಕ್ರಸಂ. | ಹೆಸರು | ವಯಸ್ಸು | ಊರು | ತಾಲ್ಲೂಕು/ಜಿಲ್ಲೆ | ಉದ್ಯೋಗ |
|---|---|---|---|---|---|
| ೩೫. | ಹೀರಾಬಾಯಿ ಲಕ್ಷ್ಮಣ ರಾಠೋಡ | ೫೦ | ಬಾಯಿಕಟ್ಟಿ ತಾಂಡಾ | ಬಿಜಾಪುರ | |
| ೩೬. | ಶಾಂತಿಬಾಯಿ ಕಾಸ್ಯಾ ನಾಯಕ | ೩೮ | ಸಂಡೂರು | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೩೭. | ಗೌರಿಬಾಯಿ ಹನುಮ ನಾಯಕ | ೪೬ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೩೮. | ಸೋಮಿಬಾಯಿ ಲಕ್ಷ್ಮ ನಾಯಕ | ೪೯ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೩೯. | ಹೇಮಾವತಿ ಲಾವಜಿ ನಾಯಕ | ೪೯ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೪೦. | ಲಕ್ಷ್ಮೀಬಾಯಿ ರಾಮಲಾ ನಾಯಕ | ೪೦ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೪೧. | ತಾರಾಬಾಯಿ ಡಾಕ್ಯಾ ನಾಯಕ | ೪೮ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೪೨. | ಪಾರ್ವತಿ ಲಕ್ಷಮಾ ನಾಯಕ | ೩೭ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೪೩. | ಸೋಮಿಬಾಯಿ ಬಾಬು ನಾಯಕ | ೪೫ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೪೪. | ಪಾರುಬಾಯಿ ರಾಜಾ ನಾಯಕ | ೩೫ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೪೫. | ಗೌರಿಬಾಯಿ ಕೃಷ್ಣ ನಾಯಕ | ೪೦ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೪೬. | ಕಾಶೀಬಾಯಿ ಜಗ್ಗು ನಾಯಕ | ೪೧ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೪೭. | ವಾಲಿಬಾಯಿ ವೆಂಕ್ಯಾ ನಾಯಕ | ೩೭ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೪೮. | ಗಂಗೂಬಾಯಿ ತುಕಾ ನಾಯಕ | ೨೬ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |

| ಕ್ರಸಂ. | ಹೆಸರು | ವಯಸ್ಸು | ಊರು | ತಾಲ್ಲೂಕು/ಜಿಲ್ಲೆ | ಉದ್ಯೋಗ |
|---|---|---|---|---|---|
| ೪೯. | ಪಾಪಾಬಾಯಿ ನಾಯಕ | ೫೦ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೫೦. | ಚಾಳಿಬಾಯಿ ನಾಯಕ | ೪೦ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೫೧. | ಸೀತಾಬಾಯಿ ಬಾಬು ನಾಯಕ | ೫೫ | ಸುಶೀಲಾ ನಗರ | ಸಂಡೂರು॥ತಾ॥ ಬಳ್ಳಾರಿ ॥ಜಿ॥ | ಕಸೂತಿ |
| ೫೨. | ಮೂರ್ತಿ ಭೀಮಪ್ಪ ಅಕ್ಕಸಾಲಿ | ೫೦ | ಕಡ್ಡಿರಾಂಪುರ ತಾಂಡಾ | ಹೊಸಪೇಟೆ॥ತಾ॥ ಬಳ್ಳಾರಿ ॥ಜಿ॥ | ಅಕ್ಕಸಾಲಿಗ |
| ೫೩. | ಪ್ರೇಮಾಬಾಯಿ ಮೋಹನ ನಾಯಕ | ೪೬ | ಮಹಾಲ ತಾಂಡಾ | ಬಿಜಾಪುರ | ಗೃಹಿಣಿ |
| ೫೪. | ಗಂಗೂಬಾಯಿ ಚಾನು ರಾಠೋಡ | ೫೩ | ಮಹಾಲ ತಾಂಡಾ | ಬಿಜಾಪುರ | ಕಸೂತಿ |
| ೫೫. | ರುಕುಮಾಬಾಯಿ ನೇರು ನಾಯಕ | ೩೯ | ಮಹಾಲ ತಾಂಡಾ | ಬಿಜಾಪುರ | ಕಸೂತಿ |
| ೫೬. | ಶಾಂತಾಬಾಯಿ ರತನಸಿಂಗ ರಾಠೋಡ | ೫೫ | ಮಹಾಲ ತಾಂಡಾ | ಬಿಜಾಪುರ | ಕಸೂತಿ |
| ೫೭. | ಶಾಂತಾಬಾಯಿ ರತನಸಿಂಗ ರಾಠೋಡ | ೫೫ | ಮಹಾಲ ತಾಂಡಾ | ಬಿಜಾಪುರ | ಕಸೂತಿ |
| ೫೮. | ಅನಿತಾ ಶ್ರೀಶೈಲ ಜಾದವ | ೩೨ | ಮಹಾಲ ತಾಂಡಾ | ಬಿಜಾಪುರ | ಕಸೂತಿ |
| ೫೯. | ಸೋನಾಬಾಯಿ ಲಾಲಸಿಂಗ ರಾಠೋಡ | ೬೭ | ಮಹಾಲ ತಾಂಡಾ | ಬಿಜಾಪುರ | ಕಸೂತಿ |
| ೬೦. | ಗಂಗೂಬಾಯಿ ಲಚ್ಚು ಚವ್ಹಾಣ | ೫೨ | ಮಹಾಲ ತಾಂಡಾ | ಬಿಜಾಪುರ | ಕಸೂತಿ |
| ೬೧. | ಲಾಲಿಬಾಯಿ ಟೋಪು ಜಾದವ | ೮೩ | ತೋರವಿ ತಾಂಡಾ | ಬಿಜಾಪುರ | ಕಸೂತಿ |
| ೬೨. | ಜಮಣಾಬಾಯಿ ಉಮಲು ನಾಯಕ | ೮೦ | ಮಹಾಲ ತಾಂಡಾ | ಬಿಜಾಪುರ | ಕಸೂತಿ |
| ೬೩. | ಸುರೇಶ ರಾಠೋಡ | ೫೫ | ಕಳಸಾಪುರ ತಾಂಡಾ | ಗದಗ | ವ್ಯಾಪಾರಸ್ಥ |
| ೬೪. | ಧನಂಜಯ ಪೂಜಾರ | ೭೯ | ಪಾಪನಾಶಿ ತಾಂಡಾ | ಗದಗ | ಒಕ್ಕಲುತನ |
| ೬೫. | ಸೋಮಪ್ಪ ಎನ್. ರಾಠೋಡ | ೫೫ | ಕಳಸಾಪುರ ತಾಂಡಾ | ಗದಗ | ವ್ಯಾಪಾರಸ್ಥ |
| ೬೬. | ಜೈನಿ ರಾಬರ್ಟ್ ಗೀಸಿಂಕ್ | ೩೨ | ಹಂಪಿ | ಬಳ್ಳಾರಿ | ಗೃಹಿಣಿ |
| ೬೭. | ಭಜನಿ ನಾಯಕ | ೬೦ | ದೋಣಿ ತಾಂಡಾ | ಗದಗ | ಒಕ್ಕಲುತನ |
| ೬೮. | ಕುಬೇರಪ್ಪ ಬಿ. ಪವಾರ | ೫೪ | ಬೆಳಧಡಿ ತಾಂಡಾ | ಗದಗ | ಒಕ್ಕಲುತನ |

| ಕ್ರಸಂ. | ಹೆಸರು | ವಯಸ್ಸು | ಊರು | ತಾಲ್ಲೂಕು/ಜಿಲ್ಲೆ | ಉದ್ಯೋಗ |
|---|---|---|---|---|---|
| ೬೯. | ಹಿರಿಯಾ ಚಂದ್ಯಾ ನಾಯಕ | ೫೯ | ಕಡ್ಡಿರಾಂಪುರ ತಾಂಡಾ | ಹೊಸಪೇಟೆ ಬಳ್ಳಾರಿ | ವ್ಯಾಪಾರಸ್ಥ |
| ೭೦. | ಜಮಣಬಾಯಿ ಭೀಮಸಿಂಗ್ ನಾಯಕ | ೬೦ | ಬಸರಹಳ್ಳಿ ತಾಂಡಾ | ಬಳ್ಳಾರಿ | ಗೃಹಿಣಿ |
| ೭೧. | ರಮಣಿಬಾಯಿ ನೆಮ್ಯ ನಾಯಕ | ೫೦ | ಬಸರಹಳ್ಳಿ ತಾಂಡಾ | ಬಳ್ಳಾರಿ | ಗೃಹಿಣಿ |
| ೭೨. | ಗುಜರಿಬಾಯಿ ಯಂಕ ನಾಯಕ | ೪೩ | ಬಸರಹಳ್ಳಿ ತಾಂಡಾ | ಬಳ್ಳಾರಿ | ಗೃಹಿಣಿ |
| ೭೩. | ತಿಪ್ಪಿಬಾಯಿ ರಾಠೋಡ | ೪೬ | ಮುರಡಿ ತಾಂಡಾ | ಗದಗ | ಗೃಹಿಣಿ |
| ೭೪. | ಧರ್ಮಿಬಾಯಿ ಧರ್ಮ ನಾಯಕ | ೫೦ | ಕಾಲ್ವಿ ತಾಂಡಾ | ಬಳ್ಳಾರಿ | ಗೃಹಿಣಿ |

❑❑❑

## ೪. ಪ್ರಮುಖ ಕರಕುಶಲ ಕಲಾಕೇಂದ್ರಗಳ ವಿವರ

೧. **ಸಂಡೂರು ಕುಶಲ ಕಲಾಕೇಂದ್ರ**

ಸಂಡೂರು

ಜಿಲ್ಲೆ-ಬಳ್ಳಾರಿ

ದೂ. ೦೮೩೯೫-೨೬೦೨೦೮ / ೨೬೧೨೨೧

Email : kushalakala@gmail.com

Web : www.kushalakalasandur.com

೨. **ಸಬಲಾ**

'ಸಮತಾ' ಬಿಲ್ಡಿಂಗ್

ಕೀರ್ತಿನಗರ

ಬಸವನ ಬಾಗೇವಾಡಿ ರಸ್ತೆ

ಬಿಜಾಪುರ

ಬಿಜಾಪುರ ಜಿಲ್ಲೆ

ದೂ. ೦೮೩೫೨-೨೭೮೨೦೪

ಮೊ. ೯೪೪೮೧ ೧೮೨೦೪

Email : info@sabalaindia. com

Web : www.sabalaindia. com

೩. **ಸೂರ್ಯ ಲಂಬಾಣಿ - ಬಂಜಾರಾ ವುಮೆನ್ ವೆಲ್‌ಫೇರ್ ಟ್ರಸ್ಟ್**

ವಾರ್ಡ್-IVC - ಮನೆ-೧೨೫

ಕಡ್ಡಿರಾಂಪುರ ೫೮೩ ೨೩೯

ದೂ. ೦೮೩೯೪-೨೧೦೨೧೫

ಮೊ. ೯೪೮೧೧ ೭೪೪೫೧

Email : laxmijan@suryasgarden.org

Web : www.suryasgarden.org



## ಕಸೂತಿ ಕಲಾವಿದರು



ರುಕಮಾಬಾಯಿ ನೇರು ನಾಯಕ



ಶಾಂತಾಬಾಯಿ ರತನಸಿಂಗ ರಾಠೋಡ



ಅನಿತಾ ಶ್ರೀಶೈಲ ಜಾಧವ





## ಕಸೂತಿ ಕಲಾವಿದರು







ಗಂಗುಬಾಯಿ ಲಚ್ಚು ಚವ್ಹಾಣ





ಮಾತೋ ಗುತೇರೊ (ಕುದಲೂ ಹೆಣೆಯುತ್ತಿರುವ ಲಂಬಾಣಿ ಮಹಿಳೆ)



ಕೇಶಾಲಂಕಾರ

